 ಶ್ರೀ 



ಉಜ್ಜಯಿನೀ ಜಗದ್ಗುರು.

# ಶ್ರೀ ಸಿದ್ಧಲಿಂಗೇಶ ವಿಜಯ





ಗ್ರಂಥಕರ್ತರು:
ಹಿರೇಹಡಗಲಿ ಪುರಾಣಿಕಮಠದ
ವೇ|| ವಿರೂಪಾಕ್ಷ ಶಾಸ್ತ್ರಿಗಳು.





೧೯೪೪

.... ಶ್ರೀ ....

ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ

ಜಗದ್ಗುರು

# ಶ್ರೀ ಸಿದ್ಧಲಿಂಗೇಶ ವಿಜಯ



ಗ್ರಂಥಕರ್ತರು:

ಹಿರೇಹಡಗಲಿ ಪುರಾಣಿಕ ಮಠಾಧ್ಯಕ್ಷ

ವೇ|| ವಿರೂಪಾಕ್ಷ ಶಾಸ್ತ್ರಿಗಳು.



೧೯೪೪



ಗದಗ ಶ್ರೀ ಶಿವಾನಂದ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

 ಬೆಲೆ: ರೂ. ೨—೮—೦

ಲಿಂಗೋದ್ಭವರಾದ



ಜಗದ್ಗುರು ರೇಣುಕಾದಿ ಪಂಚಾಚಾರ್ಯರು

*No. 2388*
*22-9-43.*

ನೋಹರು

॥ ಶ್ರೀ ಜಗದ್ಗುರು ಪಂಡಿತಾರಾಧ್ಯೋ ವಿಜಯತೆ ॥

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀ ೧೧೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿನಾಂ ಸನ್ನಿಧಾನೇನ—

# ಶುಭಸಂದೇಶ



ಶ್ರೀ ಜಗದ್ಗುರು ಸಿದ್ಧಲಿಂಗ ವಿಜಯವು ಇತಿಹಾಸ ಗ್ರಂಥವು. ಇದನ್ನು ಈ ಗ್ರಂಥಕರ್ತರಿಂದ ಓದಿಸಿ, ವಿಷಯಗಳನ್ನು ಪೂರ್ಣವಾಗಿ ಗ್ರಹಿಸಿದ್ದಾಯಿತು. ಇದರಲ್ಲಿ ಆ ಮಹಾತ್ಮರು ಆಯಾಯ ಸಮಯದಲ್ಲಿ ಉಪದೇಶಿಸಿದ ಅನೇಕ ಧಾರ್ಮಿಕ ವಿಚಾರಗಳು ಇಹ-ಪರಗಳಿಗೆ ಸಾಧನಗಳಾಗಿವೆ. ಈ ಪುಣ್ಯ ಮೂರ್ತಿಯ ಚರಿತೆಯಿಂದ ಒಟ್ಟಾಗಿ ಸಂಗ್ರಹಿಸುವದಾದರೆ ಮನುಷ್ಯತೆಗೆ ಬೇಕಾಗುವ ಸಕಲ ಸಾಮಗ್ರಿಯೂ ಇದರಲ್ಲಿವೆ.

ಗ್ರಂಥದ ಶೈಲಿಯು ಸರ್ವರಿಗೂ ಬೋಧವಾಗುವಂತೆ ಬೋಧಭಾಷೆಯಲ್ಲಿದೆ. ಇದರಿಂದಾಗಿ ಈ ಗ್ರಂಥವು ಪಂಡಿತ-ಪಾಮರರೆಂಬ ಭೇದವಿಲ್ಲದೆ ಸರ್ವಾದರಣೀಯವಾಗಿದೆ.

ಗ್ರಂಥಕರ್ತರು ಇಷ್ಟಿ ಪ್ರಕಾರ ಕ್ರಮವಾಗಿ ವಿಷಯಗಳನ್ನು ಸಂಗ್ರಹಿಸುವಲ್ಲಿ ಬಹಳ ಕಷ್ಟಪಟ್ಟಿದ್ದಾರೆ. ಕಷ್ಟಕ್ಕೆ ಅನುಕೂಲವಾಗಿ ಇಷ್ಟು ಬೇಗನೆ ಈ ಗ್ರಂಥವು ಮುದ್ರಣವಾದುದು ಕರ್ನಾಟಕ ಸಾಹಿತ್ಯದ ಸದ್ಭಾಗ್ಯವೆನ್ನಬಹುದು. ಗ್ರಂಥಕರ್ತರ ಶ್ರಮಕ್ಕೆ ಸಾಹಿತ್ಯ ಸಮಾಜವೇ ಋಣಿಯಾಗಿದೆ. ಆದರೆ ಇದರ ಪ್ರಚಾರವು ಚಿಕ್ಕ ದೊಡ್ಡ ಎಲ್ಲಾ ಹಳ್ಳಿ ಪಟ್ಟಣಗಳಲ್ಲಿ ವಿಶೇಷವಾಗಿ ನಡೆದರೆ ಈ ಮಹಾತ್ಮರ ಸೇವೆಯನ್ನು ಮಾಡಿದಂತಾಗುವಲ್ಲಿ ಸಂದೇಹವಿಲ್ಲ. ಕನ್ನಡಿಗರಾದ ಸರ್ವ ಮತದವರೂ ಇದನ್ನು ಸಂಪೂರ್ಣವಾಗಿ ಓದಿ ( ಅಥವಾ ಅಕ್ಷರಬಾರದವರು ಓದಿಸಿ ) ಪುಣ್ಯವನ್ನು ಸಂಪಾದಿಸಲೆಂದು ಆಶಿಸುವೆವು.

ಮುಕ್ಕಾಂ- ಮೂಸೂರು,
(ಡಿ. ಧಾರವಾಡ)
ತಾ. ೨೨—೯—೪೩.

ಇತ್ಯಾಶಿಷಃ

# " ಶ್ರೀ ವಿಜಯ "ಕ್ಕೆ ನನ್ನ ಮುಡುಪು

ಯೋಗಿಗಳ ಬೀಡಾದ ನಮ್ಮೀ ಭರತಖಂಡವು ಪುಣ್ಯಚರಿತೆಗಳ ತೇಜೋಮಯ ತಾರೆಗಳಿಂದ ಬೆಳಗುತಿದೆ. ಬೆಳಕು ಸಾಕಷ್ಟಿದೆ. ಕಣ್ಣಿದ್ದು ಕುರುಡನಂತಾಗಿದೆ ಈ ಭಾರತೀಯನ ಭವಣೆ. ಅಂತರಂಗದಲ್ಲಡಗಿದ ಬೆಳಕು ಹೊರಸೂಸಿ ಕಣ್ಣಿನ ಮೇಲಣ ಪರಿಯನ್ನು ಹರಿದು ಕುರುಡಗಣ್ಣನ್ನು ಕಾಣುವ ಕಣ್ಣಿನಂತೆ ಮಾಡಿ ಬೆಳಕು ತೋರಿಸುವ ( Guiding star ) ನಮಗೆ ಬೇಕಿದೆ.

ಯೋಗಿಗಳ ಜೀವನವು ಜಗತ್ತಿನ ಕಲ್ಯಾಣಕ್ಕಾಗಿ ಮುಡುಪಾಗಿದೆ ಅಸಾಧಾರಣ ಸಾಮರ್ಥ್ಯದಿಂದುಕ್ಕಿದ ಕಿಡಿಗಳಿಂದ ಅನೇಕ ಶಾಸ್ತ್ರೀಯ, ತಾತ್ವಿಕ ಬೋಧನೆಗಳು ಹೊರಡುವದು ಯೋಗಿಗಳ ಚಿತ್ಪ್ರಭಾಶಕ್ತಿಯಿಂದಲ್ಲದೆ ಬೇರೆ ಇಲ್ಲ. ಆಗಾಗ್ಗೆ ಜಗಜ್ಜೀವನದ ಮೋಡದಲ್ಲಿ ಮಿಂಚಿನ ಸೆಳಕು ಹೊಳೆಯುವಂತೆ ಯೋಗಿಗಳು ತೋರಿ ಅಡಗುತ್ತಾರೆ.

ಕೇವಲ ತನ್ನನುದ್ಧಾರಮಾಡಿಕೊಂಡು ಹೋಗುವ ಯೋಗಿಗಿಂತ ಜಗತ್ತಿನ ಲೋಪ-ದೋಷಗಳನ್ನು ಹೋಗಲಾಡಿಸಿ ಅಜ್ಞಜನರ ಉದ್ಧಾರ ಮಾಡಲು ಹೆಣಗಾಡುವ ಯೋಗಿಯು ಶ್ರೇಷ್ಠ ಯೋಗಿಯು. ಅಂಥ ಯೋಗಿಗಳಲ್ಲಿ ಉಜ್ಜಯಿನೀ ಶ್ರೀ ಸದ್ಧರ್ಮ ಸಿಂಹಾಸನಾಧೀಶ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು ಒಬ್ಬರಾಗಿದ್ದಾರೆ. ಈ ಮಹಿಮಾಶಾಲಿ ತಪೋನಿಧಿಗಳ ಪುಣ್ಯಚರಿತ್ರವು ಈವರೆಗೆ ಬೆಳಕಿಗೆ ಬಾರದಿದ್ದುದು ನಮ್ಮಗಳ ದೌರ್ಭಾಗ್ಯ. ಅವರ ಪುಣ್ಯಮಯ ಜೀವನವು ವೀರಶೈವರಿಗಷ್ಟೇ ಅಲ್ಲದೆ ಇತರರಿಗೂ ಮಾರ್ಗದರ್ಶಕವಾಗಿದೆ.

ಜಗದ್ಗುರುಗಳ ಪ್ರಫುಲ್ಲಿತ ಜೀವನವು ಉಗ್ರ ತಪಸ್ಸು, ಪಂಚ ಪೀಠೋದ್ಧಾರ, ವಿದ್ಯಾಪ್ರಸರಣೆ, ಶಿವಯೋಗಲೀಲೆ ಮುಂತಾದ ಅತುಲ ಸಾಧನೆಯಿಂದ ತುಂಬಿ ತುಳುಕಿದ್ದಿತು. ಪಂಚಾಚಾರ್ಯರ ಸಮ್ಮೇಲನದ ಸಹಾಯದಿಂದ ಕಾಶಿ, ಹಿಮವತ್ಕೇದಾರ, ಉಜ್ಜಯಿನಿ, ಶ್ರೀಶೈಲ, ರಂಭಾಪುರಿ ( ಬಾಳೆಹೊನ್ನೂರ ) ಪುಣ್ಯಕ್ಷೇತ್ರಗಳಲ್ಲಿ ಪ್ರಜ್ವಲಿಸುವ ಜಗದ್ಗುರು ಪಂಚಕೇಂದ್ರಪೀಠಗಳ ಅಧಿಪತಿಗಳೊಳಗೆ ನಿಕಟ ಸಂಬಂಧವನ್ನು ಬೆಳಿಸಿ ನೆಮ್ಮದಿಯನ್ನುಂಟುಮಾಡಿದ ಶ್ರೇಯಸ್ಸು ಈ ಜಗದ್ಗುರುಗಳಿಗಿದೆ. ಸಮಾಜಸೇವೆಗಾಗಿಯೇ ತಮ್ಮ ಕಾಯವನ್ನು ಸವಿಸಿದ ಈ ಶಿವಯೋಗಿಯ ತೇಜಸ್ಸು ಒಳ್ಳೇ ಉಗ್ರವಾಗಿತ್ತು. ಇವರ ಕರ್ತೃತ್ವ ಶಕ್ತಿಯಿಂದಲೇನೆ

ವೀರಶೈವ ಸಮಾಜದಲ್ಲಿ ಒಂದು ವಿಧ ಚೈತನ್ಯವು ಹುಟ್ಟಿ ಧರ್ಮದ ನಿಜತತ್ವಗಳು ಹೆಚ್ಚಾಗಿ ಹೊರಬೀಳತೊಡಗಿದವು. ವೀರಶೈವರ ಮಕುಟಗ್ರಂಥವಾಗಿದ್ದ ಮತ್ತು ಶಿವಜೀವರ ( ಲಿಂಗಾಂಗ ) ಐಕ್ಯಸಂಬಂಧದ ಮೆಟ್ಟಲುಗಳನ್ನು ಸ್ವಾರಸ್ಯವಾಗಿ ಮತ್ತು ಸಿದ್ಧಾಂತರೂಪವಾಗಿ ಬೋಧಿಸಿದ ಏಕೈಕ ಗ್ರಂಥ ಸಿದ್ಧಾಂತ ಶಿಖಾಮಣಿಯು ಇವರ ಪ್ರಾಣಗ್ರಂಥವಾಗಿದ್ದಿತು.

ವೀರಶೈವ ಧರ್ಮಗ್ಲಾನಿಗೆ ಗುರುವರ್ಗದವರು ಹೆಚ್ಚಾಗಿ ಹೊಣೆಗಾರರಿರುತ್ತಾರೆಂದು ಕಂಡುಹಿಡಿದು ಪಟ್ಟಾಧಿಕಾರಿಗಳ ಸಮ್ಮೇಲನ, ಗುರುವರ್ಗೋತ್ತೇಜಕ ಸಂಘ ಮುಂತಾದ ಸಂಸ್ಥೆಗಳನ್ನು ಜಗದ್ಗುರುಗಳವರು ಅಲ್ಲಲ್ಲಿ ಏರ್ಪಡಿಸಿದರು. ಗುರುವರ್ಗದವರು ತದ್ವಾರಾ ವೀರಶೈವ ಸಮಾಜವು ಚೇತರಿಸಿಕೊಂಡಿದ್ದರೆ ಅದು ಜಗದ್ಗುರುಗಳವರ ಕರ್ತೃತ್ವಶಕ್ತಿಯ ಕಳೆಯಿಂದಲೇ ಎಂದು ಒತ್ತಿ ಹೇಳಬಹುದು.

ಸನಾತನ ವೀರಶೈವ ತತ್ವಗಳ ಮಬ್ಬುಳಿಯೇ ಭೂಮಿಗಿಳಿದಿದೆ ಎಂಬಂತೆ ತೋರುವ ಜಗದ್ಗುರುಗಳ ವಿಷಯವಾಗಿ ನನ್ನಂಥ ಅಲ್ಪ ವಿಷಯಗ್ರಾಹಿಯು ಹೆಚ್ಚಾಗಿ ಹೇಳಲು ಸಾಧ್ಯವಿದೆಯೇ ? ನನ್ನ ಆಯುಷ್ಯದ ತಮೋರಾಶಿಯಲ್ಲಿ ವಿದ್ಯುಚ್ಛಕ್ತಿಯ ಬೆಳಕು ಬಿದ್ದಂತೆ ಈ ಜಗದ್ಗುರು ಸಾರ್ವಭೌಮರ ಶಿವಕಳೆಯನ್ನು ನಾನೊಮ್ಮೆ ನೋಡಿ ಧನ್ಯನಾದೆನು. ತಪೋಜ್ವಾಲೆಯಿಂದ ಸುಟ್ಟು ಗಟ್ಟಿಗೊಂಡ ಆ ಮಹಿಮನ ಕೃಶಕಾಯದಲ್ಲಿ ಕಾಂತಿಯು ಉಕ್ಕುತ್ತಿದ್ದಿತು. ಅವರೆದುರಿಗೆ ಗಟ್ಟಿಯಾಗಿ ಮಾತಾಡಲು ಯಾರಿಗೂ ಧೈರ್ಯ ಸಾಲಲಿಲ್ಲ. ತಮ್ಮ ಸಂಸ್ಥಾನದ ಆಡಳಿತೆಯಲ್ಲಿ ನಿಷ್ಠುರತೆ, ಭಕ್ತರ ಬೇಡಿಕೆಗಳಿಗೆ ದಾಕ್ಷಿಣ್ಯ ಮುಂತಾದ ಗುಣಗಳು ಅವರಲ್ಲಿ ಒಡೆದು ಕಾಣುತ್ತಿದ್ದವು. ಅನೇಕ ಲೀಲೆಗಳನ್ನು ಮಾಡಿ ಭಕ್ತರ ಇಷ್ಟಾರ್ಥವನ್ನು ಪೂರೈಸಿದರು. ಜಗದ್ಗುರುಗಳ ಆತ್ಮಾಂಬರದಲ್ಲಿ ಸಂಕಲ್ಪಶಕ್ತಿಯು ( Will power ) ಯಾವಾಗಲೂ ಜಾಗ್ರತವಾಗಿದ್ದಿತು. ಇಂಥ ಮಹಾಮಹಿಮನ ಪುಣ್ಯಚರಿತ್ರ ಕುಸುಮವು ತಡವಾಗಿ ಅರಳಿದಾಗ್ಯೂ ಸರ್ವರಿಗೆ ಸುವಾಸನೆಯನ್ನು ಬೀರುವದಿದೆಯೆಂದು ಬೇರೆ ಹೇಳಬೇಕಿಲ್ಲ.

ಗ್ರಂಥಕರ್ತ ಪಂ। ವೇ। ವಿರೂಪಾಕ್ಷಶಾಸ್ತ್ರಿಗಳು ಪುರಾಣಿಕಮಠ ಹಿರೇಹಡಗಲಿ ಇವರು ವೀರಶೈವ ಗುರುವಂಶಜರಿದ್ದು ಚಿಕ್ಕಂದಿನಿಂದಲೇ ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಸಂಸ್ಥಾನದಲ್ಲಿ ಸೇವೆ ಸಲ್ಲಿಸಿದರು. ಜಗದ್ಗುರುಗಳ ಜೊತೆಯಲ್ಲಿ ಬಹುಕಾಲದವರೆಗೆ ಇದ್ದದರಿಂದ ಅವರ ಜೀವನದ ತಿಳಲನ್ನು ಸೊಗಸಾಗಿ ಸವಿದವರೆಂದು ಧಾರಾಳವಾಗಿ ಹೇಳಬಹುದು. ಇದಲ್ಲದೆ ಜಗದ್ಗುರುಗಳ ಅಸಾಧಾರಣ ಜೀವನಕ್ರಮವನ್ನು ಚನ್ನಾಗಿ ಅರಿತವರು. ) ಹೆಚ್ಚಾಗಿ ಶ್ರಮಬಟ್ಟು ಜಗದ್ಗುರುಗಳವರ ಬಾಲ್ಯ, ಯೌವನ, ಅಪರ ವಯಸ್ಸಿನಲ್ಲಿಯ ಕಾರ್ಯಗಳ ವರದಿ

ಯನ್ನು ಮತ್ತು ತಕ್ಕ ಬೇರೆ ಬೇರೆ ಚಿತ್ರಗಳನ್ನು ದೊರೆಕಿಸಿದ್ದು ಅವರ ಅಸಾಧಾರಣ ಸಾಹಸದ ಹೆಗ್ಗುರಿಯಾಗಿದೆ. ಜಗದ್ಗುರುಗಳ ಮಾನ್ಯಕಾರ್ಯಗಳ ವಿವರಗಳನ್ನು ಕೊಡುತ್ತ ಓದುಗರಿಗೆ ವೀರಶೈವ ಧರ್ಮತತ್ವಗಳ ಅರಿವು ಆಗಬೇಕೆಂಬ ದೃಷ್ಟಿಯಿಂದ ಈ ಗ್ರಂಥವು ಬರೆಯಲ್ಪಟ್ಟಿದೆಯೆಂಬುದು ಸ್ಪಷ್ಟವಾಗುತಿದೆ. ಹೀಗೆ ಬರೆಯಲ್ಪಟ್ಟ ಗ್ರಂಥಗಳಿಗೆ ಗಣನೆ ಹೆಚ್ಚು. ಅಂಥ ಗ್ರಂಥಗಳೇ ಜೀವನಬೋಧ, ರಂಗಸ್ಥಲಗಳು. ಜಗದ್ಗುರುಗಳ ಜೀವನ ನಿಲುಗನ್ನಡಿಯಲ್ಲಿ ವೀರಶೈವತತ್ವಗಳ ನೋಟವನ್ನು ಕಾಣುವ ಸೌಭಾಗ್ಯವನ್ನು ಈ ಪುಟ್ಟಗ್ರಂಥವು ಕೊಡುತಿದೆ. ಸರಳ ಶೈಲಿಯಿಂದ ವಿಷಯ ವಿಭಾಗವನ್ನು ಮಾಡಿ ಓದುಗರಿಗೆ ಬೇಸರವನ್ನುಂಟುಮಾಡದೆ ಸಂಗತಿಗಳನ್ನು ಸಂಗ್ರಹಿಸಿದ್ದು ಗ್ರಂಥಕರ್ತರ ಬುದ್ಧಿವಂತಿಕೆಯ ನಿದರ್ಶನ.

ಎಲ್ಲರೂ ವಿಶೇಷತಃ ವೀರಶೈವರು ಅವಶ್ಯವಾಗಿ ಓದತಕ್ಕ ಗ್ರಂಥವಿದು. ವೀರಶೈವ ಪೀಠಾಧಿಪತಿಗಳ ಚರಿತ್ರವನ್ನು ಐತಿಹಾಸಿಕ, ಸಾಮಾಜಿಕ, ಧಾರ್ಮಿಕ, ಪಾರಮಾರ್ಥಿಕ ದೃಷ್ಟಿಯಿಂದ ಅಚ್ಚುಕಟ್ಟಾಗಿ ಚಿತ್ರಿಸಿದ ಗ್ರಂಥಗಳು ಅತಿ ವಿರಳ. ಕನ್ನಡ ನುಡಿಯ ಸೇವೆಯೊಡನೆ ಧರ್ಮದ ಸೇವೆ ಮಾಡಿದ ಪಂಡಿತರ ಶ್ರಮಕ್ಕೆ ಕನ್ನಡಿಗರ ಒಲುಮೆಯೇ ಬೆಲೆಯಾಗಿದೆಯಲ್ಲವೆ !

ದಾರುಕಮಂದಿರ,
ಹುಬ್ಬಳ್ಳಿ
ತಾ. ೧೫—೬—೧೯೪೪

**ಪಿ. ಆಯ್. ಹಿರೇಮಠ,**
ಹಾಯಕೋರ್ಟ ವಕೀಲ
“ ಸಮರ ಸಂಜಯ ” ಸಂಪಾದಕರು, ಹುಬ್ಬಳ್ಳಿ.



# ಪ್ರಸ್ತಾವನೆ



ಶ್ರೀಮತ್ಪರಶಿವನ ಲೀಲಾನಾಟಕ ರಂಗಸ್ಥಲವಾದ ಈ ಪುಣ್ಯಭೂಮಿಯಲ್ಲಿ ವಿರಾಜಿಸುವ ಕರ್ನಾಟಕ ದೇಶವು ಧರ್ಮೋದ್ಧಾರಕರಾದ ಅನೇಕ ಮಹಾನುಭಾವರ ಉಗಮಸ್ಥಾನವಾಗಿದೆ. ಈ ದೇಶದೊಳುದಯರಾದಷ್ಟು ಮಹಾತ್ಮರೂ ಧರ್ಮೋದ್ಧಾರಕರೂ ಇತರ ಯಾವ ದೇಶದಲ್ಲೂ ಇಲ್ಲವೆಂದು ಹೇಳಬಹುದು— "ಕೆಸರಿನೊಳು ಕಮಲಗಳುದ್ಭವಿಸುವಂತೆ" ನಮ್ಮ ನಾಡಿನ ಹಳ್ಳಿಪಳ್ಳಿಗಳಲ್ಲಿಯೇ ಒಬ್ಬೊಬ್ಬ ಮಹಾನುಭಾವರೂ, ಶಿವಯೋಗಿಗಳೂ, ಸಾಧು-ಸಂತರೂ, ತ್ಯಾಗಿಗಳೂ ಅವತರಿಸಿ ಅನೇಕ ವಿಧದಿಂದ ತಮ್ಮ ಪ್ರಭಾವಗಳ ನಡೆಯಿಸಿ ಜಗತ್ತಿನ ಕಲ್ಯಾಣವನ್ನು ಬಯಸುತ್ತಾ "ನರಃಪತಿತಕಾಯೋಪಿ । ಯಶಃ ಕಾಯೇನ ಜೀವತಿ" ಎಂಬುಕ್ತಿಯಂತೆ ಮಹಾಕೀರ್ತಿಶರೀರಿಗಳಾಗಿ ತೆರಳಿದರು.

ಅಂತಹ ಮಹಾನುಭಾವರೆಂಬ ರತ್ನಮಾಲಿಕೆಯಲ್ಲಿ ಈ ನಮ್ಮ ಸಚ್ಚರಿತ್ರಾಧಿಪತಿಗಳಾದ (ಶಿವೈಕ್ಯ) ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರುಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳೆಂಬುವವರು ದಿವ್ಯಶಿಖಾರತ್ನದಂತೆ ಪರಿಶೋಭಿಸುವರು. ಈ ಗುರುಸಾರ್ವಭೌಮರ ಮನೋನಿಗ್ರಹ, ಶಿವಪೂಜಾ ಪ್ರಭಾವ, ಸಮಾಜೋದ್ಧಾರಪ್ರೇಮ, ಧರ್ಮೋಪದೇಶ ಮೊದಲಾದ ಅಮೌಲ್ಯ ವಿಷಯಗಳು ಚಿರಸ್ಮರಣೀಯವಾಗಿರುವವು.

ಆದರೆ ನಮ್ಮ ದೇಶದಲ್ಲಿ ಪ್ರಸಿದ್ಧರಾದ ಅನೇಕ ಮಹಾನುಭಾವರ ಮತ್ತು ಭಕ್ತಮಾಹೇಶ್ವರರ ಚರಿತ್ರಗಳು ಮುದ್ರಿಸಿ ಪ್ರಸಿದ್ಧಮಾಡಲ್ಪಟ್ಟಿರುತ್ತವೆ. ಇವುಗಳಲ್ಲಿ ವೀರಶೈವ ಮತಸ್ಥಾಪಕ ಶ್ರೀ ಜ। ರೇಣುಕಾದಿ ಪಂಚಪೀಠಾಧೀಶ್ವರರ ಪರಂಪರಾಗತ ಜಗದಾಚಾರ್ಯರ ಸಚ್ಚರಿತ್ರಗಳು ಗೋಚರವಾಗದಿರುವದನ್ನು ಯೋಚಿಸಿದರೆ ಪ್ರತಿಯೊಬ್ಬ ವೀರಶೈವನಿಗೆ ವಿಷಾದವೆನಿಸಬಹುದು.

ಈ ವಿಷಯದಲ್ಲಿ ನಾನು ಆಲೋಚನೆ ಮಾಡುತ್ತಾ ಮಹಾತ್ಮರಾದ ಉ। ಜ। ಸಿದ್ಧಲಿಂಗಮಹಾಸ್ವಾಮಿಗಳವರ ಸಚ್ಚರಿತ್ರವನ್ನು ಬರೆಯಬೇಕೆಂಬುವಷ್ಟರಲ್ಲಿ ಗುರುಭಕ್ತಿಪರಾಯಣರಾದ ಕೆಲವರು ನೀವು ಉಜ್ಜಯಿನೀ ಮಹಾಸಂಸ್ಥಾನದಲ್ಲಿ ಕೆಲ ಕಾಲ ಇದ್ದವರು. ಆ ಮಹಾತ್ಮರ ಚರಿತ್ರವನ್ನು ಲಿಖಿಸಿ ಪ್ರಕಾಶಗೊಳಿಸಿದರೆ

ನಿಮ್ಮಿಂದಲೇ ಸಮಾಜಕ್ಕೊಂದು ವಿಧವಾದ ಉಪಕಾರವಾವಂತಾಗುವದೆಂದು ಮೇಲಿಂದ ಮೇಲೆ ಸೂಚನೆ ಮಾಡಿದ ಕಾರಣ ಈ ಮಹಾಚರಿತ್ರವನ್ನು ಬರೆಯಲು ದ್ಯುಕ್ತನಾಗಬೇಕಾಯಿತು.

ಈ ಮೊದಲೇ ನಾನು ಉ॥ ಮಹಾಸಂಸ್ಥಾನದಲ್ಲಿ ಕಾರಭಾರಿಯಾಗಿದ್ದ ಕಾಲದಲ್ಲಿ ಅನೇಕ ವಿಷಯಗಳನ್ನು ಸಂಗ್ರಹಿಸಿದುದಲ್ಲದೆ ೨ ಸಾವಿರ ಪ್ರಸಿದ್ಧ ಪತ್ರಿಕೆಗಳ ದ್ವಾರಾ ಮಹಾಶ್ರೀಗಳವರ ವಿಷಯಗಳನ್ನು ಬಲ್ಲವರು ತಿಳಿಸಬೇಕೆಂದು ವಿನಂತಿ ಮಾಡಿಕೊಳ್ಳಲು ಕೆಲವರು ಪತ್ರದ್ವಾರಾ ಶೃತಪಡಿಸಿದರು ಮತ್ತು ಪೂರ್ವದಲ್ಲಿ ಪ್ರಕಟವಾಗುತ್ತಿದ್ದ ಧಾರವಾಡ ಧರ್ಮತರಂಗಿಣೀ, ಮೈಸೂರು ಸ್ಟಾರ್, ಧಾ। ಕರ್ನಾಟಕ ಟಾಯಿಮ್ಸ ಮುಂತಾದ ಪತ್ರಿಕೆಗಳಿಂದ ಉತ್ತಮವಾದ ವಿಷಯಗಳನ್ನು ಸಂಗ್ರಹಿಸಿದೆನು. ಹಾಗು ಉಜ್ಜಯಿನೀ ಮಹಾಸಂಸ್ಥಾನದಲ್ಲಿ ಧೀಸಚಿವರಾಗಿದ್ದ ವಯೋವೃದ್ಧರಾದ ಬಿ. ಎಂ. ಗುರುಸಿದ್ಧ ಶಾಸ್ತ್ರಿಗಳವರಿಂದಲೂ, ಉಮಚಿಗಿ ವೇ। ಪಂ। ಶಂಕರ ಶಾಸ್ತ್ರಿಗಳವರಿಂದಲೂ, ಚಿತ್ರವಾಡಿಗಿ ಗುಗ್ರಿ ಹುಚ್ಚಪ್ಪನವರ ಡೈರಿಗಳಿಂದಲೂ ನಾನಾ ವಿಧವಾದ ಸಂಗತಿಗಳು ಸಮ್ಮಿಲಿತವಾದವು.

ನಮ್ಮ ವಿನಂತಿಯ ಪ್ರಕಾರ ಮಹಾಗಾಂವ ವೇ। ರುದ್ರಾರಾಧ್ಯಶಾಸ್ತ್ರಿಗಳೂ ಈ ಮಹಾಶ್ರೀಗಳವರು ಹಿಂದೆ ನೈಜಾಂ ಪ್ರಾಂತದಲ್ಲಿ ಸಂಚಾರಮಾಡಿದ ವಿವರಗಳನ್ನು ಶೋಧಿಸಿ ಬರೆದು ಕಳುಹಿಸಿದರು. ಹರಪನಹಳ್ಳಿ ಶಾವಳಿಗಿ ನಾಗಪ್ಪನವರು ೧ ಬ್ಲಾಕನ್ನು ಕಳುಹಿಸಿಕೊಟ್ಟರು. ಕೊಟ್ಟೂರು ಪಿ. ಎಂ. ಮರುಳಾರಾಧ್ಯರು ಪ್ರಥಮೋತ್ತೇಜಕರಾದುದರಿಂದ ಇವರಿಗೆ ತುಂಬಾ ಆಭಾರಿಯಾಗಿದ್ದೇನೆ.

ಈ ಮಹಾಗ್ರಂಥದೊಳಗೆ ಕೇವಲ ಧಾರ್ಮಿಕ, ಲೌಕಿಕ ವಿಷಯಗಳು ಹೆಚ್ಚು ವಿವರಿಸಲ್ಪಟ್ಟಿರುವದರಿಂದ ಈಗಿನ ನವೀನ ಸುಧಾರಕರೆಂಬ ಕಥೆ, ಕಾದಂಬರಿ ನಾಟಕಾದಿ ಗ್ರಂಥವಾಚನಾಭಿರುಚಿಯುಳ್ಳವರಿಗೆ ಇದು ಅಷ್ಟೊಂದು ರುಚಿಕರವಾಗಲಾರದೆಂದು ಭಾವಿಸುವೆನು. ಇದರಲ್ಲಿ ವೀರಶೈವಮತ ಸುಧಾರಣ ಮಾರ್ಗಗಳೂ, ಗುರುವರ್ಗೋದ್ಧಾರ ಪಂಚಪೀಠಗಳ ಪ್ರಾಚೀನ ದಾಖಲೆಗಳೂ, ಉತ್ತಮವಾದ ಧರ್ಮನಿರ್ಣಯಗಳು ಮುಂತಾದ ವಿಚಾರಗಳು ಪ್ರತಿಪಾದಿಸಲ್ಪಟ್ಟಿರುವವಲ್ಲದೆ ಮಹಾ ಗುರುವರ್ಯರ ನಾನಾವಿಧ ಉತ್ತಮವಾದ ಫೋಟೋಗಳು ಸೇರಿಸಿರುವದರಿಂದ ಈ ಗ್ರಂಥವು ಪ್ರತಿಯೊಬ್ಬ ವೀರಶೈವನಿಗೂ ಪೂಜಾ, ಪಠನ, ವಂದನ, ಧ್ಯಾನಾದಿಗಳಿಗೆ ತುಂಬಾ ಯೋಗ್ಯವಾಗಿದೆ. ಮುಖ್ಯವಾಗಿ ಈ ಮಹಾತ್ಮರಿಂದ ಅಜ್ಞಾನಾಂಧಕಾರದಲ್ಲಿ ಬಳಲುತ್ತಿದ್ದ ವೀರಶೈವ ಸಮಾಜವು ಎಚ್ಚತ್ತು ನವಚೈತನ್ಯವುಳ್ಳದ್ದಾಯಿತು. ಈ ಗುರುಪುಂಗವರ ಕ್ರಿಯಾಸಿದ್ಧಿ, ಸಮಾಜೋನ್ನತಿಪ್ರೇಮ, ಶಮದಮಾದಿ ಸದ್ಗುಣಗಳನ್ನು ಮುಂದಿನ ಪೀಠಾಧೀಶರು ಅನುಸರಿಸಲು ಮಾರ್ಗವಾಯಿತೆಂದು ಹೇಳಬಹುದಾಗಿದೆ.

ಆದರೆ ಇಂದಿಗೆ ೪-೫ ವರುಷಗಳಿಂದಲೂ ಘೋರಯುದ್ಧವು ನಡೆದಿರುವ ದರಿಂದ ಪ್ರತಿಯೊಂದು ಪದಾರ್ಥಗಳ ಬೆಲೆಯು ೧ ಕ್ಕೆ ೫–೬ ಪಟ್ಟು ಹೆಚ್ಚಾದವು. ಇದಕ್ಕೆ ಕಾಗದಗಳೇ ದೊರೆಯದಾದವು. ಪ್ರಿಂಟಿಂಗ ಚಾರ್ಜು, ಬ್ಲಾಕುಗಳ ನಿರ್ಮಾಣ ಮುಂತಾದವು ಮಿತಿಮೀರಿ ಹೋದುದರಿಂದ ಕೆಲವು ದಿವಸ ಮುದ್ರಣದ ಪ್ರಯತ್ನವನ್ನು ಬಿಟ್ಟು ಸುಮ್ಮನೆ ಕುಳಿತೆನು. ಇದನ್ನರಿತು ಕೆಲವು ಗುರುಪೀಠಾಭಿ ಮಾನಿಗಳು ಆ ಮಹಾನುಭಾವರ ಸಚ್ಚರಿತ್ರವನ್ನು ಬೇಗನೆ ಮುದ್ರಣಗೊಳಿಸಿ ಪ್ರಸಿದ್ಧ ಮಾಡಿರಿ ಆಲಸ್ಯಮಾಡಬೇಡಿರಿ ಎಂದುದರಿಂದ ಮುದ್ರಣ ಕೆಲಸಕ್ಕೆ ಪ್ರಾರಂಭಮಾಡ ಬೇಕಾಯಿತು. ಆದರೆ ವರ್ಗಣಿ ಹಣ ಕೊಡಲೊಪ್ಪಿದ ಕೆಲವರು ಸಕಾಲಕ್ಕೆ ಸಲ್ಲಿಸ ದಿದ್ದರಿಂದ ಅವರಲ್ಲಿಗೆ ೨–೩ ಸಾರೆ ಪ್ರಯಾಣಮಾಡಲು ಖರ್ಚು-ವೆಚ್ಚಗಳು ವಿಶೇಷ ಬಂದವು. ಬೇರೆ ವಿಧದಿಂದ ತೊಂದರೆಗಳುಂಟಾದವು. ಬಹುಪರಿಯಿಂದ ಶ್ರಮ ಬಡುತ್ತಿರಲು ಕೈಕೊಂಡ ಕಾರ್ಯವು ಇಂದಿಗೆ ಕೊನೆಗಂಡಿತು.

ಈ ಸದ್ಗ್ರಂಥ ಮುದ್ರಣ ಮಾಡಿಸಲಿಕ್ಕೂ ಹಾಗು ಬ್ಲಾಕು ( ಫೋಟೊ ) ಗಳಿಗೂ ಧನಸಹಾಯ ಮಾಡಿದ ಉದಾರಶಾಲಿಗಳ ಹೆಸರುಗಳು ಈ ಗ್ರಂಥದ ಅಂತ್ಯ ಭಾಗದಲ್ಲಿ ಮುದ್ರಿಸಲ್ಪಟ್ಟಿವೆ. ಇದರಲ್ಲಿ ಇನ್ನೂ ಸೇರಿಸತಕ್ಕ ಹೆಚ್ಚಿನ ವಿಷಯಗಳೂ ಉಳಿದಿರಬಹುದು. ಬಲ್ಲಂಥವರು ತಿಳುಹಿಸಿದಲ್ಲಿ ಎರಡನೇ ಮುದ್ರಣದಲ್ಲಿ ಸೇರಿ ಸಲ್ಪಡುವವು.

ಶ್ರೀಗುರುಕೃಪೆಯಿಂದ ಯಥಾಮತಿಯಾಗಿ ಸಾಧ್ಯವಾದಷ್ಟು ಶೋಧಿಸಿ ಲಿಖಿ ಸಿದ್ದಾಗಿದೆ. ವಾಚಕರು "ಮರಾಳಾಮೃತನ್ಯಾಯ"ದಂತೆ ಇದನ್ನು ಪರಿಗ್ರಹಿಸ ಬೇಕು. ಇದು ನಿರ್ಮಲ ಮನಸ್ಸಿನವರಿಗೂ ಗುರುಪೀಠಾಭಿಮಾನಿಗಳಿಗೂ ಉಪಯು ಕ್ತವಾಗಿ ಈ ಸದ್ಗುರುಮೂರ್ತಿಯ ದಿವ್ಯಪ್ರಭೆಯು ಆಚಂದ್ರಾರ್ಕಪರಿಯಂತರ ವಿಶ್ವಪ್ರಪಂಚದಲ್ಲಿ ವಿರಾಜಿಸುತ್ತಿರಲೆಂದು ಆ ಪರಶಿವನ ಪಾದಾರವಿಂದಗಳನ್ನು ಪ್ರಾರ್ಥಿಸುವೆನು.

ಶಕ ೧೮೬೬, ತಾರಣ ಸಂ.
ವೈಶಾಖ ಶು. ೫
ತಾರೀಖು ೨೭—೪—೪೪.

ಶ್ರೀಗುರುಚರಣರೇಣುः
ವೇ॥ ವಿರೂಪಾಕ್ಷಶಾಸ್ತ್ರೀ ಪುರಾಣಿಕಮಠ,
ಹಿರೇಹಡಗಲಿ ( ಬಳ್ಳಾರಿ ಡಿ. )



# ವಿಷಯಾನುಕ್ರಮಣಿಕೆ



## ೧ ನೇ ಅಧ್ಯಾಯ





## ೨ ನೇ ಅಧ್ಯಾಯ



## ೩ ನೇ ಅಧ್ಯಾಯ

## ೪ ನೇ ಅಧ್ಯಾಯ



## ೫ ನೇ ಅಧ್ಯಾಯ

## ಸಂಕೀರ್ಣ ಪ್ರಕರಣ





॥ ಶ್ರೀ ಜಗದ್ಗುರು ದಾರುಕಶಿವಾಚಾರ್ಯಃ ಪ್ರಸೀದತು ॥





### ಜಗದ್ಗುರು

# ಶ್ರೀ ಸಿದ್ಧಲಿಂಗೇಶ ವಿಜಯ



ಶ್ರೀಮಚ್ಚಂದ್ರಕಲಾಧರಂ ಭವಪರಂ ಶ್ರೀಶಾಧಿಪಂ ಶಂಕರಂ।
ವೇದಾಂತೋಭಯ ವೇದ್ಯಮವ್ಯಯಮಜಂ ವೇದಾದಿ ವಿಶ್ವಾತ್ಮಕಂ ॥
ಮಾಯಾತೀತಮನಾದಿ ಬೋಧಮಮೃತಂ ಮೃತ್ಯುಂಜಯಂ ಸರ್ವಗಂ ॥
ಗಂಗಾಲೋಲಮನಂತವೈಭವಯುತಂ ಗೌರೀಧವಂ ಸೌಮ್ಯಹಂ ॥ ೧

## ೧ನೆಯ ಅಧ್ಯಾಯ

### ಉಜ್ಜಯನೀ ವಟಕ್ಷೇತ್ರವೂ, ಸದ್ಧರ್ಮ ಸಿಂಹಾಸನವೂ

ಶ್ರೀಮದುಜ್ಜಯನೀ ವಾಸಃ । ಸದ್ಧರ್ಮಾಸನಮಂಡಿತಃ ॥
ಶಿವಯೋಗೀ ಸದಾಪಾತು । ಸಿದ್ಧಲಿಂಗೋ ಜಗದ್ಗುರುಃ ॥

ಶ್ರೀಮತ್ಪರಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನವೆಂಬ ಪಂಚಮುಖಗಳಿಂದ ರೇಣುಕ, ದಾರುಕ, ಘಂಟಾಕರ್ಣ, ಧೇನುಕರ್ಣ ವಿಶ್ವಕರ್ಣರೆಂಬ ಪಂಚಗುರುಮೂರ್ತಿಗಳು ಉದಯಿಸಿ, ಜಗದಾದಿಯಲ್ಲಿ ರಂಭಾಪುರಿ, ಉಜ್ಜಯನೀ, ಕೇದಾರ, ಶ್ರೀಶೈಲ, ಕಾಶಿ, ಎಂಬ ಪಂಚಪುಣ್ಯಕ್ಷೇತ್ರಗಳಲ್ಲಿ ಧರ್ಮಪೀಠಗಳನ್ನು ಸ್ಥಾಪಿಸಿ ಪವಿತ್ರವಾದ ವೀರಶೈವ ಮತವನ್ನು ನೆಲೆಗೊಳಿಸಿದುದು ಶಾಸ್ತ್ರಪ್ರಸಿದ್ಧವೂ ಭುವನಪ್ರಸಿದ್ಧವೂ ಅದೆ.

ಈ ಉಜ್ಜಯನೀ ಸದ್ಧರ್ಮಪೀಠದ ವಿಷಯದಲ್ಲಿ ಆಗಮಾದಿ ಪ್ರಮಾಣ—

ಸುಪ್ರಭೇದಾಗಮೆ —

ಪೂರ್ವಂ ಮಮಮುಖಾಜ್ಜಾತೊ । ವಾಮದೇವಾಚ್ಚದಾರುಕಃ ॥
ಲೀಲಯಾವ್ಯಸೃಜತ್ಸೂತ್ರಂ । ವೃಷ್ಟಿನಾಮಮಹತ್ತರಂ ॥ ೧ ॥
ಸಯೇವ ಮರುಳಾರಾಧ್ಯೊ । ಭೂತ್ವಾಲೀಲಾಮಥಾಕರೋತ್ ॥
ನಂದಿಗೋತ್ರಾಧಿನಾಥಶ್ಚ । ಸಿಂಹಾಸನಪತಿಶ್ಚಯಃ ॥ ೨ ॥
ಮರುಳಾರಾಧ್ಯಸನ್ನಾಮ । ಜಗದ್ಗುರು ತಮಶ್ಚ ಸಃ ॥

ಸ್ವಯಂಭುವಾಗಮೆ —

ತಪ್ಪನ್ಮರುಳಸಿದ್ಧಸ್ಯ । ವಟಕ್ಷೇತ್ರೆ ಮಹತ್ತರೆ ॥
ಸಿದ್ಧೇಶಲಿಂಗಾಜ್ಜನನಂ । ಸ್ಥಾನಮುಜ್ಜಯನೀ ಪುರೇ ॥ ೧ ॥

ಸಿದ್ಧನಾಥ ಶಿವಾಚಾರ್ಯ ವಿರಚಿತ ಸಂಸ್ಕೃತ ರೇಣುಕವಿಜಯ —

**ದ್ವಿತೀಯಮಂಜರಿ :—** ( ಗದ್ಯ ) ಸಮಸ್ತ ಪವಿತ್ರ ಕ್ಷೇತ್ರ ಶಿರೋರತ್ನಂ ಪ್ರತ್ನಂ ಗೋಗಿರಿ ಭೈರವಗಿರಿ ಪ್ರಮುಖ ಪಾವನತಮ ಪರ್ವತಪ್ರಕರ ಪರಿವೇಷ್ಟಿತಂ, ಗಣನಾತೀತ ಶಿವಲಿಂಗ ಸಂಘ, ಸಂಗತ ಸಿದ್ಧೇಶ್ವರಾಯತನೋಪಶೋಭಿತ ಶೃಂಗಾಟಕಂ, ಹರಮಿವ ಸರ್ವಮಂಗಲೋಜ್ವಲಂ, ನಾರಾಯಣಮಿವ ಲಕ್ಷ್ಮೀವಿಲಾಸಾಸ್ಪದಂ, ಪಾತಾಲಮಿವನಾಗರತ್ನ ವಿರಾಜಮಾನಮುಜ್ಜಯಿನೀ ಮಹಾ ಕ್ಷೇತ್ರಮಾಸಾದ್ಯ ತನ್ಮಧ್ಯೆ ವಿದ್ಯೋತಮಾನ, ಸದ್ಧರ್ಮಪೀಠಮಧಿಷ್ಠಂತಂ........ಶ್ರೀ ಮರುಳಾರಾಧ್ಯನಾಮದೇಶಿಕಂ ಸಂದೃಕ್ಷೆ ಇತ್ಯಾದಿ.

ಬಳ್ಳಾರಿ ಜಿಲ್ಹಾ ಕೂಡ್ಲಿಗಿ ತಾಲೂಕಿನಲ್ಲಿ ಸುಪ್ರಸಿದ್ಧವಾದ ಉಜ್ಜಯನೀ ಎಂಬ ಗ್ರಾಮವು ಶಿವಭಕ್ತಮಂಡಲಿಯಿಂದಲೂ ಬೇರೆ ಮತದ ಜನಾಂಗದಿಂದಲೂ ಹಾಗೂ ಕೆರೆ, ಭಾವಿ, ಕುಂಟೆ, ಗದ್ದೆಗಳಿಂದೊಡಗೂಡಿ ವಟಕ್ಷೇತ್ರಮಧ್ಯದೊಳು ಪರಿಶೋಭಿಸುತ್ತಿರುವುದು. ಈ ವಟಕ್ಷೇತ್ರವು ೧೬ ಮೈಲು ಚೌರಸ ವಿಸ್ತೀರ್ಣವುಳ್ಳದ್ದಾಗಿ ೯ ಪಾದಗಟ್ಟೆಗಳಿಂದ ಕೂಡಿಕೊಂಡಿದೆ. ಯಾವವೆಂದರೆ– (೧) ಉಜ್ಜಯನೀ ಮಧ್ಯಪಾದ, (೨) ಪೂರ್ವಕ್ಕೆ ಬೆಳೆದೆರಿ ಪಾದ, (೩) ಅಗ್ನಿ ದಿಕ್ಕಿಗೆ ಬೆನಕನಹಳ್ಳಿ ಪಾದ, (೪) ದಕ್ಷಿಣ ದಿಕ್ಕಿಗೆ ಗದ್ದುಗೆ ಆಲಪಾದ, (೫) ನೈರುತ್ಯಕ್ಕೆ ಸೊಕ್ಕೆಪಾದ, (೬) ಪಶ್ಚಿಮಕ್ಕೆ ಸಾಸ್ವಿಹಳ್ಳಿ ಪಾದ, (೭) ವಾಯುವ್ಯಕ್ಕೆ ಭುಜಂಗಪಾದ, (೮) ಉತ್ತರಕ್ಕೆ ಹಾರಕನಾಳು ಪಾದ, (೯) ಈಶಾನ್ಯಕ್ಕೆ ಮಾಚೆನಹಳ್ಳಿಪಾದ ಈ ಪ್ರಕಾರ ಇರುವದಲ್ಲದೆ, ೯ ತೀರ್ಥ (ಭಾವಿ) ಗಳು ಇರುತ್ತವೆ. ಯಾವವೆಂದರೆ– ಗುರುತೀರ್ಥ, (೨) ಗೋಪ್ಯನಂದೀತೀರ್ಥ (೩) ಸಿದ್ಧೇಶಕುಲ್ಯತೀರ್ಥ (೪) ಧ್ಯಾನಮಂಟಪ ಶುದ್ಧ ತೀರ್ಥ (೫) ಶ್ರೀ ದಾರುಕತೀರ್ಥ (೬) ಸಿದ್ಧೇಶ್ವರ ಮಜ್ಜನಕುಂಡ ತೀರ್ಥ (೭) ಗೌರೀಮಜ್ಜನಕುಂಡತೀರ್ಥ, (೮) ಗೋಗಿರಿ ಸಿದ್ಧೇಶತೀರ್ಥ, (೯) ವೇದಿಕಾ ವಟ ತೀರ್ಥ ಇತ್ಯಾದಿ.

ಈ ಗ್ರಾಮಮಧ್ಯದೊಳು ಶ್ರೀ ಜಗದ್ಗುರು ದಾರುಕ ಶಿವಾಚಾರ್ಯ ಮಹಾನುಭಾವರಿಂದ ಸ್ಥಾಪಿತವಾದ (ಮಹಾ ಸಂಸ್ಥಾನ ಬೃಹನ್ಮಠದಲ್ಲಿ) ಶ್ರೀ ಸದ್ಧರ್ಮ ಸಿಂಹಾಸನವೂ ಹಾಗೂ **ಶ್ರೀ ಮರುಳಸಿದ್ಧೇಶ ಮಹಾಲಿಂಗವೂ,** ಶ್ರೀ ಗೌರೀ ದೇವಿಯೂ, ಭವ್ಯವಾದ ದೇವಾಲಯವೂ ಕಂಗೊಳಿಸುತ್ತಿರುವವು. ಈ ದೇವಾಲಯದೊಳಗೆ ರಂಗಸ್ಥಲದ ಮೇಲುಭಾಗದಲ್ಲಿ ಶಿಲ್ಪಿಕಲಾ ಕೌಶಲ್ಯವನ್ನು ಪ್ರದರ್ಶಿಸುವ ಸಹಸ್ರ ದಳಗಳುಳ್ಳ ಕಮಲವು ಅತ್ಯಂತ ಮನೋರಂಜಕವಾಗಿದೆ. ಇನ್ನುಳಿದ ಶಿಲಾ ವಿಗ್ರಹಗಳು ಪ್ರೇಕ್ಷಕರಿಗೆ ಚಿತ್ತಾಕರ್ಷಕವಾಗಿ ತೋರುತ್ತಿವೆ.

ಮಹಾಸಂಸ್ಥಾನಮಠ ಮತ್ತು ದೇವಾಲಯ ಒಂದೇ ಹತ್ತರವಿದ್ದು, ಪ್ರಾಕಾರವು ಅತ್ಯಂತ ವಿಸ್ತೀರ್ಣವುಳ್ಳದ್ದಾಗಿದೆ. ಉತ್ತರದಿಕ್ಕಿನ ಮಹಾದ್ವಾರವು ೫ ಅಂತಸ್ತುಗಳಿಂದ ವಿರಾಜಿಸುತ್ತ ಯಾತ್ರಿಕ ಜನರಿಗೆ ಬಹುದೂರದಿಂದಲೇ ದರ್ಶನವಾಗುತ್ತಿದೆ. ದಕ್ಷಿಣದಿಕ್ಕಿನ ಕೈಲಾಸ ಮಹಾದ್ವಾರವೆಂಬುವದು ವಿಶಾಲವಾಗಿ ರಂಜಿಸುವದು. ಪೂರ್ವ-ಪಶ್ಚಿಮ ದ್ವಾರಗಳು ಚಿಕ್ಕವಾಗಿರುತ್ತವೆ. ಈ ದೇವಾಲಯದ ಮುಂಭಾಗದಲ್ಲಿ (ಗೋತ್ರಾಧಿಪನಾದ) **ಶ್ರೀ ನಂದೀಶ್ವರನ** ಅತ್ಯುನ್ನತ ಶಿಲಾವಿಗ್ರಹವು ಶೋಭಿಸುವದಲ್ಲದೆ, ದೇವಾಲಯದ ಶಿಖರದಲ್ಲಿ **(ಕೋರುಬಸವನೆಂಬ)** ನಂದೀಶ್ವರನು ಚತುಷ್ಪಾದಗಳನ್ನೂರಿ ನಿಂತಿದ್ದಾನೆ. ಶ್ರೀ ಮರುಳಸಿದ್ಧೇಶ ಮಹಾಲಿಂಗಕ್ಕೆ ಪ್ರತಿದಿವಸ ಚತುಷ್ಕಾಲಗಳಲ್ಲಿಯೂ ಪೂಜಾವಿನಿಯೋಗಗಳು ಸಕ್ರಮವಾಗಿ ಜರುಗುತ್ತಿರುವವು. ಹೇಗೆಂದರೆ– (೧) ಪ್ರಾತಃಕಾಲದಲ್ಲಿ ಕಿರೀಟ-ಕವಚಗಳಿಂದ ಶೋಭಿಸುವ ಪೂಜಾ, (೨) ಮಧ್ಯಾಹ್ನದಲ್ಲಿ ಶ್ರೀಗುರು ಕರಕಮಲಗಳಿಂದ ಮಹಾಭೋಗ ಪೂಜಾ, (೩) ಸಾಯಂಕಾಲದಲ್ಲಿ ಕವಚಮಾತ್ರದಿಂದ ವಿರಾಜಿಸುವ ಅವಸರ ಪೂಜಾ (ಸಂಕ್ಷಿಪ್ತ), (೪) ಮಧ್ಯರಾತ್ರಿಯಲ್ಲಿ ಭಸಿತ-ರುದ್ರಾಕ್ಷಿಗಳಿಂದ ಏಕಾಂತ ಲಘು ಪೂಜಾ.

ಹಿಂದಿನ ಸ್ಥಿರಪಟ್ಟಾಧ್ಯಕ್ಷ ಶ್ರೀ ಜ. ಚನ್ನವೀರ ಮಹಾಸ್ವಾಮಿಗಳ ಮತ್ತು ಚರಪಟ್ಟಾಧ್ಯಕ್ಷ ಶ್ರೀ ಜ. ಗುರುಸಿದ್ಧ ಮಹಾಸ್ವಾಮಿಗಳವರ ಆಧಿಪತ್ಯದ ಕಾಲಮಾನದಲ್ಲಿ ಈ ಮಹಾಸಂಸ್ಥಾನವು ಧನ-ಧಾನ್ಯ ಕನಕಾದಿ ಸಂಪತ್ಸಮೃದ್ಧಿಯಿಂದ ಪರಿಶೋಭಿಸುತ್ತಿತ್ತು.

ಪ್ರಾಚೀನಕಾಲದಿಂದಲೂ ಶ್ರೀ ಜಗದ್ಗುರು ಪಟ್ಟಾಂಕಿತ ಮಹಾಸ್ವಾಮಿಗಳವರು ಈ ಸದ್ಧರ್ಮ ಸಿಂಹಾಸನವನ್ನಾರೋಹಣಮಾಡಿ ದೀಕ್ಷಾ-ಶಿಕ್ಷ-ಮೋಕ್ಷಗಳೆಂಬ ತ್ರಿವಿಧ ಗುರುತ್ವಾಧಿಕಾರವುಳ್ಳವರಾಗಿ, ವೀರಶೈವ ಧರ್ಮ ಸಾಮ್ರಾಜ್ಯವನ್ನು ಪರಿಪಾಲನ ಮಾಡುತ್ತ ಬಂದಿರುತ್ತಾರೆ.

ಪ್ರತಿ ವರುಷ ವೈಶಾಖ ಶು. ೫ ದಿವಸ **ಶ್ರೀ ದಾರುಕಜಯಂತೀ ರಥೋತ್ಸವವೂ,** ಶು. ೬ ದಿವಸ ಶ್ರೀ ಮರುಳಸಿದ್ಧೇಶ ದೇವಾಲಯದ ಶಿಖರಕ್ಕೆ **ತೈಲಧಾರಾಭಿಷೇಕ ಮಹೋತ್ಸವವೂ,** ಮಾರನೇ ದಿವಸ ಶ್ರೀಜಗದ್ಗುರುಗಳ ಮತ್ತು ಪಂಡಿತರು

ಗಳ ಧರ್ಮೋಪದೇಶ, ಕೀರ್ತನ, ಅನ್ನಸಂತರ್ಪಣೆ ಮುಂತಾದ ಸತ್ಕಾರ್ಯಗಳೂ ಅತ್ಯಂತ ವೈಭವದಿಂದ ಜರಗುತ್ತವೆ. (ಅನೇಕ ಭಕ್ತರು ತಮ್ಮ ಮನಸ್ಸಂಕಲ್ಪದಂತೆ ಶಿಖರಕ್ಕೆ ತೈಲಾಭಿಷೇಕ ಮಾಡಿಸುವ ಎಣ್ಣೆಯು ಪ್ರತಿವರುಷ ನೂರಾರು ಮಣಗಳ ವರೆಗೂ ಕೂಡುವದು). ಈ ಮಹಾಯಾತ್ರೆಯ ಕಾಲಕ್ಕೆ ೧೫–೨೦ ಸಾವಿರದ ವರೆಗೂ ಜನಸಮೂಹವು ಸೇರಿ ನಾನಾವಿಧ ವ್ಯಾಪಾರೋದ್ಯೋಗಗಳು ನಡೆಯುತ್ತವೆ. ಇದಲ್ಲದೆ ಪ್ರತಿವರುಷ ಶ್ರಾವಣಮಾಸದಲ್ಲಿ ಶ್ರೀ ರುದ್ರಾಭಿಷೇಕ ಮಹಾಪೂಜಾ ಸಮಾರಂಭವೂ ಹಾಗೂ ಕಾರ್ತಿಕಮಾಸದಲ್ಲಿ ಸಹಸ್ರ ದೀಪೋತ್ಸವವೂ, ಮಾಘಮಾಸದ ಭಾರತ ಹುಣ್ಣಿವೆಗೆ ೯ ಪಾದಗಟ್ಟಿಗಳಿಗೆ ದಯಮಾಡಿಸುವ ಶ್ರೀ ಮರುಳಸಿದ್ಧೇಶ ಮೂರ್ತಿಯ ಆಂದೋಲಿಕೋತ್ಸವವೂ ಪರಮಸಂಭ್ರಮದಿಂದ ಜರುಗುತ್ತಿರುವವು.

ಈ ಕ್ಷೇತ್ರಯಾತ್ರಾ ಮಾಡಲು ಬಂದ ಸದ್ಭಕ್ತರು ಆಯಾ ಪುಣ್ಯ ತೀರ್ಥಗಳಲ್ಲಿ ಸ್ನಾನಮಾಡುವರು. ಕೆಲವರು ಶ್ರೀ ಮಹಾಲಿಂಗಕ್ಕೆ ರುದ್ರಾಭಿಷೇಕ ಮಹಾಪೂಜಾ ನಡೆಯಿಸಿ ಗಣಸಂತರ್ಪಣೆ, ದಾನ, ದಕ್ಷಿಣೆಯಿತ್ತು ಶ್ರೀ ಜಗದ್ಗುರುಗಳವರಿಗೆ ದರ್ಶನ ಕಾಣಿಕೆ ಗುರುಕಾಣಿಕಾದಿಗಳನ್ನರ್ಪಿಸಿ ಫಲಾಶೀರ್ವಾದಗಳನ್ನು ಪಡೆದು ಆನಂದದಿಂದ ತೆರಳುವರು.

ಮುಖ್ಯವಾಗಿ ಈ ಮಹಾಕ್ಷೇತ್ರಯಾತ್ರೆಗೆ ಬಂದ ಸದ್ಭಕ್ತರಿಗೆ ಗುರುಯಾತ್ರಾ, ಕ್ಷೇತ್ರಯಾತ್ರಾ, ತೀರ್ಥಯಾತ್ರಾ ಈ ಪ್ರಕಾರ ತ್ರಿವಿಧ ಯಾತ್ರಾಮಾಡಿದ ವಿಶೇಷ ಪುಣ್ಯಫಲವು ಲಭಿಸುವದು. ಆದ್ದರಿಂದ ಪ್ರತಿಯೊಬ್ಬರೂ ಈ ಪುಣ್ಯಕ್ಷೇತ್ರ ದರ್ಶನ ಮಾಡಿಕೊಂಡು ಧನ್ಯರಾಗುವದು ಮುಖ್ಯ ಕರ್ತವ್ಯವು.

ಕಂದ ॥ ಗುರುವರ ದಾರುಕ ದೇವನ ।
ಪರತರ ಸದ್ಧರ್ಮಪೀಠ ದರುಶನದಿಂದಂ ॥
ನರರಘ ಹರಿವುದು ಜಗದೊಳು ।
ಚಿರಸುಖ ದೀರ್ಘಾಯು ಸತತ ದೊರೆವವು ಮನುಜಾ ॥ ೧ ॥





ಶ್ರೀಮದುಜ್ಜಯಿನೀ ಜಗದ್ಗುರು. ಸದ್ಧರ್ಮಸಿಂಹಾಸನಮಠವು.



ಉಜ್ಜಯಿನೀ ಮಹಾಸಂಸ್ಥಾನಮಠದ ಮಹಾದ್ವಾರವು

# ಜನನ



ಶ್ರೀಮತ್ಪರಶಿವನ ಲೀಲಾನಾಟಕ ರಂಗಸ್ಥಲವಾದ ಈ ಪುಣ್ಯ ಭೂಮಿಯೊಳು ಪ್ರಸಿದ್ಧವಾದ ಕರ್ನಾಟಕ ದೇಶದ ಮೈಸೂರು ಸ್ಟೇಟಿನಲ್ಲಿ ಚಿತ್ರದುರ್ಗ ಡಿಸ್ಟ್ರಿಕ್ಟು ಜಗಲೂರು ತಾಲೂಕಿಗೆ ಸೇರಿದ **ಬಂಗಾರನಾಯಕನಹಳ್ಳಿ** ಎಂಬ ಚಿಕ್ಕ ಗ್ರಾಮವು ಕೆಲವು ಶಿವಭಕ್ತ ಜನರೂ ಇನ್ನುಳಿದ ಜನಾಂಗದಿಂದಲೂ ದೇವಾಲಯ ಗಳಿಂದ ಶೋಭಿಸುತ್ತಿರಲು, ಆ ಗ್ರಾಮದಲ್ಲಿ ಹಿರಿಯಮ್ಮತದ ವೀರಮಾಹೇಶ್ವರ ವಂಶ ದೊಳು ಜನಿಸಿ ಶ್ರೀ ಜಗದ್ಗುರು ದಾರುಕ ಶಿವಾಚಾರ್ಯ ಶಾಖಾನುವರ್ತಿಗಳೂ, ಆಚಾರ ಶೀಲರೂ, ಶಿವಪೂಜಾನಿಷ್ಠರೂ, ಸುಜ್ಞಾನಿಗಳೂ, ಆದಂಥ ವೇದಮೂರ್ತಿ ಚೆನ್ನಬಸವಾರ್ಯರೆಂಬವರಿಗೆ ಪವಿತ್ರಾಚರಣೆಯಿಂದ ಸದ್ಗುಣಮಂಡಿತಳೂ, ಪತಿ ಭಕ್ತಿ ಪರಾಯಣಳೂ, ಎನಿಸಿದ ಸೌ|| ಗುರುಸಿದ್ಧಾಂಬಾ ಎಂಬ ಸಾಧ್ವೀಮ ಣಿಯು ಧರ್ಮಪತ್ನಿಯಾಗಿದ್ದಳು. ಈ ದಂಪತಿಗಳಿಗೆ ಮೊದಲು ಮರುಳಸಿದ್ಧಾರ್ಯ ನೆಂಬ ಓರ್ವ ಮಗನು ಜನಿಸಿದನು.

ಮುಂದೆ ಕೆಲವು ದಿವಸಗಳು ಕಳೆದರೂ ಪುನಃ ಸಂತಾನ ಸೂಚನೆಯಾಗದೆ ಹೋಗಲು ಈ ದಂಪತಿಗಳು ಇನ್ನೊಂದು ಸಂತಾನವಾಗಲಿಲ್ಲವೆಂದು ಬಹು ಚಿಂತಾ ಕ್ರಾಂತರಾಗಿದ್ದರು; ಹೀಗಿರಲು ಶ್ರೀ ಗುರುಶಿದ್ಧಮ್ಮನವರು ತಮ್ಮ ಕುಲಗುರುಮೂ ರ್ತಿಯಾದ ಶ್ರೀಮದುಜ್ಜಯಿನೀ ಜಗದ್ಗುರು ಮರುಳಸಿದ್ಧೇಶ್ವರನನ್ನು ಹಗಲಿರುಳೂ ಧ್ಯಾನಿಸುತ್ತಲೂ ಸ್ನಾನ, ಶಿವಾರ್ಚನೆ, ಪತಿ ಸೇವಾತತ್ಪರಳಾಗಿ ಅತಿಥಿ ಅಭ್ಯಾಗತ ರನ್ನು ಸಂತಯಿಸುತ್ತ ೩–೪ ವರುಷಗಳ ವರೆಗೂ ಬಹು ನಿಷ್ಠೆಯಿಂದ ವ್ರತವನ್ನಾ ಚರಿಸಿದಳು.

ಈ ಸಾಧ್ವೀಮಣಿಯಳ ಪವಿತ್ರ ಭಾವನಕ್ಕೂ, ವೀರವ್ರತಕ್ಕೂ ಮೆಚ್ಚಿದ ಶ್ರೀ ದಾರುಕ ಗುರುದೇವನ ಕೃಪಾಕಟಾಕ್ಷದಿಂದ ಗುರುಸಿದ್ಧಮ್ಮನವರಿಗೆ ಒಂದು ದಿವಸ ಶುಭ ಸ್ವಪ್ನ ತೋರಿತು; ಈ ಶುಭ ಸೂಚನೆಯಿಂದ ಗರ್ಭ ಧಾರಣೆಯಾಗಿ ದಿವ್ಯ ಶರೀರ ಕಾಂತಿಯಿಂದ ಶೋಭಿಸಿದಳು; ಒಂದೊಂದೇ ಬಯಕೆಗಳುಂಟಾದವು, ಪವಿತ್ರ ವಾದ ವಿಭೂತಿಯನ್ನು ಸ್ವೀಕರಿಸುವದೂ, ಇಷ್ಟಲಿಂಗಪೂಜಾ ಮಾಡುವದೂ, ಸದ್ಗೋಷ್ಠಿಯಲ್ಲಿರುವದೂ, ಬಹು ಪ್ರಿಯವಾದವು. ಗರ್ಭದಲ್ಲಿ ದಿವ್ಯ ತೇಜೋ ಮೂರ್ತಿ ನೆಲಸಿರುವದರಿಂದ ಸರ್ವಾಂಗವೂ ಶರತ್ಕಾಲದ ಮೇಘದಂತೆ ಶುಭ್ರಕಾಂತಿ ಯಿಂದ ರಂಜಿಸಿತು. ಮಂದಗಮನವೂ, ಮೃದುಮಧುರವಾದ ನುಡಿಗಳೂ, ಪೂರ್ಣ ಚಂದ್ರನಂತೆ ಮುಖಕಮಲವೂ, ಜನರಿಗೆ ಅತ್ಯಂತ ಮನೋಹರವಾಗಿ ತೋರು ತ್ತಿದ್ದವು.

ಹೀಗಿರುತ್ತಿರಲು ಎಂಟನೆಯ ತಿಂಗಳಲ್ಲಿ ವೀರಶೈವಧರ್ಮಶಾಸ್ತ್ರದ (ಶ್ಲೋಕ) "ವೀರಶೈವಸ್ಥಿತಾನಾಂತು। ಮಾಸೆ ಗರ್ಭಾಷ್ಟಮೆ ಗುರುಃ ॥ ಪಂಚಸೂತ್ರಕೃತಂ ಲಿಂಗಂ। ಧಾರಯೇದ್ವಿಧಿವಚ್ಛುಭಂ ॥" ಎಂಬ ನಿಯಮಕ್ಕನುಸರಿಸಿ ಮಾಹೇಶ್ವರ ಜಂಗಮ ಮೂರ್ತಿಯಿಂದ ಗರ್ಭಕ್ಕೆ ಲಿಂಗಧಾರಣವನ್ನು ವಿಧ್ಯುಕ್ತವಾಗಿ ಮಾಡಿಸಿದರು. ಅನಂತರದಲ್ಲಿ ಒಂಭತ್ತು ತಿಂಗಳು ಪೂರ್ಣವಾದವು.

ಶ್ರೀಮಜ್ಜಗದ್ಗುರು ದಾರುಕಶಿವಾಚಾರ್ಯ ಪರಾವತಾರಿಯಾದ ಮಹಾಮೂರ್ತಿಯು ಶ್ರೀ ಶಾ. ಶಕ ೧೮೪೨ ನೆಯ ವಿಕೃತಿನಾಮ ಸಂವತ್ಸರದ ಮಾಘಬ. ೭ ಭೌಮವಾರ ರಾತ್ರಿ ಶುಭಮುಹೂರ್ತದೊಳು ಭೌತಿಕಶರೀರ ಧರಿಸಿ ಜಗದೋದ್ಧಾರ ಮಾಡಲು ಈ ಧರಣಿಗವತಾರವಾಯಿತು.

ಆ ಸಮಯದೊಳು ಮಂದಮಾರುತನು ಚತುರ್ದಿಶೆಗಳಿಂದಲೂ ಮೆಲ್ಲಮೆಲ್ಲನೆ ಸುಳಿದಾಡುತ್ತಿದ್ದನು. ಆಕಾಶವು ನಿರಭ್ರವಾಗಿ ಸಜ್ಜನ ಹೃದಯದಂತೆ ನಿರ್ಮಲವಾಗಿ ವಿರಾಜಿಸುತ್ತಿತ್ತು. ವೀರಶೈವ ಧರ್ಮವೆಂಬ ಮಹಾಸಾಗರವು ಷೋಡಶ ಕಲಾಭರಿತನಾದ ಪೂರ್ಣಚಂದ್ರನಂತಿರುವ ಈ ಬಾಲಕನನ್ನು ನೋಡಿ ಮಹಾಪೂರದಂತೆ ಉಕ್ಕೇರಿತು. ಶಿವಭಕ್ತರ ಬಲಭುಜವೂ ಬಲನೇತ್ರಗಳೂ ಸ್ಫುರಣವಾದವು.

## ★ ಅಥ ಜನ್ಮ ಪತ್ರಿಕಾ ★

ಜನನೀ ಜನ್ಮ ಸೌಖ್ಯಾನಾಂ। ವರ್ಧನೀ ಕುಲಸಂಪದಾಂ ॥
ಪದವೀ ಪೂರ್ವ ಪುಣ್ಯಾನಾಂ। ಲಿಖ್ಯತೇ ಜನ್ಮಪತ್ರಿಕಾ ॥

ಶ್ರೀಮನ್ನೃಪ ಶಾಲಿವಾಹನ ಶಕ ಗತಾಬ್ದಾಃ ೧೮೪೨ ತಮ ವಿಕೃತಿನಾಮ ಸಂವತ್ಸರೇ ಉತ್ತರಾಯಣೇ ಶಿಶಿರಋತೌ ಮಾಘಮಾಸೇ ಕೃಷ್ಣಪಕ್ಷೇ ಸಪ್ತಮಿ ಭೌಮವಾಸರೇ ರಾತ್ರೌ ಜ್ಯೇಷ್ಠ ನಕ್ಷತ್ರೇ ತೃತೀಯ ಚರಣೇ ಶಿಶೋರ್ಜನನಕಾಲ ಘಟಿಕಾಃ ೧೭–೩೩ ಧನುರ್ಲಗ್ನೇ ರವಿಹೋರಾಯಾಂ, ಕುಜದ್ರೇಕ್ಕಾಣೇ, ಶುಕ್ರನವಾಂಶೇ, ಶನಿದ್ವಾದಶಾಂಶೆ, ಕುಜತ್ರಿಂಶಾಂಶೆ, ಚಂದ್ರಕಾಲಹೋರಾಯಾಂ—

ಲಗ್ನ ಕುಂಡಲಿ.

| | | | |
|---|---|---|---|
| ೧೨ | ೧ ಕು | ೨ ರಾ | ೩ |
| ೧೧ ರ ಬು ಗು | | | ೪ |
| ೧೦ ಶು | | | ೫ ಶ |
| ೯ ಲ | ೮ ಕೇ ಚ | ೭ | ೬ |



ನವಾಂಶ ಕುಂಡಲಿ.

| | | | |
|---|---|---|---|
| ೧೨ | ೧ ರ | ೨ ಲ-ಕು | ೩ ರಾ |
| ೧೧ ಚ ಶು | | | ೪ |
| ೧೦ | | | ೫ |
| ೯ ಬು ಗು ಕೇ | ೮ ಶ | ೭ | ೬ |

ಸದ್ಗುರುವಿನ ಕೃಪೆಯಿಂದ ತಮ್ಮ ಮನೋಬಯಕೆಯಂತೆ ಪುತ್ರರತ್ನೋದಯವಾಯಿತೆಂದು ಈ ದಂಪತಿಗಳಿಗೆ ಪರಮಸಂತೋಷವಾಯಿತು. ಆಕೂಡಲೇ ಗುರುವರ್ಗ ಮಠಾಧಿಕಾರಿ ಜಂಗಮ ಮೂರ್ತಿಯಿಂದ ಈ ಮೊದಲು ಧರಿಸಿದ್ದ ಲಿಂಗಕ್ಕೇ ಪುನಃ ಸಂಸ್ಕಾರವನ್ನು ಸಕ್ರಮವಾಗಿ ನೆರವೇರಿಸಿ ಶಿಶುವಿನ ಕೊರಳಲ್ಲಿ ಧಾರಣ ಮಾಡಲ್ಪಟ್ಟಿತು. ಬಳಿಕ ಸುಮಂಗಲೆಯರಾದ ವನಿತಾಸಮೂಹವು ಸಮ್ಮಿಳಿತರಾಗಿ ತತ್ಕಾಲದಲ್ಲಿ ಮಾಡತಕ್ಕ ನಿಯಮಾದಿಗಳನ್ನು ನಡೆಯಿಸಿದರು.

ತರುವಾಯ ಶುಭಮುಹೂರ್ತದೊಳು ಶಿಶುವಿಗೆ **ಸಿದ್ಧಲಿಂಗಾರ್ಯ** ಎಂಬ ಶುಭ ನಾಮಕರಣವನ್ನು ಮಾಡಿ ಸುವಾಸಿನಿಯರು ಬಾಲಕನನ್ನು ತೊಟ್ಟಿಲಲ್ಲಿರಿಸಿ ಜೋಗುಳ ಪದಗಳನ್ನು ನಾನಾರೀತಿಯಿಂದ ಮನೋಹರವಾಗಿ ಹಾಡಿ ಹರಿಸಿದರು.

## ಬಾಲಲೀಲೆಗಳು

ಶಿವಾಂಶಸಂಭೂತನಾದ ಈ ಬಾಲಕನು ಶುಕ್ಲಪಕ್ಷದ ಬಾಲಚಂದ್ರನಂತೆ ದಿನೇ ದಿನೆ ಅಭಿವೃದ್ಧಿ ಹೊಂದುತ್ತಿರಲು ಕೋಮಲವಾದ ಶರೀರದಿಂದಲೂ ಕಿಂಚಿತ್ ಶಾಮವರ್ಣದಿಂದಲೂ, ಕುಲುಕುಲು ನಗುತ್ತಿರುವ ಮಂದಹಾಸದಿಂದಲೂ ಪರಿಶೋಭಿಸುತ್ತಿರುವ ಬಾಲನನ್ನು ನಾರಿಯರೂ, ವೃದ್ಧರೂ, ಬಂಧುಗಳೂ ನೋಡಿ ತಮ್ಮ ಮನಸ್ಸಿಗಾಲ್ಹಾದ ಉಂಟಾಗಿ ಆ ಮಗುವನ್ನೆತ್ತಿಕೊಂಡು ಪರಮ ಪ್ರೇಮದಿಂದ ಮುದ್ದಾಡಿ, ಕೆಲಹೊತ್ತು ವಿನೋದಪಟ್ಟು ಹೋಗುತ್ತಿದ್ದರು. ಹೀಗೆ ೨-೩ ವರುಷಗಳು ಗತಿಸಿದವು. ತಂದೆ-ತಾಯಿಗಳಾದ ಚನ್ನಬಸವಾರ್ಯ-ಗುರುಸಿದ್ಧಮ್ಮನವರು ಆ ಮುದ್ದುಮುಖದ ಬಾಲಕನ ತೊದಲ್ನುಡಿಗಳನ್ನೂ, ಬೀಳುತ್ತೇಳುತ್ತಲೂ ಅಂಬೆಗಾಲಿನಿಂದಲೂ ಹಸನ್ಮುಖಿಯಾಗಿ ಅತ್ತಿಂದಿತ್ತ ಓಡಾಡುತ್ತಿರುವ ಬಾಲಲೀಲೆಗಳನ್ನೂ ಪ್ರೇಮಪೂರಿತ ನೇತ್ರಗಳಿಂದ ನೋಡಿ ಆನಂದತುಂದಿಲಮಾನಸರಾಗಿ ಆ ಮಗುವಿನ ಲಾಲನ-ಪಾಲನ ಮಾಡುತ್ತ ಕಾಲಹರಣಮಾಡುತ್ತಿದ್ದರು.

## ವಿದ್ಯಾಭ್ಯಾಸ

ಚಿಕ್ಕತನದಲ್ಲಿಯೇ ಆ ಬಾಲಕನ ಮುಖದ ಮೇಲೆ ಶಿವಕಳೆಯು ಪ್ರಜ್ವಲಿಸಹತ್ತಿತು. ಈ ಮಾತಾಪಿತೃಗಳು ಬಾಲಕನನ್ನು ೫ ನೇ ವರುಷದ ಶುಭಸಮಯದಲ್ಲಿ ವಿದ್ಯಾಭ್ಯಾಸಮಾಡಲು ಕನ್ನಡ ಪ್ರಾಥಮಿಕ ಶಾಲೆಗೆ ಕಳುಹಿಸಿದರು. ಆ ಬಂಗಾರನಾಯ್ಕನಹಳ್ಳಿಯ ಶಾಲೆಯಲ್ಲಿ ವಿದ್ಯಾಭ್ಯಾಸವು ನಡೆಯಿತು. ಈ ಬಾಲಕನು ಶಾಲೆಯಲ್ಲಿ ಹುಡುಗರ ಸಂಗಡ ಮಾತನಾಡುತ್ತಲೇ ಲಗು ಸಿಟ್ಟಿಗೇಳುತ್ತಿದ್ದನು. ಮನೆಯಲ್ಲಿಯೂ ಅಣ್ಣ-ತಮ್ಮಂದಿರೊಡನೆ ಕಲಹ ಮಾಡುತ್ತ ಬೇರೇ ಕಡೆಗೆ ಹೋಗಿ ಮೌನದಿಂದ ಕುಳಿತುಕೊಳ್ಳುವ ಸ್ವಭಾವವಿದ್ದಿತು. ಹೀಗಿದ್ದರೂ ಬಾಲಕನು ಕೇವಲ ಶ್ರದ್ಧೆಯಿಂದಲೂ ಕುಶಲಮತಿಯಿಂದಲೂ ಆ ಗ್ರಾಮದ ಶಾಲೆಯ ವಿದ್ಯೆಯನ್ನು

ಪೂರೈಸಿದ ಬಳಿಕ ಸಮೀಪದಲ್ಲಿರುವ ಜಗಲೂರು ಪಟ್ಟಣದ ಶಾಲೆಗೆ ಹೋಗಿ ವಿದ್ಯಾಭ್ಯಾಸವನ್ನು ನಡೆಯಿಸಿದನು.

ಮುಂದೆ ಈ ಬಾಲಕನಲ್ಲಿ ದಿನೇ ದಿನೇ ದಿವ್ಯಜ್ಞಾನ ಪ್ರಭೆಯು ಬೆಳೆಯಿತು. ಸ್ನಾನ ಶಿವಪೂಜಾ ಮಾಡುವ ಲವ-ಲವಿಕೆಯುಂಟಾಗಲು ತಂದೆ ತಾಯಿಗಳು ॥ ಗರ್ಭಾಷ್ಟಮೆ ಕೃತಾದೀಕ್ಷಾ । ಮುಖ್ಯಾಸಾ ಷೋಡಶಾವಧಿ ॥ ಗೌಣಾತದೂರ್ಧ್ವ ಮಧಮಾ । ವೀರಶೈವಾನ್ವಯಾಯಿನಾಂ ॥ ೧ ॥ ಎಂಬುಕ್ತಿಯನ್ನನುಸರಿಸಿ ೧೨ನೇ ವರುಷದೊಳಗೆ ಶ್ರೀಗುರುವರ್ಗದ ಪಟ್ಟಾಧ್ಯಕ್ಷ ಸ್ವಾಮಿಗಳವರಿಂದ ಶುಭಮುಹೂರ್ತದಲ್ಲಿ ಈ ( ಸಿದ್ಧಲಿಂಗಾರ್ಯ ) ಬಾಲಕನಿಗೆ ಶಿವದೀಕ್ಷಾ ಸಂಸ್ಕಾರವು ನೆರವೇರಿಸಲ್ಪಟ್ಟಿತು.

ಆ ಮೇಲಂತೂ ಸ್ನಾನ, ಶಿವಾರ್ಚನ, ಸದಾ ಭಸಿತ, ರುದ್ರಾಕ್ಷ ಧಾರಣ, ಸದಾಚಾರ, ಸುಶೀಲತಾ ಮುಂತಾದ ಸದ್ಗುಣಗಳು ಬೆಳೆಯಲಾರಂಭಿಸಿದವು. ಮುಂದೆ ೧೩ — ೧೪ ವರುಷ ವಯಸ್ಸಾಗಲು ಒಂದೊಂದು ಸಮಯದಲ್ಲಿ ಬಾಲಕನಿಗೆ ಬೇಸರವಾಗಿ ಊರ ಹೊರಗೆ ಬಹು ದೂರದ ವರೆಗೆ ಹೋಗಿ ತಂಪಾದ ಸ್ಥಲದಲ್ಲಿಯೂ ಹಳ್ಳ ಕೊಳ್ಳ ಸರೋವರಗಳ ತೀರದಲ್ಲಿಯೂ ಮನಾನಂದ ನೇತ್ರಾನಂದಕರವಾದ ಹಸರು ಹುಲ್ಲಿನ ಪ್ರದೇಶದಲ್ಲಿ ಮೌನದಿಂಧ ಕೆಲಹೊತ್ತು ಕುಳಿತು ಕೆಲಹೊತ್ತು ಮಲಗಿ ೨–೩ ತಾಸುಗಳ ವರೆಗೆ ಆನಂದದಿಂದ ಕಾಲ ಕಳೆದು ಶಾಂತನಾಗಿ ಪುನಃ ಮಂದಿರದ ಕಡೆಗೆ ಮರಳಿ ಬರುತ್ತಿದ್ದನು.

ಈ ವಿಧವಾದ ಬಾಲ ಲೀಲೆಗಳನ್ನೂ, ವಿಚಿತ್ರವಾದ ನಡೆ ನುಡಿಗಳನ್ನೂ, ಮುಖದ ದಿವ್ಯ ತೇಜಸ್ಸನ್ನೂ ನೋಡುತ್ತ ಜನರು — ಈ ಬಾಲಕನು ಮುಂದೆ ಜಗತ್ಪ್ರಸಿದ್ಧನೂ ಮಹಿಮಾ ಶಾಲಿಯೂ ಆಗಬಹುದೆಂದು ಊಹಿಸಿ ತಮ್ಮ ತಮ್ಮೊಳಗೆ ಮಾತಾಡುತ್ತಿದ್ದರು. ಈ ಮೂರ್ತಿಯು ಜನಿಸಿದ ಮೇಲಂತೂ ತಂದೆಯ ಮನೆಯಲ್ಲಿ ಧನ ಧಾನ್ಯಗಳು ಸಮೃದ್ಧಿಯಾದವು. ನಾನಾರೀತಿಯಿಂದ ಸುಖ ಸಂತೋಷಗಳೂ ಮಾನ ಮರ್ಯಾದೆಗಳೂ ಹೆಚ್ಚುತ್ತಾ ಬಂದವು. ತರುವಾಯ ಮತ್ತೊಬ್ಬ ಪುತ್ರನೂ ಜನಿಸಿದನು.

ಜಗತ್ತಿನಲ್ಲಿ ಮಾನವರಿಗೆ ಗುರುಕೃಪೆಯಿಂದ ಸತಿ ಪುತ್ರರೂ ಧನ ಧಾನ್ಯಾದಿ ಸಂಪದಭಿವೃದ್ಧಿಯಾದರೆ ಪೂರ್ವಾಪರ ವಿಚಾರ ಮಾಡದೆ ಧನಮದ ಯೌವನಮದಗಳಿಂದ ಕೇವಲ ಅಹಂಕಾರಿಗಳಾಗುವದು ಪ್ರಸಿದ್ಧವದೆ. ಆದರೆ ಈ ಚನ್ನಬಸವಾರ್ಯರು ಹಾಗೆ ಗರ್ವಾನ್ವಿತರಾಗದೆ ಆಹಾ! ಗುರುದೇವನ ಕೃಪೆಯಿಂದ ನನ್ನ ಮನಸ್ಸಿನಂತೆ ಇಷ್ಟಾರ್ಥಗಳು ಪೂರೈಸಿದವು. ಇಂತಹ ಸಮಯದಲ್ಲಿ ಮದಾಂಧನಾಗಬಾರದೆಂದು ಸದ್ವಿವೇಕದಿಂದ ಸನ್ಮಾರ್ಗ ಸತ್ಕ್ರಿಯೆಗಳಲ್ಲಿ ಪ್ರವೃತ್ತರಾಗಿದ್ದು, ಉಜ್ಜಯಿನೀ ಕ್ಷೇತ್ರದಲ್ಲಿ ಪ್ರತಿ ವರುಷ ವೈಶಾಖ ಶುದ್ಧ ಪಂಚಮೀ ತಿಥಿಗೆ ಅತ್ಯಂತ ವೈಭ

ಸದಿಂದ ಜರಗುವ ಶ್ರೀಮರುಳಸಿದ್ಧೇಶ್ವರ ಮಹಾ ಸ್ವಾಮಿಯ ರಥೋತ್ಸವಕ್ಕೆ ಆಗಾಗ್ಗೆ ತಮ್ಮ ಸತಿ ಪುತ್ರಾದಿಗಳನ್ನೊಡಗೂಡಿಕೊಂಡು ಹೋಗಿ ಯಾತ್ರಾಮಹೋತ್ಸವಾದಿಗಳನ್ನು ನೋಡಿ, ಹಾಗು ಸದ್ಧರ್ಮ ಸಿಂಹಾಸನಾಧಿಪತಿಗಳಾದ ಜಗದ್ಗುರುಗಳವರ ಸೇವಾ ಸತ್ಕಾರಗಳನ್ನು ಮಾಡಿ, ಫಲಾಶೀರ್ವಾದಗಳನ್ನು ಪಡೆದು, ಸ್ವಗ್ರಾಮಕ್ಕೆ ತೆರಳುವ ಪದ್ಧತಿಯು ಇತ್ತು.

## ಶ್ರೀ ಮರುಳಸಿದ್ಧೇಶ್ವರ ಮೂರ್ತಿಯ
## ಕೃ ಪಾ ದೃ ಷ್ಟಿ

ಈ ಪ್ರಕಾರ ಇರುತ್ತಿರಲು ಒಂದು ಸಾರೆ ಈ ಬಾಲಕನು ೧೪ ವರುಷ ವಯಸ್ಸಿನವನಾಗಿ ತನ್ನ ತಂದೆಯವರ ಸಂಗಡ ಶ್ರಾವಣಮಾಸದ ಪೂಜೋತ್ಸವಾದಿಗಳನ್ನು ನೋಡಲು ಉಜ್ಜಯಿನೀ ಮಹಾ ಸಂಸ್ಥಾನಕ್ಕೆ ಹೋದನು. ಆ ದಿವಸ ಸೋಮವಾರವಿದ್ದದರಿಂದ ಶ್ರೀಮರುಲಸಿದ್ಧೇಶ್ವರ ಮೂರ್ತಿಯನ್ನು ಪಲ್ಲಕ್ಕಿಯಲ್ಲಿರಿಸಿ, ಭಜನ ಭಜಂತ್ರಿ ವಾದ್ಯಗಳೊಡನೆ ಅನೇಕ ಜನರು ಸೇರಿ ಪಲ್ಲಕ್ಕಿ ಉತ್ಸವ ಮಾಡಲಾರಂಭಿಸಿದರು. ಆಗ ಈ ( ನಮ್ಮ ಚರಿತ್ರಾಧಿಪತಿಗಳಾದ ಸಿದ್ಧಲಿಂಗಾರ್ಯ ) ಬಾಲಕನು ಆ ಪಲ್ಲಕ್ಕಿಯ ಹತ್ತರ ಬಲಭಾಗದಲ್ಲಿಯೇ ಇದ್ದು, ಉತ್ಸವ ಮೂರ್ತಿಯನ್ನು ನೋಡುತ್ತ ದೇವಾಲಯವನ್ನು ಪ್ರದಕ್ಷಣೆ ಮಾಡುವಾಗ ಆ ಮಹಾ ಮೂರ್ತಿಯು ತನ್ನ ಬೆಳ್ಳಿಯ ಮುಖವನ್ನು ಬಲಭಾಗಕ್ಕೆ ತಿರುಗಿಸಿ ಈ ಬಾಲಕನನ್ನೇ ನೋಡುವದಾಯಿತು. ಆ ಮೂರ್ತಿಯನ್ನು ಈತನು ತಿರುಗಿ ನೋಡುತ್ತ ನೋಡುತ್ತ ಒಂದು ಸಾರೆ ಪ್ರದಕ್ಷಣೆ ಮಾಡಿದನು. ಆಗ ಇದೇನು! ಈ ಮಹಾಸ್ವಾಮಿಯ ಮುಖವು ನನ್ನ ಕಡೆಗೇ ನೋಡುತ್ತಿರುವದಲ್ಲಾ ಇರಲಿ, ಎಂದು ಆ ಪಲ್ಲಕ್ಕಿಯ ಎಡಭಾಗಕ್ಕೆ ಬಂದು ಪಲ್ಲಕ್ಕಿಯನ್ನು ಹಿಡಿದುಕೊಂಡು ಶ್ರೀ ಮೂರ್ತಿಯನ್ನು ನೋಡುತ್ತ ಹೋಗಲು ತಕ್ಷಣವೇ ಶ್ರೀ ಮೂರ್ತಿಯು ಮುಖವನ್ನು ಎಡಭಾಗಕ್ಕೆ ತಿರುಗಿಸಿ ಪುನಃ ಈ ಬಾಲಕನನ್ನು ನೋಡಲಿಕ್ಕೆ ಹತ್ತಿತು. ಆಗ ಬಾಲಕನಿಗೆ ಒಂದು ವಿಧವಾದ ಆನಂದವೂ, ಆಶ್ಚರ್ಯವೂ, ಕಿಂಚಿತ್ ಭಯವೂ ತೋರಿದವು. ಅಷ್ಟರಲ್ಲೇ ಅರ್ಚಕರು ದೇವರನ್ನೆ ದುರ್ಗೊಂಡು ಮಂಗಲ ಮಾಡಿ ದೇವಾಲಯದೊಳಗೆ ಭದ್ರಾಸನದಮೇಲೆ ಮೂರ್ತಿಗೊಳಿಸಿದರು. ಬಳಿಕ ಈ ವಿಷಯವನ್ನು ಬಾಲಕನು ತನ್ನ ತಂದೆಯ ಮುಂದೆ ತಿಳಿಸಲು ಅವರು ಆನಂದಾಶ್ಚರ್ಯ ಭರಿತರಾಗಿ— ತಮ್ಮಾ, ಇದು ಶುಭಸೂಚನೆಯು; ಮಹಾಸ್ವಾಮಿಯ ಕೃಪಾದೃಷ್ಟಿಯು ನಿನ್ನಮೇಲೆ ಪೂರ್ಣವಾಯಿತೆಂದು ಹೇಳಿದರು.

ಮುಂದೆ ಮತ್ತೊಂದು ಸಮಯದಲ್ಲಿ ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧಿಪತಿಗಳಾದ **ಶ್ರೀಜಗದ್ಗುರು ಚರಪಟ್ಟಾಧ್ಯಕ್ಷ ಮರುಳಸಿದ್ಧರಾಜದೇಶಿಕೇಂದ್ರಮಹಾಸ್ವಾಮಿಗಳವರು** ತಮ್ಮ ಸರಕೀಟು ಶಿಬ್ಬಂದಿಯೊಡಗೂಡಿ ಸಂಚಾರ

ಮಾಡುತ್ತ ಈ ಬಂಗಾರನಾಯಕನ ಹಳ್ಳಿಗೆ ಮುಕ್ಕಾಮು ಮಾಡಿದರು. ಸಂಸ್ಥಾನ ಪದ್ಧತಿ ಪ್ರಕಾರ ಕಾರ್ಯಕ್ರಮಗಳು ನಡೆದವು. ಪ್ರತಿದಿವಸ ವೇ|| ಚನ್ನಬಸವಾರ್ಯರು ತಮ್ಮ ಸಂಗಡ ಈ ಬಾಲಕನನ್ನು ಕರೆದುಕೊಂಡು ಬಂದು ವಂದಿಸಿ ಸನ್ನಿಧಿಯಲ್ಲಿ ಕುಳಿತು ಸಂಭಾಷಣೆ ಮಾಡುತ್ತಿದ್ದರು.

ಒಂದು ದಿವಸ ಮಹಾಸ್ವಾಮಿಗಳವರು ಈ ಬಾಲಕನ ಸ್ಫುಟವಾದ ನುಡಿಗಳನ್ನೂ, ಮನೋಹರವಾದ ರೂಪ ಲಾವಣ್ಯಗಳನ್ನೂ, ತೇಜೋವಿಶಿಷ್ಟವಾದ ಮುಖಾರವಿಂದವನ್ನೂ ಸಂಪೂರ್ಣ ಕೃಪಾದೃಷ್ಟಿಯಿಂದ ನೋಡಿ (ಮನದೊಳಗೆ) ಈ ಬಾಲಕನು ಸಲ್ಲಕ್ಷಣವಾಗಿದ್ದಾನೆ. ನಮ್ಮ ಪೀಠಾಧಿಕಾರ ಮಾಡಿದರೆ ಒಳ್ಳೇ ಸಮರ್ಥನೂ, ಮಹಿಮಾಶಾಲಿಯೂ, ಜಗದ್ವಿಖ್ಯಾತನೂ ಆಗಬಹುದೆಂದು ಯೋಚನೆ ಮಾಡಿ, ಬಳಿಕ ತಂದೆಯಾದ ವೇ|| ಚನ್ನಬಸವಾರ್ಯರನ್ನು ಕುರಿತು— ಮಠಾಧಿಕಾರಿಗಳೇ, ನಮ್ಮ ಪೀಠಕ್ಕೆ ಈ ನಿಮ್ಮ ಪುತ್ರನನ್ನು ಒಪ್ಪಿಸುವಿರಾ? ಇವನಿಗೆ ಅಧಿಕಾರ ಮಾಡುತ್ತೇವೆ. ನಿಮಗೆ ಸುಖವಾಗುವದು ಎಂದು ಪ್ರಶ್ನೆ ಮಾಡಿದರು.

ಈ ಮಾತಿಗೆ ಚನ್ನಬಸವಾರ್ಯರು ಪ್ರತಿ ಮಾತಾಡದೆ ಮಹಾನುಭಾವರೇ ಹಾಗೇ ಆಗಲಿ, ತಮ್ಮ ಇಷ್ಟದಂತೆ ಈ ಬಾಲಕನನ್ನು ಒಪ್ಪಿಸುವೆನು. ತಮ್ಮ ಅಪೇಕ್ಷೆಗೆ ಪ್ರತಿಕೂಲವಿಲ್ಲ ಎಂದು ಸಂತೋಷದಿಂದ ನುಡಿದರು.

ಮಹಾಸ್ವಾಮಿಗಳವರು ಹರುಷಚಿತ್ತರಾಗಿ ಒಳ್ಳೇದು ಇರಲಿ, ಈಗ ನಾವು ಪ್ರಯಾಣ ಮಾಡುತ್ತೇವೆ. ಮುಂದೆ ಸಮಯ ಬಂದಾಗ ನಿಮ್ಮನ್ನು ಕರೆಯಿಸಿಕೊಳ್ಳುತ್ತೇವೆ. ಆ ಕಾಲಕ್ಕೆ ನೀವು ಬಾಲಕನೊಡನೆ ಬರತಕ್ಕದ್ದು; ಹೀಗೆಂದಪ್ಪಣೆ ಮಾಡಿ ಆಶೀರ್ವದಿಸಿ ಮುಂದಕ್ಕೆ ಪ್ರಯಾಣ ಬೆಳೆಯಿಸಿದರು. ಬಾಲಕನ ತಂದೆ ತಾಯಿಗಳು ಮನದೊಳು ತುಂಬಾ ಸಂತೋಷಭರಿತರಾಗಿ ಮಹಾ ಸ್ವಾಮಿಗಳವರು ನಮ್ಮ ಬಾಲಕನ ಮೇಲೆ ಕೃಪಾದೃಷ್ಟಿ ಇಟ್ಟು ದಯಮಾಡಿಸಿದರು. ಮುಂದೆ ಈತನ ದೈವಗತಿಯು ಹೇಗದೆಯೋ ನೋಡಬೇಕು ಹೀಗೆಂದು ಮಾತುಗಳಾಡಿ ಕೆಲವು ದಿವಸ ಕಾಲ ಕಳೆದರು.

## ಶ್ರೀಮದುಜ್ಜಯಿನೀ ಸದ್ಧರ್ಮ ಪೀಠಕ್ಕೆ ಶ್ರೀ ಜಗದ್ಗುರು ಸ್ಥಿರಪಟ್ಟಾಧಿಕಾರ ಮತ್ತು ಚರಪಟ್ಟಾಧಿಕಾರ ಸಮಾರಂಭ

ಭುವನಪ್ರಸಿದ್ಧ ಶ್ರೀಜಗದ್ಗುರು ಪಂಚಪೀಠಗಳಲ್ಲಿ ಒಂದಾದ ಉಜ್ಜಯಿನೀ ಜಗದ್ಗುರು ಮಹಾ ಪೀಠಕ್ಕೆ ಪ್ರಾಚೀನ ಕಾಲದಿಂದಲೂ ಒಬ್ಬ ಶ್ರೀಗುರು ಪಟ್ಟಾಧಿಕಾರಿಗಳೂ ಇಬ್ಬರು ಚರಪಟ್ಟಾಧಿಕಾರಿಗಳೂ ವ್ಯವಹರಿಸುತ್ತಿರುವ ಸಂಪ್ರದಾಯವು ರೂಢಿಯಲ್ಲಿ ಬಂದಿತ್ತು. ತತ್ಕಾಲದಲ್ಲಿ ಚರಪಟ್ಟಾಧಿಕಾರಾರೂಢರಾಗಿದ್ದ ಶ್ರೀ|| ಜ|| ಮರುಳಸಿದ್ಧ ಶಿವಾಚಾರ್ಯ ಮಹಾಸ್ವಾಮಿಗಳವರು ಮೇಧಾವಿಗಳಾಗಿಯೂ, ಮಹಾ

ಚತುರೋಪಾಯ ಉಳ್ಳವರಾಗಿಯೂ ಇದ್ದು; ಕೆಲವು ಕಾಲ ಅಧಿಕಾರ ನಡೆಯಿ ಸುತ್ತಾ ಬಂದರು. ತರುವಾಯ ಈ ಮಹಾ ಶ್ರೀಗಳವರು ಈ ನಮ್ಮ ಪೀಠದ ಪ್ರಾಚೀನ ಪದ್ಧತಿಯಂತೆ ಇನ್ನೊಂದು ಚರಪಟ್ಟಾಧಿಕಾರವನ್ನೂ ಹಾಗೂ ಗುರುಪಟ್ಟಾಧಿಕಾರವನ್ನೂ ನೆರವೇರಿಸಬೇಕೆಂದಾಲೋಚಿಸಿ; ತಮಗೆ ಕೇವಲಾಪ್ತರಾದ ಭಕ್ತಾದಿಗಳನ್ನೂ ಪ್ರಮುಖರನ್ನೂ ಕರೆಯಿಸಿಕೊಂಡು ಉಭಯ ಜಗದ್ಗುರು ಪಟ್ಟಾಧಿಕಾರ ಜರುಗಿಸುವದನ್ನು ನಿಶ್ಚಯ ಮಾಡಿ, ಆ ಸಮಾರಂಭಕ್ಕೆ ಬೇಕಾಗುವ ಸಕಲ ವಿಧವಾದ ಸಾಹಿತ್ಯಗಳನ್ನು ಸಿದ್ಧಮಾಡಿಸಿದರು.

ತದನಂತರ ಈ ಮೊದಲು ತಮ್ಮ ಕೃಪಾದೃಷ್ಟಿಗೆ ಪಾತ್ರರಾದ ಬಂಗಾರನಾಯಕನ ಹಳ್ಳಿ ಗ್ರಾಮದ ಬೃಹನ್ಮಠದ ವೇದಮೂರ್ತಿ ಚನ್ನಬಸವಾರ್ಯರಿಗೆ ಆಶೀರ್ವಾದ ಪತ್ರವನ್ನು ಬರೆದು ನಿಮ್ಮ ಪುತ್ರನೊಡಗೂಡಿ ಬರತಕ್ಕದ್ದೆಂದು ಸೂಚಿಸಲು, ಅದೇ ಪ್ರಕಾರ ತಮ್ಮ ಬಾಲಕನೊಡಗೂಡಿ ಉಜ್ಜಯಿನಿಗೆ ಬಂದು ಜಗದ್ಗುರುಗಳಿಗೆ ವಂದಿಸಿದರು. ಮತ್ತು ಉಜ್ಜಯಿನಿಗೆ ಸಮೀಪದಲ್ಲಿರುವ ತುಂಬರಗುದ್ದಿ ಗ್ರಾಮದ ಬೃಹನ್ಮಠಾಧಿಕಾರಿಗಳಾದ **ವೇ|| ವಿರೂಪಾಕ್ಷಶಾಸ್ತ್ರಿಗಳೆಂಬುವವರು** ಈ ಮೊದಲೇ ಶ್ರೀ ಕಾಶೀಕ್ಷೇತ್ರದಲ್ಲಿ ಜಂಗಮವಾಡಿ ಮಠದಾಶ್ರಯದಿಂದ ಶಾಸ್ತ್ರಾಭ್ಯಾಸ ಮಾಡಿ ಪಂಡಿತರಾಗಿ ಬಂದಿದ್ದರು. ಇವರನ್ನೇ ಗುರುಪಟ್ಟಾಧಿಕಾರಕ್ಕೆ ನಿಶ್ಚಯಿಸಿ ಆಹ್ವಾನಿಸಿಕೊಂಡರು.

ಬಳಿಕ ದೇಶಮಧ್ಯ ಮುಂಬಯಿ, ಮದ್ರಾಸ, ನೈಜಾಂ, ಮೈಸೂರು ಪ್ರಾಂತಗಳ ಸಮಸ್ತ ಭಕ್ತ ಮಾಹೇಶ್ವರಾದಿ ಮಂಡಳಿಗೆ ಉಜ್ಜಯಿನೀ ಪೀಠದ ಗುರು ಚರ ಪಟ್ಟಾಧಿಕಾರ ಸಮಾರಂಭ ನೆರವೇರಿಸಲು ಸರ್ವರೂ ಆಗಮಿಸತಕ್ಕದ್ದೆಂದು ಪ್ರಸಿದ್ಧ ಪತ್ರಿಕೆಗಳನ್ನು ರವಾನೆ ಮಾಡಿದರು. ಮತ್ತು ಮಹಾಸಂಸ್ಥಾನ ಬೃಹನ್ಮಠ ದೇವಾಲಯಾದಿಗಳನ್ನು ರಂಭಾಸ್ತಂಭ, ಧ್ವಜ, ಪತಾಕೆಗಳಿಂದಲೂ, ತಳಿರು-ತೋರಣ, ಚಿತ್ರ ವಿಚಿತ್ರತರ ಅಲಂಕಾರಗಳಿಂದಲೂ ಅತ್ಯಂತ ಮನೋಹರವಾಗಿ ಶೃಂಗರಿಸಲಾಯಿತು. ಮಹಾ ಪೀಠಾಧಿಕಾರವು ಪರಮ ಸಂಭ್ರಮದಿಂದ ಜರುಗುವದೆಂಬ ಸದ್ವಾರ್ತೆಯನ್ನು ಕೇಳಿ, ಅನೇಕ ಸಹಸ್ರಾವಧಿ ಶಿವಭಕ್ತ ಸಮೂಹವು ೧–೨ ದಿವಸ ಮುಂಚಿತವಾಗಿಯೇ ನಾನಾ ಪ್ರಾಂತಗಳಿಂದ ಬಂದು ಉಜ್ಜಯಿನೀಪುರವನ್ನು ಸೇರಿದರು. ಗುರುಭಕ್ತಾವಳಿಗೆ ಅನ್ನೋದಕಗಳ ವ್ಯವಸ್ಥೆಯು ಚನ್ನಾಗಿ ಏರ್ಪಾಟು ಮಾಡಲ್ಪಟ್ಟಿತು. ಅನೇಕ ವಾದ್ಯ ವಿಶೇಷಗಳೂ ಘೋರ್ಗರೆಯುತ್ತಿದ್ದವು. ಸರ್ವತ್ರ ಆನಂದಮಯವಾಗಿತ್ತು.

**ಶ್ರೀ ಶಾಲಿವಾಹನ ಶಕ ೧೮೨೮ ನೇ ಪರಾಭವನಾಮ ಸಂವತ್ಸರದ ವೈಶಾಖ ಬಹುಳ (೫) ಪಂಚಮೀ ಭಾನುವಾರ** ಉದಯ ಶುಭ ಮುಹೂರ್ತದಲ್ಲಿ ಶ್ರೀ ಜ|| ಮರುಳಸಿದ್ಧ ಶಿವಾಚಾರ್ಯ ಮಹಾ ಸ್ವಾಮಿಗಳವರ ಹಸ್ತದಿಂದ ( ತುಂಬ್ರ

ಗುದ್ದಿ ) ವೇ|| ವಿರೂಪಾಕ್ಷಶಾಸ್ತ್ರಿಗಳವರಿಗೆ ಶ್ರೀ ಜ|| ಸ್ಥಿರ ಪಟ್ಟಾಧಿಕಾರವು ಅನುಗ್ರಹಿ ಸಲ್ಪಟ್ಟು ಇವರಿಗೆ ಶ್ರೀ ಜ|| ಚನ್ನಬಸವ ಶಿವಾಚಾರ್ಯ ಮಹಾ ಸ್ವಾಮಿಗಳೆಂಬ ನಾಮಾಂಕಿತವು ಕರೆಯಲ್ಪಟ್ಟಿತು. ಮತ್ತು ಬಂಗಾರನಾಯಕನಹಳ್ಳಿ ಬೃ|| ಮಠದ ಚನ್ನಬಸವಾರ್ಯರ ಪುತ್ರನಿಗೆ ಶ್ರೀ ಜ|| ಚರ ಪಟ್ಟಾಧಿಕಾರವು ಅನುಗ್ರಹಿಸಲ್ಪಟ್ಟು, ಇವರಿಗೆ ಶ್ರೀ ಜ|| ಸಿದ್ಧಲಿಂಗ ಶಿವಾಚಾರ್ಯ ಮಹಾ ಸ್ವಾಮಿಗಳೆಂಬ ಶುಭ ನಾಮಕರಣದಿಂದ ಕರೆಯಲ್ಪಟ್ಟಿತು.

ಈ ಸದ್ಧರ್ಮ ಸಿಂಹಾಸನಾರೋಹಣ ಮಾಡಿದ ಅಭಿನವ ಜಗದ್ಗುರು ಮೂರ್ತಿಗಳವರಲ್ಲಿ ಈ ಕೆಳಗೆ ವಿವರಿಸಿದಂತೆ ಧರ್ಮಶಾಸ್ತ್ರದಲ್ಲುಕ್ತವಾದ ಗುರು ಲಕ್ಷಣಾದಿಗಳು ತೋರುತ್ತಿದ್ದವು.

ಶ್ಲೋಕ — ಆತ್ಮ ತತ್ವ ವಿಚಾರಜ್ಞಂ । ವಿಮುಕ್ತ ವಿಷಯ ಭ್ರಮಂ ॥
ಶಿವಸಿದ್ಧಾಂತ ತತ್ವಜ್ಞಂ । ಛಿನ್ನ ಸಂದೇಹ ವಿಭ್ರಮಂ ॥ ೧ ॥
ಸರ್ವತಂತ್ರ ಪ್ರಯೋಗಜ್ಞಂ । ಧಾರ್ಮಿಕಂ ಸತ್ಯವಾದಿನಂ ॥
ಕುಲಕ್ರಮ ಗತಾಚಾರಂ । ಕುಮಾರ್ಗಾಚಾರ ವರ್ಜಿತಂ ॥ ೨ ॥
ಶಿವಧ್ಯಾನಪರಂ ಶಾಂತಂ । ಶಿವತತ್ವ ವಿವೇಕಿನಂ ॥
ಭಸ್ಮೋದ್ಧೂಲನ ನಿಷ್ಣಾತಂ । ಭಸ್ಮತತ್ವ ವಿವೇಕಿನಂ ॥ ೩ ॥
ತ್ರಿಪುಂಡ್ರಧಾರಣೋತ್ಕಂಠಂ । ಧೃತರುದ್ರಾಕ್ಷ ಮಾಲಿಕಾಂ ॥
ಲಿಂಗಧಾರಣ ಸಂಯುಕ್ತಂ । ಲಿಂಗಪೂಜಾ ಪರಾಯಣಂ ॥ ೪ ॥
ಲಿಂಗಾಂಗಯೋಗ ತತ್ವಜ್ಞಂ । ನಿರೂಢಾದ್ವೈತ ವಾಸನಂ ।
ಲಿಂಗಾಂಗಸ್ಥಲ ಭೇದಜ್ಞಂ । ಶ್ರೀಗುರುಂ ಶಿವವಾದಿನಂ ॥ ೫ ॥
ಸೇವೇತ ಪರಮಾಚಾರ್ಯಂ । ಶಿಷ್ಯೋಭಕ್ತಿ ಭಯಾನ್ವಿತಃ ॥

ಅನಂತರ ಸಾಯಂಕಾಲಕ್ಕೆ ಶೃಂಗರಿಸಲ್ಪಟ್ಟ ಪಲ್ಲಕ್ಕಿಯಲ್ಲಿ ನೂತನ ಜಗದ್ಗುರುಗಳವರನ್ನು ಮೂರ್ತಗೊಳಿಸಿ, ಆ ಉಜ್ಜಯಿನೀ ಗ್ರಾಮದ ಮುಖ್ಯ ಬೀದಿಗಳಲ್ಲಿ ಅನೇಕ ವಾದ್ಯ-ವೈಭವಗಳಿಂದಲೂ, ಸಕಲ ಬಿರುದಾವಳಿಗಳಿಂದಲೂ ಮಹೋತ್ಸವವು ಹೊರಟು ಮಂದಗತಿಯಿಂದ ಸಾಗುತ್ತ ಮಹಾಸಂಸ್ಥಾನ ಮಠಕ್ಕೆ ಆಗಮಿಸಿ, ಶ್ರೀ ಮರುಳಸಿದ್ಧೇಶ್ವರ ಮಹಾಲಿಂಗಕ್ಕೆ ಫಲ-ಪುಷ್ಪಾದಿಗಳನ್ನರ್ಪಿಸಿ ಮಂಗಲಮಾಡಿ ಬಂದು ಸರ್ವರ ಜಯಘೋಷದೊಡನೆ ಶ್ರೀ ಜಗದ್ಗುರು ಸದ್ಧರ್ಮ ಸಿಂಹಾಸನದಲ್ಲಿ ಮಂಡಿಸಿದರು.

ಆಕ್ಷಣವೇ ಸಕಲ ಶಿವಭಕ್ತಮಂಡಲಿಯು ಕಪ್ಪಗಾಣಿಕೆಯ ರೂಪದಿಂದ ತಮ್ಮ ಶಕ್ತ್ಯಾನುಸಾರ ಧನವನ್ನೂ, ವಸ್ತ್ರಾಭರಣಾದಿ ಆಹೇರುಗಳನ್ನೂ ಭಕ್ತಿಯಿಂದ ಸಮರ್ಪಿಸಿದರು. ಬಳಿಕ ಸಮ್ಮಿಲಿತರಾದ ಸಮಸ್ತ ವೈದಿಕರೂ ಪ್ರಾಚೀನ ಪದ್ಧತಿ ಪ್ರಕಾರ ಮಹಾಸಂಪುಟಕ್ಕೆ ತಮ್ಮ ತಮ್ಮ ಹೆಸರುಗಳಿಂದ ಸಹಿಮಾಡಿದರು. ಮತ್ತು ಧರ್ಮ ಪೀಠದಲ್ಲಿ ಮಂಡಿಸಿರುವ ದಿವ್ಯ ತೇಜಃಪುಂಜರಾದ ಉಭಯ ಜಗದ್ಗುರುಗಳವರನ್ನು

ಉಜ್ಜಯಿನೀ ಪೀಠಕ್ಕೆ ಸ್ಥಿರಪಟ್ಟಾಧಿಕಾರ ವಹಿಸಿದ



ಶ್ರೀ ಜಗದ್ಗುರು ಚನ್ನಬಸವಶಿವಾಚಾರ್ಯ ಮಹಾಸ್ವಾಮಿಗಳವರು

ಉಜ್ಜಯಿನೀ ಪೀಠದ ಚರಪಟ್ಟಾಧಿಕಾರ ನಡೆದ ಸಮಯದಲ್ಲಿ



ಚಿಕ್ಕವಯಸ್ಸಿನಲ್ಲಿ ಶ್ರೀ ಜ॥ ಸಿದ್ಧಲಿಂಗಶಿವಾಚಾರ್ಯರು

ಪ್ರೇಮಪೂರಿತ ದೃಷ್ಟಿಯಿಂದ ನೋಡುತ್ತ, ಆಹಾ! ಇಂದಿಗೆ ವೀರಶೈವ ಸಮಾಜದ ಭಾಗ್ಯೋದಯವಾಯಿತು! ನಮ್ಮ ಜನ್ಮಗಳು ಸಾರ್ಥಕವಾದವು! ನಾವು ಧನ್ಯರಾದೆವೆಂದು ಆನಂದೋದ್ಗಾರಗಳನ್ನು ಹೊರಸೂಸುತ್ತ ಗುರುಪ್ರಸಾದವನ್ನು ಸ್ವೀಕರಿಸಿ, ಫಲಾಶೀರ್ವಾದಗಳನ್ನು ಪಡೆದು ತಮ್ಮ ತಮ್ಮ ಗ್ರಾಮಗಳಿಗೆ ತೆರಳಿದರು.

---

## ಕೊಟ್ಟೂರು ನಗರದಲ್ಲಿ ಪ್ರಥಮ ಮಹೋತ್ಸವವು

ಈ ಕೊಟ್ಟೂರು ಪಟ್ಟಣವು ಶ್ರೀ ಪಂಪಾಕ್ಷೇತ್ರಕ್ಕೆ ನೈಋತ್ಯ ದಿಕ್ಕಿನಲ್ಲಿದ್ದು, ಹೊಸಪೇಟೆ ಸ್ಟೇಶನ್ನಿನಿಂದ ಇಲ್ಲಿಗೆ ( ಕೊಟ್ಟೂರಿಗೆ ) ರೈಲುಮಾರ್ಗ ಬಂದು ನಿಂತಿದೆ. ಇದಕ್ಕೆ ದಕ್ಷಿಣದಿಕ್ಕಿನಲ್ಲಿ ಒಂಭತ್ತು ಮೈಲು ದೂರದೊಳು ಉಜ್ಜಯಿನೀ ಕ್ಷೇತ್ರವು ಇರುತ್ತದೆ.

ಪೂರ್ವದಲ್ಲಿ (೧) ಕೊಟ್ಟೂರೇಶ (೨) ತಿಪ್ಪೆರುದ್ರೇಶ (೩) ಕೋಲಶಾಂತೇಶ (೪) ಕೆಂಪುಗಣಾಧೀಶ (೫) ಮದ್ದಾನೇಶ ಎಂಬ ಪಂಚಗಣಾಧೀಶ್ವರರು ಧರಣಿಗವತರಿಸಿ ಅನೇಕ ಮಹಿಮಾತಿಶಯಗಳನ್ನು ನಡೆಯಿಸಿ, ಕೆಲವು ಕಾಲಾನಂತರ ತಮಗೆ ಆನಂದಸ್ಥಲಗಳಾದ (೧) ಕೊಟ್ಟೂರು (೨) ನಾಯ್ಕನಹಟ್ಟಿ (೩) ಅರಸೀಕೆರೆ (೪) ಹರಪನಹಳ್ಳಿ (೫) ಕೂಲಹಳ್ಳಿ ಎಂಬ ಪಂಚಗ್ರಾಮಗಳಲ್ಲಿ ನೆಲೆಗೊಂಡಿದ್ದಾರೆ.

ಶ್ರೀ ಗುರುವೃಷಭೇಶನೆಂಬ ಪವಿತ್ರಾಭಿಧಾನದಿಂದ ಮೆರೆಯುವ ಮಹಾಸ್ವಾಮಿಯು ಇದೇ ಕೊಟ್ಟೂರಲ್ಲಿ ಮೊದಲು ಹುಚ್ಚನಾಗಿ ನಾನಾರೀತಿಯಿಂದ ಪವಾಡಗಳನ್ನು ನಡೆಯಿಸುತ್ತ ಮೂರುಕಲ್ಲುಮಠ ( ದೇವಾಲಯ ) ದಲ್ಲಿ ವಾಸಮಾಡಿದ್ದನು. ಬಾಲಲೀಲಾ ನಡೆಸಿ ತೊಟ್ಟಿಲಮಠದಲ್ಲಿದ್ದಾನೆ ಬಳಿಕ ಅಧಿಕಾರಮಾಡಿ ಹಿರಿಯಮಠದಲ್ಲಿ ವಿರಾಜಿಸುತ್ತಿರುವನು. ತರುವಾಯ ಯೋಗಸಮಾಧಿಯಲ್ಲಿ ಪ್ರವೇಶಮಾಡಿ (ಐಕ್ಯನಾಗಿ) ಗಚ್ಚಿನಮಠದಲ್ಲಿ ರಂಜಿಸುವನು. ಈ ಮಹಾತ್ಮನು ಸದ್ಭಕ್ತರಿಗೆ ವೀರಶೈವ ಮತಭೂಷಣಗಳಾದ ಅಷ್ಟಾವರಣಾದಿ ವಿವರಗಳನ್ನು ಬೋಧಿಸಿ, ಅನೇಕ ಮಹತ್ವಗಳನ್ನು ತೋರಿಸಿ ಗುರುಭಕ್ತಿ - ಶಿವಭಕ್ತಿ ಯುಕ್ತರನ್ನಾಗಿ ಮಾಡಿದ್ದಾನೆ. ಸಾಕ್ಷಾತ್ ಪರಶಿವರೂಪನಾದ ಈ ಮಹಾಸ್ವಾಮಿಯ ಅಗಾಧ ಮಹಿಮಾತಿಶಯಗಳು ಇಂದಿಗೂ ಪ್ರತ್ಯಕ್ಷಪ್ರಮಾಣದಿಂದ ತೋರುತ್ತಿರುವವು. ( ಶ್ರೀ ಕೊಟ್ಟೂರೇಶ್ವರ ಪುರಾಣದಲ್ಲಿ ಅನಂತಾನಂತ ವಿಷಯಗಳು ವಿವರಿಸಲ್ಪಟ್ಟಿರುತ್ತವೆ; ಅವಲೋಕನ ಮಾಡಬಹುದು. )

ಪ್ರತಿವರುಷ ಮಾಘ ಬ. ೧೦ ತಿಥಿಯುಕ್ತ ಮೂಲಾನಕ್ಷತ್ರದಲ್ಲಿ ಮಹಾಶ್ರೀ ರಥೋತ್ಸವ ಮುಂತಾದ ಕಾರ್ಯಕ್ರಮಗಳು ಮಹಾವೈಭವದಿಂದ ಜರಗುತ್ತವೆ. ಮತ್ತು ಈ ಜಾತ್ರೆಯ ಕಾಲಕ್ಕೆ ೨೦–೨೫ ಸಹಸ್ರ ಜನಸಂದಣಿ ಕೂಡುವದಲ್ಲದೆ ವಿವಿಧ ವ್ಯಾಪಾರಗಳು ನಡೆಯುವವು. ಈ ಸಮಯಕ್ಕೆ ಬಹುದೂರದ ಗ್ರಾಮಗಳಿಂದ ಅನೇಕ

ಶಿವಭಕ್ತಮಂಡಳಿಯು ಸತಿ-ಪುತ್ರಾದಿಗಳೊಡನೆ ಬಂದು, ಅತ್ಯಂತ ಭಕ್ತಿಯಿಂದ ಸೇವಾಸತ್ಕಾರಗಳನ್ನು ಮಾಡಿ, ಅನೇಕ ಮಾಹೇಶ್ವರ ಜಂಗಮ ಮೂರ್ತಿಗಳಿಗೆ ಮೃಷ್ಟಾನ್ನಪಾನಾದಿಗಳಿಂದ ಆನಂದಪಡಿಸುವರು. ಇಲ್ಲಿ ವರ್ತಕರೂ, ವ್ಯಾಪಾರಿಗಳೂ ಕಲಾಕೋವಿದರೂ ಇದ್ದಾರೆ. ವೀರಶೈವ ಜನಾಂಗವೇ ವಿಶೇಷವಾಗಿರುವದಲ್ಲದೆ, ಗುರು-ಲಿಂಗ-ಜಂಗಮ ಸೇವಾನಿರತರೂ, ಸದಾಚಾರನಿಷ್ಠರೂ ಇದ್ದು ಪರಮಮಹಿಮನಾದ ಶ್ರೀ ಮಹಾಸ್ವಾಮಿಯಲ್ಲಿ ಅಸಾಧಾರಣವಾದ ಭಕ್ತಿ-ವಿಶ್ವಾಸಗಳಿಟ್ಟು ವರ್ತಿಸುತ್ತಿರುವರು.

ಉಜ್ಜಯಿನೀ ಸದ್ಧರ್ಮಪೀಠಕ್ಕೆ ಅಧಿಕಾರವಾದ ಬಳಿಕ ಈ ಉಜ್ಜಯಿನೀ ಸಂಸ್ಥಾನಕ್ಕೆ ರಾಜಧಾನಿಯಂತಿರುವ ಕೊಟ್ಟೂರು ಪಟ್ಟಣದಲ್ಲಿ ನೂತನಾಧಿಕಾರ ಹೊಂದಿದ ಈ ಜಗದ್ಗುರುಗಳವರ ಪ್ರಥಮ ಮಹೋತ್ಸವ ನಡೆಯಿಸುವ ಪದ್ಧತಿಯು ಪ್ರಾಚೀನಕಾಲದಿಂದಲೂ ರೂಢಿಯಲ್ಲಿ ಬಂದಿರುತ್ತದೆ. ಅದೇಮೇರೆಗೆ ಕೊಟ್ಟೂರು ಗ್ರಾಮದಲ್ಲಿ ಮಹೋತ್ಸವವು ಜರುಗತಕ್ಕದ್ದೆಂದು ನಿರ್ಧರಿಸಲ್ಪಟ್ಟು, ಆ ಕೊಟ್ಟೂರು ವೀರಶೈವ ಮಂಡಲಿಯ ಪ್ರಮುಖರಾದ ಶ್ರೀ ಪಟ್ಟಚರಾಧಿಕಾರಿಗಳು, ಮಠಸ್ಥರು, ಗೌಡರು, ಶೆಟ್ಟರು, ಸಾಹುಕಾರರು, ಬಣಕಾರರು, ಬುದ್ಧಿವಂತರು, ರೈತರು ಮುಂತಾದ ಸಮಸ್ತ ದೈವದವರೂ ಸಮ್ಮಿಳಿತರಾಗಿ ಉಜ್ಜಯಿನೀ ಜಗದ್ಗುರು ಮಹಾಶ್ರೀಗಳವರ ಸನ್ನಿಧಿಗೆ ಬಂದು, ತಮ್ಮ ಗ್ರಾಮಕ್ಕೆ ಮಹೋತ್ಸವದೊಡನೆ ದಯಮಾಡಿಸಿಕೊಳ್ಳುವ ವಿಷಯವನ್ನು ಬಿನ್ನೈಸಿಕೊಂಡರು.

ಮಹಾಜಗದ್ಗುರುಗಳವರು ತಥಾಸ್ತು ಎಂದು ಅನುಮೋದನವನ್ನು ಕೊಡಲು, ಆಕೂಡಲೇ ದೈವದವರು ಅತ್ಯುತ್ಸುಕತೆಯಿಂದ ಸ್ವಗ್ರಾಮಕ್ಕೆ ಬಂದು ಮನೆ-ಮಠಾದಿಗಳನ್ನೂ, ದರ್ಬಾರ-ಮಂಟಪ, ಬಿಡದಿ-ಬಿಡಾರ, ಖಾಸಾಮಂದಿರಗಳನ್ನೆಲ್ಲ ಸಾರಣೆ-ಕಾರಣೆಗಳಿಂದಲೂ, ಧ್ವಜ-ಪತಾಕೆ, ತಳಿರು-ತೋರಣ, ರಂಭಾ-ಸ್ತಂಭಾದಿಗಳಿಂದಲೂ ಶೃಂಗರಿಸಿ, ನಗರ ಮಧ್ಯ ಅಲ್ಲಲ್ಲಿ ವಿಶ್ರಾಂತಿ ಮಂಟಪಾದಿಗಳನ್ನು ರಚಿಸಿ, ಪ್ರೇಕ್ಷಕ ಜನರಿಗೂ ಸರಿಯಾದ ವ್ಯವಸ್ಥೆ ಮಾಡಿದರು.

ಮಹಾಸವಾರಿಯು ಗಜ-ತುರಗ, ಸೇನಾ - ಸಿಬ್ಬಂದಿಗಳೊಡನೆ ಉಜ್ಜಯಿನಿಯಿಂದ ಹೊರಟು ಕೊಟ್ಟೂರಿಗೆ ಪರಾಭವ ಸಂ. ವೈಶಾಖ ಬ. ೧೩. ದಿನ ಆಗಮಿಸಿತು. ಮಹಾಸ್ವಾಮಿಗಳವರ ದಿವ್ಯಾಗಮನವನ್ನೇ ನಿರೀಕ್ಷಿಸುತ್ತಿದ್ದ ದೈವದವರು ಅನೇಕವಿಧ ವಾದ್ಯವಿಶೇಷಗಳಿಂದ ಇಸ್ತಕಪಾಲ ಸಹಿತ ಸನ್ನಿಧಿ ಎದುರ್ಗೊಂಡು ಮನೋಹರವಾಗಿ ಶೃಂಗರಿಸಲ್ಪಟ್ಟ ಪಲ್ಲಕ್ಕಿಯಲ್ಲಿ ಜಗದ್ಗುರು ಮಹಾಶ್ರೀಗಳವರನ್ನು ಮೂರ್ತಗೊಳಿಸಿ ಮಂಗಲವಾದ್ಯ ಧ್ವನಿಗಳಿಂದಲೂ, ವೇದಘೋಷ - ಪರಾಕುಗಳಿಂದಲೂ, ಮಹೋತ್ಸವವು ಮುಖ್ಯ ಮುಖ್ಯ ಬೀದಿಗಳಲ್ಲಿ ಬಹು ಸಂಭ್ರಮದೊಡನೆ ಮಂದಗತಿಯಿಂದ ಸಾಗುತ್ತ ದರ್ಬಾರ ಮಂಟಪಕ್ಕೆ ಬಂದು ತಲಪುವದಾಯಿತು.



ಶ್ರೀಗುರು ಕೊಟ್ಟೂರೇಶಮಹಾಸ್ವಾಮಿ, ಕೊಟ್ಟೂರು.

ತದನಂತರ ಮಹಾಸಂಸ್ಥಾನವಲ್ಲಿದ್ದ ಬಿ. ಎಂ. ಗುರುಸಿದ್ಧ ಶಾಸ್ತ್ರಿಗಳವರು ಗುರುಭಕ್ತಿ ವಿಷಯವಾಗಿ ಸರಸವಾದ ಭಾಷಣಮಾಡಿದ ಬಳಿಕ ಫಲಾಶೀರ್ವಾದಗಳು ಕೊಡಲ್ಪಟ್ಟವು. ಪ್ರತಿದಿವಸ ಶಿವಭಕ್ತಮಂಡಲಿಯ ಖಾನೇಸುಮಾರಿ ಲೆಖ್ಖದಪ್ರಕಾರ ಗುರುಕಾಣಿಕಾ, ಒಪ್ಪಂದ ವಸೂಲಿ ಕಾರ್ಯಕ್ರಮಗಳು ಜರುಗುತ್ತಲಿದ್ದವು.

ಕೊಟ್ಟೂರು ನಗರನಿವಾಸಿಗಳು ಜಗದ್ಗುರುಗಳ ಸೇವಾಸತ್ಕಾರಗಳನ್ನು ತನು-ಮನ-ಧನಗಳಿಂದ ಮಾಡಲಾಗಿ ಮಹಾಸ್ವಾಮಿಗಳವರು ಸಂತುಷ್ಟಚಿತ್ತರಾಗಿ ಆ ವೀರ ಶೈವ ದೈವದವರಿಗೆ ಸನ್ನಿಧಿಯಿಂದ ಅಮೂಲ್ಯ ವಸ್ತ್ರಾಭರಣಗಳನ್ನು ಗೌರವಾರ್ಥ ವಾಗಿ ಆಹೇರಮಾಡಲ್ಪಟ್ಟಿತು.

ಈ ಪ್ರಕಾರ ನಡೆದ ಬಳಿಕ ಮಹಾಸವಾರಿಯು ಪುನಃ ಉಜ್ಜಯಿನೀ ಮಹಾ ಸಂಸ್ಥಾನಮಠಕ್ಕೆ ಆಗಮಿಸುವದಾಯಿತು.

## ಅಷ್ಟಕ ಸ್ತುತಿ

ಜಯದೇಶಿಕವರ್ಯ ಸಿದ್ಧಲಿಂಗೋ । ಜ್ಜಯಿನೀ ಧರ್ಮ ಮೃಗೇಂದ್ರಪೀಠಭೂಷ ॥
ಮಯಿದೀನ ಜನೇ ನಿಧೇಹಿ ದೃಷ್ಟಿಂ । ನಮಿತಾಭೀಷ್ಟ ವರಪ್ರದಾನ ಶೀಲ ॥ ೧ ॥
ಶಿವಯೋಗ ಸಮಾಧಿ ನಿತ್ಯಲೋಲಾ । ಮಯಮಾಯಾ ಹರಣೈಕ ಕಾಲ ಕಾಲ ॥
ಭವಪಾಶ ನಿಕೃಂತನೈಕಮೂಲಾ । ತುಲಸಲ್ಲೀಲ ಸದಾದಯಾಲವಾಲ ॥ ೨ ॥
ಅಪರಾಧ ಸಹಸ್ರವಾನಹಂಭೋ । ಜಗದಾಚಾರ್ಯ ಜಗದ್ಗುರೋಜಯಿಷ್ಣೋ ॥
ಕೃಪಯಾ ಪರಿಪಾಹಿಮಾಂ ಸುದೀನಂ । ಕಿಮುವಾರಕ್ಷಿತ ರಿತ್ವಯೊತಿ ದೈನ್ಯಂ ॥ ೩ ॥
ಜಯ ಶ್ರೀ ಗುರುರಾಜ ಯೋಗಿನಾಥಾ । ಭವಲೀಲಾವಲಿ ಮಾತರುತ್ಪ್ರತಾಪ ॥
ಕವಿಕುಂಜರಗೀಯ ಮಾನಗಾಥಾ । ನತ ಸದ್ಭಕ್ತ ವಿತಾನ ಪಾರಿಜಾತ ॥ ೪ ॥
ನಮೋ ನಮಸ್ತೇ ಶಿವಧರ್ಮಪಾಲ । ನಮೋ ನಮಸ್ತೇ ವಿಜಿತಾಕ್ಷ ಜಾಲ ॥
ನಮೋ ನಮಸ್ತೇ ಮನುಬೋಧಶೀಲ । ನಮೋ ನಮಸ್ತೇ ವೃತಶಿಷ್ಯಮಾಲಾ ॥ ೫ ॥
ನಮೋ ನಮಸ್ತೇ ಸಿತಭಸ್ಮ ಫಾಲ । ನಮೋ ನಮಸ್ತೇ ಗುರುವಂಶ ಮೂಲ ॥
ನಮೋ ನಮಸ್ತೇ ಬಹು ಚಿತ್ರಲೀಲಾ । ನಮೋ ನಮಸ್ತೇ ವಿರತೀಶಪಾಲ ॥ ೬ ॥
ನಮೋ ನಮಸ್ತೇ ಭುವನಾಲಿ ರಕ್ಷ । ನಮೋ ನಮಸ್ತೇ ಧೃತಶಂಕರಾಕ್ಷ ॥
ನಮೋ ನಮಸ್ತೇ ವಿನಮದ್ವಿ ಪಕ್ಷ । ನಮೋ ನಮಸ್ತೇ ಗತಿದಾನದಕ್ಷ ॥ ೭ ॥
ನಮೋ ನಮಸ್ತೇ ವಿಮಲಾಂತರಂಗ । ನಮೋ ನಮಸ್ತೇ ಶಿವಚಿತ್ರಸಂಗ ॥
ನಮೋ ನಮಸ್ತೇ ಕುಮತಾಲಿಭಂಗ । ನಮೋ ನಮಃ ಶ್ರೀ ಗುರುಸಿದ್ಧಲಿಂಗ ॥ ೮ ॥

ಎಂಬಲ್ಲಿಗೆ ಹಿರೇಹಡಗಲಿ ಪುರಾಣಿಕ ಮಠಾಧಿಪ ಶ್ರೀ ಚೆನ್ನವೀರಪಂಡಿತ ವಂಶಾಬ್ಧಿ ರಾಕಾಶಶಾಂಕ ಸಮಾನ ವೇ॥ ವಿರೂಪಾಕ್ಷಶಾಸ್ತ್ರಿಯಿಂದ ವಿರಚಿತವಾದ ಜಗದ್ಗುರು ಶ್ರೀ ಸಿದ್ಧಲಿಂಗೇಶ ವಿಜಯದೊಳು ೧ ನೇ ಅಧ್ಯಾಯ ಸಮಾಪ್ತವಾದುದು.

---

# ೨ನೆಯ ಅಧ್ಯಾಯ



ಮಹಾ ಸಂಸ್ಥಾನ ಮಠದಲ್ಲಿ— ಕೆಲವು ದಿವಸಗಳವರೆಗೂ ಶಿವಪೂಜಾನಂದ ದಿಂದ ಇರುತ್ತಿರಲು, ಮುಂದೆ ದೇಶ ಸಂಚಾರ ಹೊರಟು ಶಿಷ್ಯಮಂಡಲಿಗೆ ದರ್ಶನಾ ಶೀರ್ವಾದಗಳನ್ನಿತ್ತು ಗುರುಕಾಣಿಕಾ ಸ್ವೀಕಾರ ಮಾಡಲು ಆಲೋಚಿಸಿ, ಸರಕೀಟಿನ ಸಿದ್ಧತೆ ಏರ್ಪಾಟು ಮಾಡಲ್ಪಟ್ಟಿತು.

೧. ಸರ್ವಾಧಿಕಾರಿ— ಚೋರನೂರು ಹಿ| ಮ| ಪಟ್ಟದ ವೀರಭದ್ರದೇವರು.
೨. ಏಜಂಟ— ಟಿ. ಎಂ. ಸಿದ್ಧಯ್ಯನವರು.
೩. ಸಬ್ ಏಜಂಟ— ನಾಗರಕಟ್ಟೆಮಠದ ರಾಚೋಟಯ್ಯನವರು.
೪. ಮುನಷಿ— ಜೆ. ಎಂ. ಬಸಪ್ಪಯ್ಯನವರು.
೫. ಆಸ್ಥಾನ ಪಂಡಿತರು— ಬಿ. ಎಂ. ಗುರುಸಿದ್ಧಶಾಸ್ತ್ರಿಗಳು.
೬. ಪಾರುಪತ್ಯೆದಾರ— ಅಗ್ರಹಾರದ ಸಿದ್ಧಲಿಂಗಯ್ಯನವರು.

ಇವರಲ್ಲದೆ ಹಾಜರಭಾಷಿ, ಶಿವಪೂಜಾಮರಿ, ಉಗ್ರಾಣಿ, ಛಡಿಯವರು, ಬೆಲ್ಲಿ ಜವಾನರು, ದಫೇದಾರರು, ಆನೆ, ಒಂಟೆ, ಮಾವುತರು, ಕುದುರೇ ಸವಾರರು, (ಮೇನಾ ಹೊರುವ) ಭೋವೀಜನರು, ಕಹಳೆ, ಕರ್ನಿಯವರು, ಈ ಪ್ರಕಾರ ಸಿಬ್ಬಂದಿ ಜನರಿಂದಲೂ, ಬಿರುದಾವಳೀ ಸಾಮಾನುಗಳಿಂದಲೂ ಇನ್ನುಳಿದ ಸಕಲ ಸಾಹಿತ್ಯದೊಡನೆ ಶ್ರೀ. ಜ. ಸಿದ್ಧಲಿಂಗಮಹಾಸ್ವಾಮಿಗಳವರ ಸವಾರಿಯು ಪ್ರಯಾಣ ಬೆಳೆಸುವದಾಯಿತು.

## ಸಂಸ್ಕೃತ ವಿದ್ಯಾಭ್ಯಾಸ

ಮಹಾ ಶ್ರೀ. (ಜ. ಸಿದ್ಧಲಿಂಗ ಶಿವಾಚಾರ್ಯ ಮಹಾ ಸ್ವಾಮಿ) ಗಳವರು ತಮ್ಮ ಸಿಬ್ಬಂದಿಯೊಡಗೂಡಿ ಹೊರಟು ಸಣ್ಣ ಪುಟ್ಟ ಗ್ರಾಮಗಳ ಮುಕ್ಕಾಮು ಮಾಡುತ್ತ ಮನದಲ್ಲಿ— ಆಹಾ ನಾವು ಪರಶಿವನ ಕೃಪೆಯಿಂದ ಚಿಕ್ಕತನದಲ್ಲಿಯೇ ಜಗದ್ಗುರು ಮಹಾ ಪೀಠಾರೋಹಣ ಮಾಡಿದೆವು. ಇನ್ನು ಮುಂದೆ ಸುಮ್ಮನೆ ಕಾಲ ಹರಣ ಮಾಡಲಾಗದು. ಪ್ರಥಮದಲ್ಲಿ ಸಂಸ್ಕೃತ ವಿದ್ಯಾಭ್ಯಾಸವನ್ನು ಚನ್ನಾಗಿ ನಡೆ ಯಿಸಬೇಕೆಂದು ಲವಲವಿಕೆಯುಂಟಾಗಿ ಕೆಲವು ದಿವಸ ಗೊಂಡಬಾಳು ವೇ|| ಬಸ ವಪ್ಪ ಶಾಸ್ತ್ರಿಗಳವರನ್ನು ಕರೆಯಿಸಿಕೊಂಡು ಅಭ್ಯಾಸ ನಡೆಸಿದರು. ಬಳಿಕ ಉಜ್ಜ ಯಿನೀ ಬಿ. ಎಂ. ಗುರುಸಿದ್ಧ ಶಾಸ್ತ್ರಿಗಳವರಲ್ಲಿ ಅಭ್ಯಾಸ ನಡೆಸಿರಲು, ಸಂಸ್ಥಾನ ಸರ ಕೀಟಿನಲ್ಲಿ ಸಹ ಅವೇ ಶಾಸ್ತ್ರಿಗಳಿಂದ ನಡೆಯಿತು. ಒಂದು ಸಾರೆ ಪಾಠ ಪ್ರವಚನ

ಗ್ರಹಣ ಮಾಡಿದರೆ ಸಾಕು; ಎಂತಹ ಕಠಿಣ ವಿಷಯಗಳಾದರೂ ಸುಬೋಧವಾಗುತ್ತಿದ್ದವು. ಪ್ರತಿದಿವಸ ಬ್ರಾಹ್ಮೀಮುಹೂರ್ತದಲ್ಲೆದ್ದು ತಮ್ಮ ಉದಯಾನುಷ್ಠಾನಗಳನ್ನೆಲ್ಲ ತೀರಿಸಿಕೊಂಡು ಡಮಣಿಗಾಡಿಯಲ್ಲಿ ಕುಳಿತು ಶಾಸ್ತ್ರಿಗಳೊಡನೆ ಒಂದೆರಡು ಮೈಲು ವರೆಗೂ ಹೋಗಿ, ಹಳ್ಳ ಕೊಳ್ಳ ಸರೋವರಗಳ ತೀರದಲ್ಲಿ ಶಾಂತ ಚಿತ್ತದಿಂದಲೂ, ಬಹು ವಿಚಾರಗಳಿಂದಲೂ ಪಾಠ ಚಿಂತನೆ ಮಾಡಿ ಪುನಃ ಹೊರಟು ಬಂದು ದರ್ಬಾರ ಮಂಟಪದಲ್ಲಿ ಮೂರ್ತಮಾಡಿ; ಮುಂದಿನ ಸಂಸ್ಥಾನದ ಕಾರ್ಯಕಲಾಪಗಳನ್ನು ಪರಾಂಬರಿಸುತ್ತಿದ್ದರಲ್ಲದೆ, ಸನ್ನಿಧಿ ಆಗಮನವನ್ನು ಅತ್ಯಂತ ದೀನ ಮುದ್ರೆಯಿಂದ ನಿರೀಕ್ಷಿಸಿಕೊಂಡು ನಿಂತಿದ್ದ ಗುರುಭಕ್ತಿಯುತರಾದ ಸದ್ಭಕ್ತರೊಡನೆ ಮಧುರವಾಣಿಯಿಂದ ಸರಸಾಲಾಪನಗೊಳಿಸಿ ಶಿವಪೂಜಾನುಷ್ಠಾನಕ್ಕೆ ದಯಮಾಡಿಸುತ್ತಿದ್ದರು.

ತರುವಾಯ ಮಧ್ಯಾಹ್ನ ೪ ಗಂಟೆಯಿಂದ ವೇದಾಂತ ಗ್ರಂಥಾವಲೋಕನ, ದರ್ಬಾರ ಕಾರ್ಯಕ್ರಮಗಳ ಏರ್ಪಾಟು, ಸಾಯಂಕಾಲ ೭ ಗಂಟೆಯಿಂದ ಧರ್ಮೋಪದೇಶ ಇತ್ಯಾದಿ ಸದ್ವ್ಯಾಸಂಗದಲ್ಲಿ ನಿರತರಾಗುತ್ತಿದ್ದರು. ಹೀಗಿರುತ್ತಿರಲು ೩–೪ ವರುಷಗಳಲ್ಲಿಯೇ ಪೂರ್ವಾರ್ಜಿತ ಸುಕೃತ ವಿಶೇಷದಿಂದ ಸಂಸ್ಕೃತದ ಪಠ್ಯಗ್ರಂಥಗಳೆಲ್ಲ ಸಂಪೂರ್ಣ ಮನನವಾದವು. ಶಾಸ್ತ್ರಾಭಿರುಚಿಯು ದಿನೇ ದಿನೇ ಬೆಳೆಯಲಾರಂಭಿಸಿ ಕಾಶಿ, ಮುಂಬಯಿ, ಕಲಕತ್ತಾ, ಮದರಾಸು, ಪುಣೆ ಮುಂತಾದ ಪಟ್ಟಣಗಳಿಂದ ವೇದಾಗಮ ಪುರಾಣಾದಿ ಸರ್ವೋತ್ತಮವಾದ ಧರ್ಮ ಗ್ರಂಥಗಳನ್ನು ತರಿಸಿಕೊಂಡು ಪ್ರಶಾಂತ ಸಮಯದಲ್ಲಿ ಪರಿಶೀಲನೆ ಮಾಡುತ್ತಿದ್ದರು. ಇದರಿಂದ ಅಖಂಡವಾದ ದಿವ್ಯಜ್ಞಾನ ಪ್ರಭೆಯು ಪ್ರಜ್ವಲಿಸಿತು.

## ಮನೋನಿಗ್ರಹವೂ, ಜಿತೇಂದ್ರಿಯತ್ವವೂ

ಆದರೆ ಜಗತ್ತಿನಲ್ಲಿ ಮಾನವ ಪ್ರಾಣಿಗೆ ಬುದ್ಧಿ, ಶಕ್ತಿ, ಯುಕ್ತಿ, ಸಾಹಸಗಳೂ, ಧರ್ಮೇಂದ್ರಿಯ, ಕರ್ಮೇಂದ್ರಿಯಗಳೂ ಪರಮಾತ್ಮನಿಂದ ಕೊಡಲ್ಪಟ್ಟವೆ. ಇವುಗಳನ್ನು ಸದ್ವಿನಿಯೋಗ ಮಾಡಿದರೆ ಸೌಖ್ಯವೂ, ದುರ್ವಿನಿಯೋಗ ಮಾಡಿದರೆ ದುಃಖವೂ, ಪ್ರಾಪ್ತವಾಗುವದೆಂಬುವದು ಅನುಭವವಾಗಿದೆ. ವಾಚಕರೇ, ಈ ಮಹಾನುಭಾವರಾದ ಶ್ರೀ. ಜ. ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರಿಗೆ ಈ ಸಮಯದಲ್ಲಿ- ಭರಯೌವನ, ವಿದ್ಯಾ, ರೂಪ, ಧನಸಂಗ್ರಹ, ಅಧಿಕಾರ, ಸ್ವಾತಂತ್ರತೆ ಇತ್ಯಾದಿ ಸಕಲಸಾಹಿತ್ಯ ಹಸ್ತಗತವಾಗಿದ್ದವು. ಹೀಗಿದ್ದರೂ "ಮನ ಏವ ಮನುಷ್ಯಾಣಾಂ । ಕಾರಣಂ ಬಂಧಮೋಕ್ಷಯೋಃ" ಎಂಬಂತೆ ಮಾನವನ ಸರ್ವನಾಶಕ್ಕೂ, ಸರ್ವೋನ್ನತಿಗೂ ಕಾರಣವಾದ ಮನಸ್ಸನ್ನು ಮಾತ್ರ ಚಂಚಲಗೊಳಿಸದೆ ಧೃಡವಾಗಿ ನಿಲ್ಲಿಸಿ ತಮ್ಮ ಸ್ವಾಧೀನಪಡಿಸಿಕೊಂಡಿದ್ದರಲ್ಲದೆ, ಒಂದು ಕ್ಷಣಕಾಲವಾದರೂ ದುರಾಲೋಚನೆ, ದುರ್ವಿಷಯಾಭಿಲಾಷೆ, ದುರ್ಜನರ ಸಹವಾಸ, ದುರಾಶಾಪಾಶಾದಿ

ಗಳಿಗೆ ಸಿಲುಕದೆ ಕೇವಲ ಸದ್ವ್ಯಾಸಂಗ, ಸದ್ಗೋಷ್ಠಿ, ಶಿವಪೂಜಾನಂದ, ಸದ್ಗ್ರಂಥಾವಲೋಕನ, ಸತ್ಶೀಲಾದಿಗಳಲ್ಲಿ ತತ್ಪರರಾಗಿದ್ದರು. ಮತ್ತು "ಆತ್ಮಾನಂ ರಥಿನಂವಿದ್ಧಿ। ಶರೀರಂ ರಥಮೇವಚ ॥ ಬುದ್ಧಿಂಚ ಸಾರಥಿಂವಿದ್ಧಿ। ಮನಃಪ್ರಗ್ರಹಮೇವಚ। ಇಂದ್ರಿಯಾಣಿ ಹಯಾನಾಹು। ರ್ವಿಷಯಾಂ ಸ್ತೇಷು ಗೋಚರಾನ್ ॥" ಎಂಬ ವಿಷಯವನ್ನು ಚನ್ನಾಗಿ ಅರಿತವರಾಗಿ ಪ್ರತಿದಿವಸ ಜಪತಪಾನುಷ್ಠಾನ-ಆಸನಗಳನ್ನು ಹಾಕುವ ಸಾಧನವನ್ನು ಅತ್ಯಂತ ಭರಾಟೆಯಿಂದ ನಡೆಸಹತ್ತಿದರು. ಈ ಪದ್ಧತಿಯಿಂದ ಕಾಲಾತಿಕ್ರಮಣ ಮಾಡುತ್ತ ಸರ್ವೇಂದ್ರಿಯಂಗಳನ್ನು ಸ್ವಾಧೀನಪಡಿಸಿಕೊಂಡಿರಲು ದೇಹದಲ್ಲಿ ಅತ್ಯಧಿಕವಾದ ಶಕ್ತಿಯೂ, ದಿವ್ಯಕಾಂತಿಯೂ ಪ್ರಜ್ವಲಿಸಿದವು. ಮನೋಹರವಾದ ಮುಖಕಮಲವೂ, ನೇತ್ರಗಳೂ ತೇಜೋಮಯವಾದವು. ಇವರ ದರ್ಶನ ಮಾಡಿಕೊಂಡ ಭಕ್ತಾದಿಗಳು ಬಹು ಸಂತುಷ್ಟರಾಗುತ್ತಿದ್ದರು. ಪರಮ ಜಿತೇಂದ್ರಿಯರೂ, ವೈರಾಗ್ಯಮೂರ್ತಿಗಳೆಂದು ಪ್ರಸಿದ್ಧವಾಯಿತು.

ಈ ತೇಜೋಮೂರ್ತಿಯ ಪ್ರಭಾವವು ದೇಶದಲ್ಲಿ ಪ್ರಜ್ವಲಿತವಾಗುತ್ತಿರಲು ಯಾವ ಗ್ರಾಮ ಮುಕ್ಕಾಮ ಮಾಡಿದರೂ ಭಕ್ತಮಂಡಳಿಯು ಈ ಭಗವತ್ಪಾದರ ದರ್ಶನಮಾಡಿಕೊಂಡ ಮಾತ್ರವೇ ನಯ-ವಿನಯ ಭಯ-ಭಕ್ತಿ-ವಿಶ್ವಾಸಗಳುಂಟಾಗಿ ತನು-ಮನ-ಧನಗಳಿಂದ ಸೇವಾಸತ್ಕಾರಗಳನ್ನು ಮಾಡಿ ಧನ್ಯರಾಗಬೇಕೆಂದು ಮುಂದುವರಿಯುತ್ತಿದ್ದರು. ಈರೀತಿ ಗ್ರಾಮಾನುಗ್ರಾಮಗಳಲ್ಲಿ ಸಂಚರಿಸುತ್ತ ಹರಪನಹಳ್ಳಿ ತಾಲೂಕು ಮತ್ತು ಹಡಗಲಿ ತಾಲೂಕಿನಲ್ಲಿ ಮುಕ್ಕಾಂ ಮಾಡುತ್ತ ಹಿರೇಹಡಗಲಿ * ಗ್ರಾಮಕ್ಕೆ ದಯಮಾಡಿಸಲಾಯಿತು.

ಈ ಗ್ರಾಮದ ಪ್ರಮುಖ ಮಂಡಲಿಯು ಅಸಾಧಾರಣ ಭಕ್ತಿಯಿಂದ ಶಾ. ಶಕ ೧೮೫೦ ನೇ ಕೀಲಕನಾಮ ಸಂವತ್ಸರದ ವೈಶಾಖ ಬ. ೧ ದಿವಸ ಅತ್ಯಂತ ಮಹೋತ್ಸವದೊಡನೆ ಶ್ರೀ ಜಗದ್ಗುರುಗಳವರನ್ನು ಕರೆತಂದು ಶೃಂಗರಿಸಲ್ಪಟ್ಟ ಮಂಟಪದಲ್ಲಿ ವಿಶ್ರಾಂತಿಗೊಳಿಸಿದರು. ಬಹು ಜನಸಂದಣಿಯು ನೆರೆದಿರಲು ಇದೇ ಗ್ರಾಮದ ಪುರಾಣಿಕಮಠದ ಕೈ॥ ಪಂಡಿತ ಫಕೀರಶಾಸ್ತ್ರಿಗಳವರ ಪೌತ್ರರಾದ ವೇ॥ ವೀರಪ್ಪಯ್ಯ ಶಾಸ್ತ್ರಿಗಳು 'ಗುರುಭಕ್ತಿ' ಎಂಬ ವಿಷಯದಲ್ಲಿ ಸರಸವಾದ ಭಾಷಣಮಾಡಿದರು.

ಸಾರಾಂಶ:— ಈ ಜಗತ್ತಿನಲ್ಲಿರುವ ೮೪ ಲಕ್ಷ ಜೀವರಾಶಿಗಳಲ್ಲಿ ಶ್ರೇಷ್ಠವಾದ ಮಾನವನು ಐಹಿಕ ಸುಖಕ್ಕೂ, ಪರಲೋಕ ಸುಖಕ್ಕೂ ಸಾಧಕವಾದ ಪುಣ್ಯಕರ್ಮಗಳನ್ನೂ ಗುರುಭಕ್ತಿ ಎಂಬ ಮೂಲಾಧಾರದಲ್ಲಿಯೇ ಆಚರಿಸುತ್ತಿರಬೇಕು; ಮತ್ತು

---

* ಈ ಗ್ರಾಮದಲ್ಲಿ ಪುರಾತನಕಾಲದ ೧. ಸಂಗಮೇಶ್ವರ ೨. ಕುಂಭೇಶ್ವರ ೩. ರಾಮೇಶ್ವರ ೪. ಭೀಮೇಶ್ವರ ೫. ಸೋಮೇಶ್ವರ (ದ್ಯಾಮೇಶ್ವರ) ಎಂಬ ಪಂಚಲಿಂಗಗಳು ಪ್ರಸಿದ್ಧವಾಗಿರುವ ವಲ್ಲದೆ ಶ್ರೀ ಹಾಲಸ್ವಾಮಿಗಳವರ ಜಾತ್ರೆಯು ಪ್ರತಿವರುಷ ಆಶ್ವೀಜ ಬ. ೩ ಮಿತಿಯಲ್ಲಿ ಬಹು ಸಂಭ್ರಮದಿಂದ ಜರುಗುತ್ತಿದೆ.

ಪ್ರತಿಯೊಬ್ಬ ಮನುಷ್ಯನೂ ತನ್ನ ಮತವಾವುದು? ಆ ಮತದ ಸ್ವರೂಪವೇನು? ಇದನ್ನು ಸ್ಥಾಪಿಸಿದವರಾರು? ಅದರ ಸಿದ್ಧಾಂತ ಮಾರ್ಗವಾವುದು? ಇತ್ಯಾದಿ ವಿಚಾರಗಳನ್ನು ಮಾಡುತ್ತ ಮತಸ್ಥಾಪಕರಾದ ಮೂಲ ಗುರುಗಳಲ್ಲಿ ಭಕ್ತಿಯನ್ನಿಟ್ಟು ವರ್ತಿಸಬೇಕು.

ಗುರುಭಕ್ತಿ ವಿಹೀನಸ್ಯ । ಸಮಸ್ತಾ ನಿಷ್ಫಲಾಃ ಕ್ರಿಯಾಃ ॥
ಅನುಷ್ಠಿತಾ ಅಪಿ ತಥಾ । ಸ್ವೈರಿಣೀ ವ್ರತವಚ್ಛಿವೆ ॥ ಅಂದರೆ—

ಲೋಕದಲ್ಲಿ ವ್ಯಭಿಚಾರಿಣಿಯಾದ ಸ್ತ್ರೀಯಳು ಎಷ್ಟು ವ್ರತ-ನಿಯಮಾದಿಗಳನ್ನು ಆಚರಿಸುತ್ತಿದ್ದರೂ ಅವುಗಳೆಲ್ಲಾ ಹೇಗೆ ನಿಷ್ಫಲವೋ ಅದರಂತೆ ಗುರುಭಕ್ತಿಯಿಲ್ಲದ ಮನುಷ್ಯನು ಎಷ್ಟು ಪುಣ್ಯಕರ್ಮಗಳನ್ನು ಆಚರಿಸಿದರೂ ಅವುಗಳು ನಿಷ್ಫಲವಾಗುವವಲ್ಲದೆ ಫಲಕಾರಿಯಾಗುವದಿಲ್ಲವೆಂದು ಪಾರಮೇಶ್ವರಾಗಮದಲ್ಲಿ ಹೇಳಲ್ಪಟ್ಟದೆ ಮತ್ತು ದೈವಸಾಕ್ಷಾತ್ಕಾರಕ್ಕೆ ಗುರುವೇ ಸಹಾಯಕನಾಗಿರುವನು. ಆದ್ದರಿಂದ ಸರ್ವಸಿದ್ಧಾಂತಕಾರರು—

ಗುರುಶ್ಶಿವೋ ಗುರುರ್ಮಂತ್ರೋ । ಗುರುರ್ಮಾತಾ ಗುರುಃಪಿತಾ ॥
ಗುರುರ್ಭ್ರಾತಾ ಗುರುರ್ಬಂಧು । ರ್ಗುರುರ್ಮಿತ್ರಂ ಗುರುರ್ಧನಂ ॥ ೧ ॥
ಗುರುರ್ಲೋಕೋ ಗುರುರ್ಮುಕ್ತಿ । ರ್ಗುರುರ್ಭೋಗೋ ಗುರುಸ್ಸುಖಂ ॥
ಗುರುರ್ವೇದೋ ಗುರುಃಶಾಸ್ತ್ರಂ । ಗುರುರ್ಯೋಗೋ ಗುರುಃಫಲಂ ॥ ೨ ॥
ಗುರುರ್ದಾನಂ ಗುರುರ್ಧರ್ಮೋ । ಗುರುರ್ದೈವಂ ಗುರುರ್ಮತಿಃ ॥
ಗುರುರ್ನೇತ್ರಂ ಗುರುರ್ವಕ್ತ್ರಂ । ಗುರುರ್ವಾಣಿರ್ಗುರುರ್ಮನಃ ॥ ೩ ॥
ಗುರುಸ್ಸರ್ವಂ ಗುರುಸ್ಸತ್ವಂ । ಗುರುರೇವ ಪರಃಶಿವಃ ॥

ಇತ್ಯಾದಿ ಗುರುವನ್ನು ಹೊಗಳಿರುವರು.

ಮುಖ್ಯವಾಗಿ ಗುರುವಿನುಪದೇಶವೇ ಭವರೋಗಪೀಡಿತರಾದ ಭಕ್ತರಿಗೆ ದಿವ್ಯೌಷಧವಾಗಿರುತ್ತದೆ; ಮತ್ತು ಈ ಭವಸಾಗರವನ್ನು ದಾಟುವದಕ್ಕೆ ಮಾನವನ ದೇಹವು ಒಂದು ತೆಪ್ಪದಂತೆ ಇರುವದು. ಶ್ರೀಗುರುವೆಂಬಾತನೇ ಒಬ್ಬ ನಾವಿಕನಂತಿರುವನು, ತೆಪ್ಪವಿದ್ದರೂ ನಾವಿಕ (ಅಂಬಿಗ) ನಿಲ್ಲದಿದ್ದರೆ ಸಮುದ್ರ (ನದಿಯನ್ನು) ದಾಟಲಾರನು.

ಶ್ರೀ ಜಗದ್ಗುರು ರೇಣುಕಾದಿ ಪಂಚಗುರುಗಳು ವೀರಶೈವ ಮತಸ್ಥಾಪನಮಾಡಿ ಮುಕ್ತಿಗೋಸ್ಕರ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಶಿವಭಕ್ತಿಗಳೆಂಬ ಸಾಮಗ್ರಿಗಳನ್ನು ದಯಪಾಲಿಸಿರುತ್ತಾರೆ. ಇಂತಹ ಜಗದ್ಗುರು ಪೀಠಾರೋಹಣಮಾಡಿದ ಮಹಾಚಾರ್ಯರಲ್ಲಿ ಅಸಾಧಾರಣವಾದ ಭಕ್ತಿಯನ್ನಿಡಬೇಕು; ಪೂಜ್ಯಬುದ್ಧಿಯಿರಿಸಬೇಕು. "ಗುರುಂ ನಿಂದತಿ ಯಃ ಶಿಷ್ಯೋ । ದ್ರವ್ಯಂ ಹರತಿ ತಸ್ಯಚ ॥ ಕರೋತಿ ದ್ವೇಷಿಭಿಃ ಸ್ನೇಹಂ ಸಚಂಡಾಲ ಇತಿಸ್ಮೃತಃ ॥" ಯಾವನು ಗುರುನಿಂದೆ ಮಾಡುವನೋ, ಗುರುದ್ರವ್ಯಾಪಹರಣ ಮಾಡುವನೋ, ಗುರುಗಳ ಮೇಲೆ ದ್ವೇಷ ಮಾಡು

ವನೋ ಅಂಥವನ ಸಂಗಡ ಯಾವಾತನು ಸ್ನೇಹಬೆಳೆಸುವನೋ ಅವನು ನೀಚನೆಂದು ತಿಳಿಯುವದಾಗಿ ಉಕ್ತಿ ಅದೆ.

ಆದಕಾರಣ ತ್ರಿಕರಣಶುದ್ಧವಾದ ಭಕ್ತಿಯಿಂದ ಮಹಾಗುರುಗಳನ್ನು "ಆಂದೋಳಿ ಕಾಯಾಮಾರೋಪ್ಯ ಗಜೇವಾಪಿ ತುರಂಗಮೆ ॥ " ಎಂಬ ಕ್ರಿಯಾಸಾರೋಕ್ತಿಯಂತೆ ಪಲ್ಲಕ್ಕಿಯಲ್ಲಾಗಲಿ, ಆನೆ, ಕುದುರೆಯಮೇಲಾಗಲಿ ಸಕಲ ವಾದ್ಯ-ವೈಭವಂಗಳೊಡನೆ ಮಹೋತ್ಸವದಿಂದ ಕರೆತಂದು, ಉನ್ನತಾಸನದಲ್ಲಿ ಕೂಡ್ರಿಸಿ, ಷೋಡಶೋಪಚಾರ ಗಳಿಂದ ಪಾದಾರವಿಂದಗಳನ್ನು ಪೂಜಿಸಿ, ತೀರ್ಥ-ಪ್ರಸಾದಗಳಂ ಸ್ವೀಕರಿಸಿ, ಗುರು ಕಾಣಿಕಾದಿಗಳನ್ನರ್ಪಿಸಿ, ಆನಂದಪಡಿಸಿ ಆ ಸದ್ಗುರುವಿನುಪದೇಶಗಳನ್ನು ಕೇಳಿ, ಆಶೀರ್ವಾದ ಪಡೆದು ಧನ್ಯರಾಗತಕ್ಕದ್ದು ಮಾನವರ ಮುಖ್ಯ ಕರ್ತವ್ಯವಾಗಿದೆ. ಇತ್ಯಾದಿ ಭಾಷಣಮಾಡಿದರು.

ತರುವಾಯ ಶ್ರೀ ಜಗದ್ಗುರು ಮಹಾನುಭಾವರು ಸಮಾರೋಪಣ ಭಾಷಣ ದಿಂದ ಸರ್ವರ ಮನಾನಂದಗೊಳಿಸಿ ಅಪ್ಪಣೆಯನ್ನು ದಯಪಾಲಿಸಿದರು. ಮಾರನೇ ದಿವಸ ಸಂಸ್ಥಾನ ಪದ್ಧತಿ ಪ್ರಕಾರ ದರ್ಬಾರ ಕಾರ್ಯಗಳೂ, ಗುರುಕಾಣಿಕಾರ್ಪಣ ಮುಂತಾದವು ನಡೆದು ೧–೨ ತಿಂಗಳ ವರೆಗೂ ಮುಕ್ಕಾಂ ಮಾಡಿ ಫಲಾಶೀರ್ವಾದ ಗಳನ್ನಿತ್ತು ಮುಂದಕ್ಕೆ ಸವಾರಿ ದಯಮಾಡಿಸಿತು.

ಈ ಗುರುಪುಂಗವರು ಮನೋನಿಗ್ರಹ, ಇಂದ್ರಿಯ ನಿಗ್ರಹ ಉಳ್ಳವರಾಗಿ ಪ್ರತಿ ದಿವಸ ಉದಯ ೫ ಗಂಟೆಯಲ್ಲಿ ಶಾಸ್ತ್ರೋಕ್ತ ಪ್ರಕಾರ ಪ್ರಾಣಾಯಾಮವನ್ನೂ, ಸ್ವಸ್ತಿಕಾಸನ, ಪದ್ಮಾಸನ, ಕುಕ್ಕುಟಾಸನ, ಸರ್ಪಾಸನ ಮುಂತಾದ ಕ್ರಿಯೆಗಳನ್ನು ನಡೆಯಿಸುತ್ತ ಯೋಗಾಭ್ಯಾಸವನ್ನು ಬಲಿಸುತ್ತ ಬಂದರು. ಬ್ರಹ್ಮತೇಜಸ್ಸು ಪ್ರಜ್ವಲ ವಾಯಿತು. ಜಿತೇಂದ್ರಿಯತ್ವದ ಪ್ರಭಾವದಿಂದ ಈ ಮಹಾಮೂರ್ತಿಗೆ ಬಿಸಿಲು-ಛಳಿ-ಮಳೆ-ಗಾಳಿಗಳ ತಾಪ-ಲೋಪಗಳು ತಿಲಾಂಶವಾದರೂ ಬಾಧಿಸುತ್ತಿರಲಿಲ್ಲ. ಕೆಲವು ದಿವಸಾನಂತರ ಇವರಿಗೆ ಅಶ್ವಾರೋಹಣ ಮಾಡಬೇಕೆಂಬ ಉತ್ಕಟೇಚ್ಛೆಯುಂಟಾಗಿ ಒಂದು ಉತ್ತಮವಾದ ಕುದುರೆಯನ್ನು ಸಂಗ್ರಹಿಸಿ ಪ್ರತಿನಿತ್ಯ ಉದಯ-ಸಾಯಂಕಾಲ ಗಳಲ್ಲಿಯೂ ಅಶ್ವಾರೋಹಣಮಾಡಿ ಭರಾಟೆಯಿಂದ ಹೊಡೆದುಕೊಂಡು ಹೋಗಿ, ನಿರ್ಜನ ಪ್ರದೇಶದಲ್ಲಿ ತಮ್ಮ ಮನದಣಿಯುವ ವರೆಗೂ ಬಹು ವೇಗದಿಂದ ಸವಾರಿ ಮಾಡುತ್ತಿದ್ದರಲ್ಲದೆ, ಎಂತಹ ಬಲಾಢ್ಯ ಕುದುರೆಯನ್ನಾದರೂ ಹತ್ತಿ ಹೊಡೆದು ಓಡಿಸಿ ದಣಿಸಿ ಮೆತ್ತಗೆ ಮಾಡಿಬಿಡುತ್ತಿದ್ದರು. ಅಹಾ! ಇದಲ್ಲವೇ ಜಿತೇಂದ್ರಿಯತ್ವದ ಪ್ರಭಾವವು. ಈಪ್ರಕಾರ ಕೆಲವು ದಿವಸಗಳು ಗತಿಸಲು ಧಾರವಾಡ ಜಿಲ್ಹಾ ಕೊಂಗ ವಾಡ ಗ್ರಾಮದ ವೇ॥ ಪಂಡಿತ ವೀರಭದ್ರ ಶಾಸ್ತ್ರಿಗಳವರನ್ನು ಕರೆಯಿಸಿಕೊಂಡು ವ್ಯಾಕರಣ, ಶಾಸ್ತ್ರಾಭ್ಯಾಸವನ್ನು ನಡೆಯಿಸಿದರು.

## ಶ್ರೀ ಪಟ್ಟಾಧ್ಯಕ್ಷರಾದ ಚೆನ್ನಬಸವ ಮಹಾಸ್ವಾಮಿಗಳವರ

## -•- ನಿಧನ -•-

ಇತ್ತ ಉಜ್ಜಯಿನೀ ಮಹಾಸಂಸ್ಥಾನ ಮಠದಲ್ಲಿದ್ದ ಸ್ಥಿರಪಟ್ಟಾಧ್ಯಕ್ಷ ಶ್ರೀ ಜಗದ್ಗುರು ಚೆನ್ನಬಸವಶಿವಾಚಾರ್ಯ ಮಹಾಸ್ವಾಮಿಗಳವರು ವಿದ್ಯಾವಂತರೂ, ಜಿತೇಂದ್ರಿಯರೂ, ಸಮಾಜಾಭಿವೃದ್ಧಿ-ಸುಧಾರಣ ಪ್ರೇಮಿಗಳೂ ಆಗಿದ್ದರು. ಇವರಾದರೂ ತಮ್ಮದೊಂದು ಸರ್ಕೀಟಸೊಡನೆ ಕೆಲವು ಗ್ರಾಮಾದಿಗಳಿಗೆ ಆಗಾಗ್ಗೆ ದಯಮಾಡಿಸಿ, ಭಕ್ತಾದಿಗಳಿಗೆ ಧರ್ಮೋಪದೇಶ ಮಾಡಿ, ಕಾಣಿಕಾ ಸ್ವೀಕಾರಮಾಡುತ್ತಿದ್ದರು. ಅಷ್ಟರಲ್ಲಿ ದೇಶಮಧ್ಯ ೩-೪ ವೀರಶೈವ ಮಹಾಸಭೆಗಳು ಜರಗುತ್ತ ಬಂದಿರಲು, (೫) ನೇ ವೀರಶೈವ ಮಹಾಸಭೆಯನ್ನು ಇವರು ತಮ್ಮ ಉಜ್ಜಯಿನೀ ಮಹಾಸಂಸ್ಥಾನದಲ್ಲಾಗಲೀ, ಕೊಟ್ಟೂರು ಪಟ್ಟಣದಲ್ಲಾಗಲೀ ಜರುಗಿಸಬೇಕೆಂದು ಆಲೋಚಿಸಿ ಅವಿಶ್ರಾಂತ ಶ್ರಮಪಟ್ಟರು. ಆದರೆ ಸ್ಥಾನಿಕ ಕಲಹದಿಂದಲೂ, ಬೇರೆ ಕೆಲವು ಅನಾನುಕೂಲಗಳಿಂದಲೂ ಅವರ ಅಭಿಲಾಷೆಯು ಪೂರ್ಣವಾಗಲಿಲ್ಲ. ಬಳಿಕ ಕೊಟ್ಟೂರು ಜಾ|| ಮಿ|| ಮ|| ದೊಡ್ಡವೀರಪ್ಪಯ್ಯನವರ ಪರಿಮುಖದಿಂದ ನಮ್ಮ ಜಿಲ್ಹೆಯಾದ ಬಳ್ಳಾರಿ ಪಟ್ಟಣದಲ್ಲಾದರೂ ಜರುಗಿಸಲಿಕ್ಕೆ ಹೇಳಿಕಳುಹಿಸಿಕೊಟ್ಟರು.

ಬಳ್ಳಾರಿ ಪ್ರಮುಖರು ಶ್ರೀ ಜಗದ್ಗುರುಗಳವರ ಸೂಚನೆಯನ್ನು ಅನುಮೋದಿಸಿ ಸನ್ ೧೯೧೯ ನೇ ಇಸ್ವಿ ಡಿಶಂಬರ ತಿಂಗಳಲ್ಲಿ ಶ್ರೀಮಂತ ಸೊಲ್ಲಾಪುರ ವಾರದ ಮಲ್ಲಪ್ಪನವರ ಅಧ್ಯಕ್ಷತೆಯಿಂದ (೫) ನೇ ಮಹಾಸಭೆಯು ನಡೆಯುವಂತೆ ನಿಶ್ಚಯ ಮಾಡಿದರು.

ಈ ಸಮಾಚಾರವು ಸದರಿ ಶ್ರೀ ಚೆನ್ನಬಸವ ಮಹಾಸ್ವಾಮಿಗಳವರಿಗೆ ತಿಳಿದು ಸಂತುಷ್ಟರಾಗಿ, ಒಳ್ಳೇದು ನಮ್ಮಲ್ಲಿ ಮಹಾಸಭೆಯು ನೆರೆಯದಿದ್ದಾಗ್ಯೂ ನಾವಾದರೂ ಬಳ್ಳಾರಿ ಸಭೆಗೆ ದಯಮಾಡಿಸುವದು ಮುಖ್ಯ ಕರ್ತವ್ಯವೆಂದು ಭಾವಿಸಿ, ಅಲ್ಪ ಸಿಬ್ಬಂದಿಯೊಡಗೂಡಿ ಹೊರಟು, ಬಳ್ಳಾರಿಗೆ ಪ್ರಯಾಣ ಬೆಳೆಯಿಸಿದರು. ಮಹಾಸಭೆಯ ತೀರ್ಮಾನಗಳಲ್ಲಿ ಮದ್ರಾಸ ವೀರಶೈವ ವಿದ್ಯಾವರ್ಧಕ ಫಂಡಿನ ತೀರ್ಮಾನದಂತೆ (೫) ಸಾವಿರ ರೂಪಾಯಿಗಳನ್ನು ವಾಗ್ದಾನಮಾಡಿದರು.

ಆದರೆ ಪ್ರಯಾಣದಲ್ಲಿ ಮಧ್ಯಮಾರ್ಗದೊಳು ಸಮಾಜದ ದೌರ್ಭಾಗ್ಯದಿಂದ ಅಕಸ್ಮಾತ್ ಒಂದು ಹಳ್ಳಿಯಲ್ಲಿ "ಶಿವಸಾಯುಜ್ಯವನ್ನು ಹೊಂದಿದರು." ಈ ದುಃಖ ವಾರ್ತೆಯನ್ನು ಕೇಳಿ ಸಮಸ್ತಗ್ರಾಮದವರೂ, ಬಳ್ಳಾರಿ ಮಹಾಸಭೆಯವರೂ ಅತ್ಯಂತ ದುಃಖದಿಂದ ಹಾಹಾಕಾರದೊಡನೆ ಉದ್ಗಾರಗಳನ್ನು ತೆಗೆದರು.— ಕಾಲಗತಿಗೆ ಉಪಾಯವಿಲ್ಲ. ಅಧಿಕಾರಕ್ಕೆ ಬಂದ ಅಲ್ಪಾವಧಿಯಲ್ಲಿಯೇ ವಿದ್ವನ್ಮಣಿಗಳಾದ ಶ್ರೇಷ್ಠ ಗುರುಮೂರ್ತಿಯನ್ನು ಕಳೆದುಕೊಂಡು, ದುಃಖಿಸುವ ಹತಭಾಗ್ಯವು ನಂಮ ಸಮಾಜದ ಪಾಲಿಗೆ ಬಂದಿತು.

## ಉಭಯ ಜಗದ್ಗುರುಗಳಲ್ಲಿ ಕಲಹ

ಇತ್ತ ಸಂಚಾರದಲ್ಲಿದ್ದ ಶ್ರೀ ಜ॥ ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಪೀಠದ ಸ್ಥಿರಪಟ್ಟಾಧ್ಯಕ್ಷ ಶ್ರೀ ಚೆನ್ನಬಸವ ಶಿವಾಚಾರ್ಯ ಮಹಾಸ್ವಾಮಿಗಳವರು ಮಧ್ಯಮಾರ್ಗದಲ್ಲಿಯೇ ಲಿಂಗೈಕ್ಯರಾದ ವಿಷಾದ ವಾರ್ತೆಯನ್ನು ಕೇಳಿ ಅತ್ಯಂತ ವೆಥೆಗೊಂಡರು. ಆದರೂ ಸಹನಮಾಡಿಕೊಂಡು, ಸಂಸ್ಥಾನದ ಸಕಲ ವಿಧವಾದ ಭಾರಗಳನ್ನು ವಹಿಸಿಕೊಂಡು ನಡೆಯಿಸುತ್ತಿದ್ದರು.

ಆದರೆ ಈ ಮೊದಲು ಪೂರ್ವಾಧಿಕಾರಿಗಳಾಗಿದ್ದ ಶ್ರೀ ಮರುಳಸಿದ್ಧ ಮಹಾಸ್ವಾಮಿಗಳವರು ಸ್ಥಿರಪಟ್ಟದ ಚೆನ್ನಬಸವಸ್ವಾಮಿಗಳವರಲ್ಲಿಯೂ ಮತ್ತು ಚರಪಟ್ಟದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಲ್ಲಿಯೂ ವೈಷಮ್ಯ ಬೆಳೆಯಿಸಿ, ಉಭಯರ ಮೇಲೂ ದ್ವೇಷಾಸೂಯಾದಿಗಳನ್ನು ನಡೆಯಿಸುತ್ತಿದ್ದರಲ್ಲದೆ, ತಾವು ಸಹ ಮಹಾಸಂಸ್ಥಾನದ ಬಂಗಾರ-ಬೆಳ್ಳಿ ಭಾರಿ ಭಾರಿ ಸೊತ್ತುಗಳನ್ನೂ, ರಿಕಾರ್ಡು ಮುಂತಾದವುಗಳನ್ನೂ ಅನಾಪ್ರಯಮಾಡುತ್ತ ನಿಷ್ಕಾರಣವಾಗಿ ೮-೧೦ ಸಾವಿರ ರೂಪಾಯಿಗಳ ರುಣ (ಸಾಲ) ಭಾರವನ್ನು ಮಾಡಿ, ನಾನಾರೀತಿಯಿಂದ ತೊಂದರೆಕೊಡುತ್ತಿದ್ದರು.

ಇತ್ಯಾದಿ ವಿಷಯಗಳನ್ನು ಈ ಚರಿತ್ರಾಧಿಪತಿಗಳಾದ ಶ್ರೀ ಜ॥ ಸಿ॥ ಗಳವರು ಸಹನಮಾಡುತ್ತ ಬಹು ಸಂತಾಪಗೊಂಡು, ಆಹಾ ನಮ್ಮ ಶ್ರೀ ಮರುಳಸಿದ್ಧಸ್ವಾಮಿಗಳವರು ನಮಗೆ ಗುರುಗಳೂ, ಯಜಮಾನರೂ ಎಂಬ ಪೂಜ್ಯ ಭಾವನೆಯಿಂದ ಸುಮ್ಮನೆ ಬಿಟ್ಟರೆ ಈ ಮಹಾಸಂಸ್ಥಾನವನ್ನೇ ಹಾಳುಮಾಡಿ ಮುಳುಗಿಸಿಬಿಡುವರಲ್ಲಾ, ಹೇಗೆ ಮಾಡೋಣವೆಂದು ಬಗೆಬಗೆಯಿಂದ ಯೋಚನೆಮಾಡಿ, ಕೆಲವು ದಿವಸಗಳವರೆಗೆ ಮೌನತಾಳಿದ್ದರು. ಏನು ಮಾಡಿದರೂ ಒಳ್ಳೇ ಮಾರ್ಗಕ್ಕೆ ಬರಲಿಲ್ಲ. ಇಷ್ಟಾದರೂ ಸಾಮ, ದಾನ, ಭೇದ, ದಂಡನ ಎಂಬ ಚತುರ್ವಿಧೋಪಾಯಗಳಿಂದಲೂ ಮಹಾಸಂಸ್ಥಾನವನ್ನುಳಿಸುವ ಪ್ರಯತ್ನಮಾಡುವದುಚಿತವೆಂದು, ಆ ಮರುಳಸಿದ್ಧಸ್ವಾಮಿಗಳವರಿಗೆ ಕೇವಲ ಆಪ್ತರಾದವರಿಂದಲೂ, ಪ್ರಮುಖರಿಂದಲೂ ಬಹುಪರಿಯಾಗಿ ಹೇಳಿಸಿದರು. ಯಾರು ಏನು ಹೇಳಿದರೂ ಕೇಳದೆ, ತಮ್ಮ ಹಠವನ್ನೇ ಸಾಧಿಸುತ್ತ ಹೋದರು. ಕೊನೆಗೆ ಉಪಾಯವಿಲ್ಲದಾಯಿತು. ಆಗ ಈ ಮಹಾ ಶ್ರೀಗಳವರು ಕೋಪಾವಿಶಿಷ್ಟರಾಗಿ, ಒಳ್ಳೇದು ಇನ್ಯಾತಕ್ಕೆ ದಾಕ್ಷಿಣ್ಯ, ನಮ್ಮ ಕಡೆಗೆ ಅಪರಾಧವಿಲ್ಲದಾಯಿತು, ಮುಂದಿನ ಕರ್ತವ್ಯವನ್ನು ಮಾಡಲೇಬೇಕೆಂದು ನಿಶ್ಚಯಿಸಿ, ರೂಲ್ಸು (ಕಾಯಿದೆ) ಪ್ರಕಾರ ಆ ಶ್ರೀಗಳವರಮೇಲೆ ಕೋರ್ಟಿನಲ್ಲಿ ವ್ಯಾಜ್ಯವನ್ನು ನಡೆಯಿಸಿದರು.

ನ್ಯಾಯಮಾರ್ಗದಿಂದ ನಿರ್ಬಂಧಪಡಿಸಲು ಅವರು ಮಹಾಕೋಪಗೊಂಡು, ಇವರನ್ನು ತಿರಸ್ಕರಿಸುತ್ತ ಮಹಾಸಂಸ್ಥಾನಮಠದಲ್ಲಿ ಪ್ರವೇಶಮಾಡದಂತೆ ಆತಂಕಪಡಿಸಿ, ಪರಸ್ಪರ ಕಲಹ ಜರಗುತ್ತ ವ್ಯಾಜ್ಯ ನಡೆಯಿತು.

ಇಷ್ಟರಲ್ಲಿ (ಮಹಾ ಶ್ರೀಗಳವರಮೇಲೆ) ಮತ್ತೊಂದು ತೊಂದರೆಯು ಸಂಭವಿಸಿತು. ಎನಂದರೆ– ಸ್ಥಿರಪಟ್ಟದ ಶ್ರೀ ಚೆನ್ನಬಸವ ಮಹಾಸ್ವಾಮಿಗಳವರು ಲಿಂಗೈಕ್ಯರಾದ ಸ್ವಲ್ಪ ದಿವಸಗಳಲ್ಲಿಯೇ ನಿಂಬಲಗೇರಿ ಗ್ರಾಮದವರು ಒಂದು ತಾಂತ್ರಿಕ ಪಟ್ಟವನ್ನು ಮಾಡಿ, ಉಜ್ಜಯಿನೀ ಪೀಠಕ್ಕೆ ಪಟ್ಟವಾಯಿತೆಂದು ಹೇಳಹತ್ತಿದ್ದರು. ಈ ವಾರ್ತೆಯನ್ನು ಮಹಾಶ್ರೀಗಳವರು ಕೇಳಿ, ನಿಂಬಲಗೇರಿಯವರ ಸಂಗಡಲೂ ವ್ಯಾಜ್ಯವನ್ನು ನಡೆಸಿದರು.

ಚಿಕ್ಕತನದಲ್ಲಿಯೇ ಇಂತಹ ಕಠಿಣ ಪ್ರಸಂಗಗಳು ಬಂದರೂ ಧೈರ್ಯಗುಂದದೆ ಆಯಾ ಕೆಲಸಗಳಿಗೆ ಸರಿಯಾದ ವೆವಸ್ಥೆಮಾಡಿ, ಪುನಃ ದೇಶಮಧ್ಯ ಸಂಚಾರಕ್ಕೆ ಹೊರಟು, ಶಿಷ್ಯಮಂಡಲಿಗೆ ತೊಂದರೆಯನ್ನು ಕೊಡದೆ, ಹಿತೋಪದೇಶವನ್ನು ಮಾಡುತ್ತ, ಕಾಣಿಕಾರೂಪದಿಂದ ಧನವನ್ನು ಸಂಗ್ರಹಿಸಿ, ಆ ಶ್ರೀಗಳವರು ಮಾಡಿದ ಎಷ್ಟೋ ಸಹಸ್ರರೂಪಾಯಿಗಳ ಸಾಲವನ್ನು ನಿವಾರಣೆಮಾಡುತ್ತ ಬಂದರು. ಇಂತಹ ಕಷ್ಟ-ನಷ್ಟಗಳು ಬಂದರೂ ತಮ್ಮ ವಿದ್ಯಾವ್ಯಾಸಂಗವನ್ನು ಬಿಡದೆ ಸಾಗಿಸುತ್ತಿದ್ದರು.

ಉಜ್ಜಯಿನೀ ಪೀಠದ ಉಭಯ ಜಗದ್ಗುರುಗಳವರಲ್ಲಿ ಪರಸ್ಪರ ವ್ಯಾಜ್ಯಗಳು ಕೋರ್ಟಿನಲ್ಲಿ ಜರಗುತ್ತಿರುವದನ್ನು ಕೇಳಿ, ನೋಡಿ ದೇಶದ ಸಮಸ್ತ ಗುರುಪೀಠಾಭಿಮಾನಿಗಳು ಬಹು ವಿಷಾದಪಡುತ್ತಿದ್ದರು. ಆಗ ಬಳ್ಳಾರಿ ಪಟ್ಟಣದ ವೀರಶೈವ ಮಂಡಲಿಯುವರು ಈ ಮಹಾಸಂಸ್ಥಾನದ ವ್ಯಾಜ್ಯದ ವಿಷಯದಲ್ಲಿ ತಾ. ೮–೯–೧೯೧೦ ಇಸ್ವಿ, ಸಾಧಾರಣನಾಮ ಸಂ।ರ ಭಾದ್ರಪದ ಶು। ೫ ಗುರುವಾರ ಮಹಾಜನ ಸಭಾ ಮಾಡಿ ಮೀಟಿಂಗು ನಡೆಯಿಸಿ, ಠರಾವು ಮಾಡಿದರು.

## ಠರಾವುಗಳು –

೧. ಉಜ್ಜಯಿನೀ ಸಂಸ್ಥಾನದ ಚರಪಟ್ಟದ ಶ್ರೀ ಮರುಲಸಿದ್ಧ ಸ್ವಾಮಿಗಳವರು ಮತೋನ್ನತಿಯ ಕಾರ್ಯಗಳ ಮಾಡದೆ, ಪ್ರಮುಖ ಜನರು ಸೂಚಿಸಿದಂತೆ ವಿಷಯಗಳನ್ನಂಗೀಕರಿಸದೆ, ಸಮಾಜಕ್ಕೆ ಹಾನಿತೋರುವ ಕಲಹದಲ್ಲಿ ಪ್ರವೇಶವಾಗಿರುತ್ತಾರೆ.

೨. ಉಜ್ಜಯಿನೀ ಮಹಾಸಂಸ್ಥಾನದ ಚರಪಟ್ಟಾಧ್ಯಕ್ಷ ಶ್ರೀ ಜ. ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಸಂಸ್ಥಾನ ಹಾಗು ದೇವಾಲಯಗಳಲ್ಲಿ ಕಾಲ ಕಾಲಕ್ಕೆ ಸರಿಯಾಗಿ ನಡೆಯಬೇಕಾದ ಸದ್ವಿನಿಯೋಗದ ಖರ್ಚುಗಳನ್ನು ಯೋಗ್ಯ ರೀತಿಯಿಂದ ನಡೆಯಿಸುತ್ತ ಮತಸುಧಾರಣೆಯ ಕಾರ್ಯಗಳಿಗೂ, ವಿದ್ಯಾಭಿವೃದ್ಧಿಯ ಕಾರ್ಯಗಳಿಗೂ ಸಹಾಯಮಾಡುತ್ತ, ವೀರಶೈವ ಮಂಡಳಿಯವರ ಅಭಿಪ್ರಾಯಗಳಿಗನುಸಾರವಾಗಿ ಮತವನ್ನೂರ್ಜಿತಸ್ಥಿತಿಗೆ ತರುತ್ತ ಜಗದ್ಗುರು ಪೀಠಕ್ಕೆ ಸಮಸ್ತ ವಿಧದಿಂದಲೂ ಯೋಗ್ಯರೂ, ಪ್ರಕಾಶಕರೂ, ಧರ್ಮಸುಧಾರಕರೂ ಆಗಿ ಆಚಾರ್ಯ ಪದವಿಗೆ ಇವರು ಅರ್ಹರೆನಿಸಿ ಮಾನ್ಯರಾಗಿದ್ದಾರೆ. ಇತ್ಯಾದಿ ವಿವರಗಳು ಮುದ್ರಿಸಿ ಪ್ರಸಿದ್ಧ ಮಾಡಲ್ಪಟ್ಟವು.

## ಶಿವಯೋಗಾನುಸಂಧಾನವೂ, ವೈರಾಗ್ಯ ಪ್ರಭಾವವೂ

ಈ ವಿಶ್ವಪ್ರಪಂಚದಲ್ಲುದ್ಭವಿಸಿದ ಪ್ರತಿಯೊಬ್ಬ ಮಾನವನೂ ಬಾಲ್ಯಾವಸ್ಥೆಯನ್ನು ಕಳೆದು ತಾರುಣ್ಯಕ್ಕೆ ಬಂದಮೇಲೆ ಕುಶಲಮತಿ, ಕಾರ್ಯದಕ್ಷತೆ, ಧೈರ್ಯ, ವಾಕ್ಚಾತುರ್ಯತೆ ಮುಂತಾದವುಗಳು ಸ್ವತಃ ಉದಯವಾಗಿ ಮನುಜನು ಪ್ರಗತಿಸ್ಥಿತಿಗೇರುವದು ಅನುಭವಸಿದ್ಧವಾಗಿದೆ.

ಆದರೆ ಈ ಜ॥ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಶಾಸ್ತ್ರಾಧ್ಯಯನವಾಗುತ್ತಲೇ ಶಿವತತ್ವಸಿದ್ಧಾಂತ ಹಾಗು ಅಷ್ಟಾವರಣ, ಷಟಸ್ಥಲ, ಯೋಗಾಭ್ಯಾಸ ಮೊದಲಾದ ಸತ್ಕ್ರಿಯೆಗಳ ನಿಜತತ್ವ ವಿಚಾರಗಳು ಮನನವಾದವು. ಇಂತಹ ಸಮಯದಲ್ಲಿ ಯೌವನ, ಅಧಿಕಾರ ಮುಂತಾದ ಸುಖ-ಸಂಪದಗಳಿದ್ದರೂ ಈ ಪುಣ್ಯಾತ್ಮರಿಗೆ ಕಿಂಚಿತ್ತಾದರೂ ಚಿತ್ತಚಂಚಲವಾಗಲಿಲ್ಲ. ದುರಹಂಕಾರ, ಸ್ವಾರ್ಥತೆ, ಡಾಂಭಿಕತನ, ಆತ್ಮಸ್ತುತಿ, ಬಹಿರಾಡಂಬರ, ಆಶಾ-ಪಾಶಾ, ದುರ್ವಿಷಯಗಳಿಗೆ ಆಸ್ಪದ ಕೊಡಲಿಲ್ಲ. ಪರಮ ಜ್ಞಾನಿಗಳೂ, ಶಾಂತಮೂರ್ತಿಗಳೂ, ಮಹಾತ್ಮರೂ ಎಂಬ ಪ್ರಖ್ಯಾತಿಹೊಂದಿ ತಮ್ಮ ಸುಖ-ಸಂಪದಗಳನ್ನು ತೃಣಕ್ಕಿಂತಲೂ ಕಡೆಮಾಡಿ, ಕೇವಲ ಶ್ರೀ ರುದ್ರಾಭಿಷೇಕ, ಮಹಾಪೂಜಾನಂದಲೋಲರಾಗಿದ್ದರು.

ಹೀಗಿರುತ್ತಿರಲು ಈ ಮಹಾಗುರುಗಳ ವೈರಾಗ್ಯಶೀಲತೆ, ಶಿವಯೋಗನಿಷ್ಠೆಯ ಪ್ರಭಾವವು ಚತುರ್ದಿಕ್ಕುಗಳಲ್ಲಿಯೂ ಹಬ್ಬಿತು. ಇವರ ದರ್ಶನಕ್ಕೆ ಬಂದ ಸದ್ಭಕ್ತರು ಧರ್ಮೋಪದೇಶದ ವಾಕ್ಯಗಳನ್ನು ಕೇಳಿ, ದಿವ್ಯರೂಪವನ್ನು ನೋಡಿ ಅತ್ಯಂತ ಭಯ-ಭಕ್ತಿಯುಳ್ಳವರಾಗಿ ಆಹಾ, ಇವರೇ ನಿಜವಾದ ಗುರುಗಳು! ಇವರೇ ಮತೋದ್ಧಾರಕರು! ಈ ಮಹಾನುಭಾವರಿಂದ ನಮ್ಮ ವೀರಶೈವ ಧರ್ಮೋನ್ನತಿಯಾಯಿತು! ಇಂದಿಗೆ ನಮ್ಮ ಜನ್ಮ ಸಾರ್ಥಕವಾಯಿತು! ಇವರು ಸಾಕ್ಷಾತ್ಪರಶಿವಾವತಾರಿಗಳು ನಿಶ್ಚಯವೆಂದು ಕೊಂಡಾಡುತ್ತಿದ್ದರು.

ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಮುನಿಪುಂಗವರಾದ ಅಗಸ್ತ್ಯ ಮಹರ್ಷಿಗಳಿಗೆ ಉಪದೇಶಮಾಡಿದ "ಸಿದ್ಧಾಂತ ಶಿಖಾಮಣಿ" ಮಹಾಗ್ರಂಥದಲ್ಲಿ ಇವರಿಗೆ ಪರಮ ಪ್ರೀತಿ. ಶಿವತತ್ವಗರ್ಭಿತವಾದ ಈ ಗ್ರಂಥವನ್ನು ಸದಾವಕಾಲ ನೋಡುತ್ತ ಅದರಲ್ಲಿರುವ ನಿಜತತ್ವಗಳನ್ನು ತಿಳಿದು ಅದರಂತೆ ನಿತ್ಯಾಚರಣೆಯಲ್ಲಿ ತಂದದ್ದರಿಂದ ಇವರಲ್ಲಿ ಅದ್ಭುತವಾದ ಮಹಿಮಾಪ್ರಭಾವವು ಪ್ರಜ್ವಲಿತವಾಯಿತು.

## ಬೇರೆವಿಧ ವ್ಯಾಜ್ಯಗಳು

ಹೀಗಿರುತ್ತಿರಲು ಮಹಾಸಂಸ್ಥಾನಕ್ಕೆ ಹೊಂದಿರುವ ಶ್ರೀಮನ್ಮಹಾ ಮರುಳಸಿದ್ಧೇಶ್ವರ ದೇವಸ್ಥಾನವು ನಮ್ಮದು, ಮಹಾಸ್ವಾಮಿಗಳ ಸಂಬಂಧವಿಲ್ಲವೆಂದು ಆ ದೇವರ ಪೂಜಾರಿಗಳು ಗುಂಪಾಗಿ ಕಲಹವನ್ನು ನಡೆಯಿಸಿದರು. ಇದೊಂದು



ಪ್ರಾಯದ ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು

ವ್ಯಾಜ್ಯವು ಪ್ರಾರಂಭವಾಗಿ ನಡೆದ ಬಳಿಕ ಕೆಲವು ದಿವಸ ಆ ದೇವಾಲಯವು ಟೆಂಪಲ್ ಕಮಿಟಿಯವರ ಸ್ವಾಧೀನವಾಯಿತು. ಮಹಾಶ್ರೀಗಳವರು ಅಷ್ಟಕ್ಕೇ ಬಿಡದೆ ವ್ಯಾಜ್ಯ ವನ್ನು ನಡೆಸಿದರು.

ಇದಲ್ಲದೆ ವೀರಶೈವ ಮತದೊಳಪಂಗಡದವರಾದ ಸಾದರೆಂಬುವರು ಉಜ್ಜ ಯಿನೀ ಪೀಠವೇ ನಮ್ಮದೆಂದು ಸಾಧಿಸಿ ವ್ಯಾಜ್ಯ ಹೂಡಿದರು. ಅವರ ಸಂಗಡಲೂ ಮಹಾಶ್ರೀಗಳವರು ಯುಕ್ತಿ-ಪ್ರಯುಕ್ತಿಗಳಿಂದ ಕೋರ್ಟಿನಲ್ಲಿ ವ್ಯಾಜ್ಯ ನಡೆಸಿದರು.

ಈ ಮೊದಲು ಶ್ರೀ ಮರುಳಸಿದ್ಧಸ್ವಾಮಿಗಳವರ ಮೇಲೆ ನಡೆಸಿದ ವ್ಯಾಜ್ಯದ ಒಂದು ವಿಷಯವು ಬಳ್ಳಾರಿ ಜಜ್ಜ ಕೋರ್ಟಿನಲ್ಲಿ ತಾ. ೨೯-೮-೧೯೧೨ ನೆಯ ದಿವಸ ಮಹಾಶ್ರೀಗಳವರಂತೆ ತೀರ್ಮಾನವಾಯಿತು. ಈ ಪ್ರಕಾರ ಒಂದರಮೇಲೊಂದು ವ್ಯಾಜ್ಯ-ಕಲಹ, ದ್ವೇಷಾಸೂಯೆ, ದ್ರವ್ಯದ ಕೊರತೆ ಇತ್ಯಾದಿ ವಿಪತ್ಪರಂಪರೆಗಳಲ್ಲಿ ಇವರು ಹೇಗೆ ಪಾರಾಗಬೇಕೆಂದು ಗುರುಪೀಠಾಭಿಮಾನಿಗಳಾದ ಬಹುಜನ ಸದ್ಭಕ್ತರು ಚಿಂತಾಕ್ರಾಂತರಾಗಿದ್ದರು. ಎಷ್ಟು ತೊಂದರೆಗಳು ಪ್ರಾಪ್ತವಾದರೂ "ವಿಪದಿಧೈರ್ಯ ಮಥಾಭ್ಯುದಯೆ ಕ್ಷಮಾ" ಎಂಬಂತೆ ಈ ಮಹಾತ್ಮರು ಲೇಶವಾದರೂ ಮನೋವ್ಯಾಕುಲ ವ್ಯಸನ, ಚಂಚಲತೆ ಹೊಂದದೆ ತಮ್ಮ ಶಿವಯೋಗಾನುಷ್ಠಾನವನ್ನು ಶಾಂತರೀತಿ ಯಿಂದ ಪೂರೈಸುತ್ತಿದ್ದರು.

ಶ್ರೀಮದ್ದಾರುಕ ಶಿವಾಚಾರ್ಯ ಪರಾವತಾರಿಗಳಾದ ಈ ಧರ್ಮಮೂರ್ತಿಯ ಶಮ-ದಮಾದಿ ಸದ್ಗುಣಮಣಿಗಣವನ್ನೂ, ಶಿವಪೂಜಾಧುರಂಧರತೆಯನ್ನೂ ಅವಲೋ ಕನಮಾಡಿ ಬಳ್ಳಾರಿ, ಕೊಟ್ಟೂರು, ಹೊಸಪೇಟೆ, ಹರಪನಹಳ್ಳಿ, ಜಗಲೂರು ಮುಂ ತಾದ ಗುರುಭಕ್ತರು ಇವರಲ್ಲಿ ಅಸಾಧಾರಣವಾದ ಭಕ್ತಿಯನ್ನಿರಿಸಿ, ಮಹಾತ್ಮರಿಗೆ ಪ್ರತಿಯೊಂದು ವಿಷಯದಲ್ಲಿಯೂ ಜನಸಹಾಯ, ಧನಸಹಾಯ ಮಾಡುತ್ತ ಕಟಿಬದ್ಧ ರಾಗಿ ನಿಂತಿದ್ದರು.

ಆದರೆ ಮಹಾ ಶ್ರೀಗಳವರು ತಮ್ಮ ಸಂಸ್ಥಾನಕ್ಕೆ ಸಹಾಯಕರಾಗಿಯೂ, ಪೂರ್ವಾಪರ ದೀರ್ಘಾಲೋಚನೆಯಿಂದ ವ್ಯವಹಾರ ಮುಂತಾದವುಗಳ ಜರುಗಿಸಲಿಕ್ಕೂ ಪಂಚಪ್ರಮುಖರನ್ನು ಏರ್ಪಾಟುಮಾಡಿಕೊಂಡರು. ಯಾರೆಂದರೆ- (೧) ಕೊಟ್ಟೂರು ಜಾಗಟಗೇರಿ ಮಿ. ಮ. ದೊಡ್ಡವೀರಪ್ಪಯ್ಯನವರು, (೨) ಹರಪನಹಳ್ಳಿ ಪಾ. ಬೆಟ್ಟನ ಗೌಡರು, (೩) ಉಚ್ಚಂಗಿ ದುರ್ಗದ ಎಂ. ಸಿದ್ಧನಗೌಡರು, (೪) ಹೊಳಗುಂದಿ ಶಾ. ಮುಂ. ಸಿದ್ಧಲಿಂಗಪ್ಪನವರು; (೫) ಹುವ್ವಿನಹಡಗಲಿ ಕೋರಿ ಗುರುಶಾಂತಪ್ಪ ನವರು.

## ನೈಜಾಂ ಪ್ರಾಂತಕ್ಕೆ ಮಹಾಸವಾರಿ ದಯಮಾಡಿಸಿದ್ದು

ಮಹಾಶ್ರೀಗಳವರು ಕೆಲವು ದಿವಸ ಮಠದಲ್ಲಿರುತ್ತ ಸಮಸ್ತ ಕಾರ್ಯಗಳ ಯೋಗ್ಯ ವ್ಯವಸ್ಥೆಮಾಡಿ ಮುಂದೆ ನಿಜಾಂ (ಹೈದರಾಬಾದ) ಪ್ರಾಂತಕ್ಕೆ ದಯಮಾ

ಡಿಸಿ ಅಲ್ಲಿಯ ಶಿವಭಕ್ತ ಸಮೂಹವನ್ನು ದರ್ಶನ, ಫಲಾಶೀರ್ವಾದಗಳಿಂದ ಪುನೀತ ರನ್ನಾಗಿ ಮಾಡಬೇಕೆಂದಾಲೋಚಿಸಿ ಸಕಲ ಸಿಬ್ಬಂದಿಯನ್ನು ಸಿದ್ಧತೆನಾಡಿಕೊಂಡು ಪ್ರಯಾಣ ಬೆಳೆಯಿಸಿ ಗ್ರಾಮಾನುಗ್ರಾಮುಗಳಲ್ಲಿ ಮುಕ್ಕಾಂ ಮಾಡುತ್ತ ಅಲ್ಲಿಯ ಸದ್ಭ ಕ್ತರ ಶೇವೆಯಿಂದ ತುಷ್ಟರಾಗಿ ಪುನಃ ದೊಡ್ಡ ದೊಡ್ಡ ಮಹೋತ್ಸವಗಳನ್ನು ಜರು ಗಿಸಲು ನೈಜಾಂ ಸರಕಾರದ ರಾಜಾ ಇಂದ್ರಕರಣ ಬಹಾದ್ದೂರ ಅವ್ವಲ್ ತಾಲೂಕ ದಾರ ಇವರ ಕಡೆಗೆ ಅಡ್ಡಪಾಲಕಿ, ಪಂಚಕಲಶ, ಶ್ವೇತಛತ್ರ, ಹಗಲು ದೀವಟಿಗೆ ಮುಂತಾದ ಬಿರುದಾವಳಿಗಳ ವಿಷಯದಲ್ಲಿ ಅರ್ಜಿ ಹಾಕಿಸಿ, ಉತ್ತರ (ಹುಕುಂ) ಪಡೆದು ಸುರಪುರ, ಯಾದಗಿರಿ, ಹುಮನಾಬಾದ, ರಾಯಚೂರು ಮುಂತಾದ ಪ್ರಸಿದ್ಧ ಪಟ್ಟಣಗಳಲ್ಲಿ ಮಹೋತ್ಸವಗಳನ್ನು ಅತ್ಯಂತ ವೈಭವದಿಂದ ನಡೆಯಿಸುತ್ತಲೂ ಮತ್ತು ಇತರ ಗ್ರಾಮುಗಳ ಸದ್ಭಕ್ತರಿಂದ ಗುರುಕಾಣಿಕಾ ಸ್ವೀಕರಿಸುತ್ತಲೂ ಕೆಲವು ದಿವಸ ಸಂಚಾರ ನಡೆಯಿಸಿದ್ದರು.

ಈ ಗುರುಪುಂಗವರು ನೈಜಾಂ ಪ್ರಾಂತದಲ್ಲಿ ಸಂಚರಿಸುತ್ತಾ ಇರಲಾಗಿ ಇವರ ಸದ್ವಾರ್ತೆಯು ಸರ್ವತ್ರ ಪ್ರಸಾರವಾಯಿತು. ಬಹುಜನರು ದರ್ಶನಾಪೇಕ್ಷಿಗಳಾಗಿ ಬಂದು ವಂದಿಸಿ, ಗುರುಕಾಣಿಕೆಯನ್ನರ್ಪಿಸಿ, ಫಲಾಶೀರ್ವಾದವನ್ನು ಪಡೆದು ತೆರಳು ತ್ತಿದ್ದರು.

ಬಳಿಕ ಗುಲುಬುರ್ಗಾ ಡಿ॥ಕ್ಕೆ ಸೇರಿದ ಮಹಾಗಾಂವ ಎಂಬಲ್ಲಿಗೆ ಮಹಾ ಸವಾರಿಯು ಚಿತ್ತೈಯಿಸಿತು. ಪದ್ಧತಿ ಪ್ರಕಾರ ನಿತ್ಯ ಕಾರ್ಯಕ್ರಮಗಳು ನಡೆಯು ತ್ತಿದ್ದವು. ಈ ಭಗವತ್ಪಾದರು ಆ ಗ್ರಾಮದಲ್ಲಿ ನಡೆಯುತ್ತಿರುವ ಜ್ಯೋತಿಷ್ಯಪಾಠ ಶಾಲೆಯ ವಿಷಯವನ್ನು ಕೇಳಿ ಹರುಷಗೊಂಡು, ಪಾಠಶಾಲಾಧ್ಯಾಪಕರಾದ ಕೆ. ಎಂ. ವೇ॥ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳನ್ನೂ, ವಿದ್ಯಾರ್ಥಿಗಳನ್ನೂ ಕರೆಯಿಸಿ ಕೊಂಡು, ವಿದ್ಯಾರ್ಥಿಗಳ ಅಭ್ಯಾಸಕ್ರಮ ವಿಮರ್ಸೆಮಾಡಿ, ಬಳಿಕ– "ಬಾಲಕರೇ, ನೀವು ನಿಂಮ ನಿಂಮ ಗ್ರಾಮದ ಮಠಾಧಿಕಾರಿಗಳಾಗಿದ್ದೀರಿ. ನೀವು ಬಹು ಶ್ರದ್ಧೆ ಯಿಂದ ಸಂಸ್ಕೃತ, ಜೋತಿಷ್ಯ, ವೈದಿಕ ವಿದ್ಯಾಭ್ಯಾಸಮಾಡಬೇಕು. ಮತ್ತು ಸದಾ ಚಾರ, ಸದ್ಗುಣವಂತರಾಗಿ ವರ್ತಿಸಿರಿ. ನಿಮ್ಮಿಂದಲೇ ವೀರಶೈವ ಸಮಾಜ ಸುಧಾ ರಣೆ, ಸಮಾಜದೇಳ್ಗೆ ಹೊಂದಬೇಕಾಗಿದೆ. ನೀವು ಉತ್ತಮ ಮಾರ್ಗದಲ್ಲಿ ನಡೆದರೆ ಶಿಷ್ಯರೂ ನಡೆಯುವರು. ಚಹಾ, ಚುಟ್ಟಾ, ಗಾಂಜಿ, ವ್ಯಭಿಚಾರ, ದುರಾಚಾರಾದಿ ದುಷ್ಕೃತಿಗಳನ್ನು ತ್ಯಾಜ್ಯಮಾಡಬೇಕು. ನಾವು ಮಠದವರು, ನಮ್ಮನ್ನಾರು ಕೇಳುವ ರೆಂದು ಸ್ವೇಚ್ಛಾವಿಹಾರಿಗಳಾಗಬಾರದು. ಗುರುವರ್ಗದವರು ಸುಧಾರಿಸುವದು ಮೊದ ಲನೇ ಕರ್ತವ್ಯ." ಇತ್ಯಾದಿ ಸದ್ಬೋಧಮಾಡಿ, ಈ ಪಾಠಶಾಲೆಯು ಉತ್ತರೋತ್ತರ ಅಭಿವೃದ್ಧಿಹೊಂದಲೆಂದು ಆಶೀರ್ವದಿಸಿ, (೨೦೦) ರೂಪಾಯಿಗಳನ್ನು ದಯಪಾಲಿಸಿ ಮುಂದೆ ೨-೩ ತಿಂಗಳವರೆಗೆ ಅಲ್ಲಿಯೇ ಮುಕ್ಕಾಂ ಮಾಡಲಾಯಿತು.

## ಗುಲುಬುರ್ಗಾದಲ್ಲಿ ಮಹೋತ್ಸವವು

ಈ ಜಗದಾಚಾರ್ಯರ ದಿವ್ಯಪ್ರಭಾವವು ಜಗದ್ವ್ಯಾಪಕವಾಯಿತು. ಸಂಣ ಪುಟ್ಟ ಗ್ರಾಮದವರು ಸಹಿತ ಈ ಮಹಿಮರನ್ನು ನಂಮಲ್ಲಿಗೆ ದಯಮಾಡಿಸಿಕೊಂಡರೆ ಸರ್ವಮತದವರಿಗೂ ಹಾಗು ಕುಂಟರು, ಕುರುಡರು, ಹೆಳವರು, ಮೂಕರು, ವೃದ್ಧರು ಬಾಲಕರು, ಸ್ತ್ರೀಯರು ಮೊದಲಾದವರು ಈ ಮಹಾತ್ಮರ ದರ್ಶನಮಾಡಿಕೊಂಡು ಧನ್ಯರಾಗುವರು. ಬಹುಕಾಲದಿಂದಲೂ ನಮ್ಮ ಪ್ರಾಂತಕ್ಕೆ ಇಂತಹ ಸಿಂಹಾಸನಾಧಿಪತಿಗಳು ದಯಮಾಡಿಸಿದ್ದಿಲ್ಲಾ.' ಇಂದಿಗೆ ಜಗದ್ಗುರುಗಳವರ ಪಾದಸೇವೆ ಮಾಡುವ ಸುಯೋಗವು ಲಭಿಸಿತೆಂದು ಆತುರಪಡುತ್ತಿದ್ದರು.

ಆ ನಿಜಾಂ ರಾಜ್ಯದಲ್ಲಿ ಪ್ರಸಿದ್ಧವಾದ **ಗುಲಬುರ್ಗಾ** (ಕಲುಬುರ್ಗಿ) ಎಂಬ ನಗರದ ಸದ್ಭಕ್ತಮಂಡಳಿಯು ಮಹಾಸನ್ನಿಧಿಗೆ ಬಂದು ಬಿನ್ನೈಸಿ, ತಮ್ಮ ಗ್ರಾಮಕ್ಕೆ ಬಿಜಯಂಗೈಸಿಕೊಂಡು, ಶ್ರೀ ಶಾ। ಶಕ ೧೮೩೫ ನೇ ಪ್ರಮಾದೀಚನಾಮ ಸಂವತ್ಸರದ ಕಾರ್ತೀಕ ಶು। ೫ ದಿವಸ ಶ್ರೀಮದ್ದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ ಶ್ರೀ **ಜಗದ್ಗುರು ಸಿದ್ಧಲಿಂಗರಾಜ ದೇಶಿಕೇಂದ್ರ** ಮ ಹಾ ಸ್ವಾ ಮಿ ಗ ಳ ವ ರ ತಿರ್ಯಗಾಂದೋಲಿಕಾ (ಅಡ್ಡಪಾಲಿಕಿ) ಮಹೋತ್ಸವವು ಪರಮ ಸಂಭ್ರಮದಿಂದ ಜರುಗುತ್ತದೆ ಎಂದು ಸಹಸ್ರಾವಧಿ ಹಸ್ತಪತ್ರಿಕೆಗಳನ್ನು ಎಲ್ಲಾ ಪ್ರದೇಶಗಳಿಗೂ ರವಾನಿಸಿ, ಸಕಲ ವಿಧವಾದ ಸಿದ್ಧತೆಯ ಮಾಡಿಕೊಂಡು, ಸದರಿ ಮಿತಿ ದಿವಸ ಸಕಲ ಬಿರುದಾವಳೀಯೊಡಗೂಡಿದ ಅಡ್ಡಪಾಲಿಕಿ ಮಹೋತ್ಸವವನ್ನು ಅತ್ಯಂತ ವೈಭವದಿಂದ ನೆರವೇರಿಸಿದರು. ಎಷ್ಟೋ ಸಹಸ್ರಾವಧಿ ಪ್ರೇಕ್ಷಕಜನರು ಈ ಗುರು ಸಾರ್ವಭೌಮರ ಮಹೋತ್ಸವವನ್ನು ನೋಡಿ ಧನ್ಯರಾದೆವೆಂದು ಹೊಗಳಿದರು.

ಬಳಿಕ ಮಹಾಸ್ವಾಮಿಗಳವರು ತಮ್ಮ ಸಂಸ್ಥಾನದಿಂದ ಕೆಳಗೆ ಕಾಣಿಸಿದಂತೆ ಒಂದು ಪ್ರಸಿದ್ಧಪತ್ರಿಕೆಯನ್ನು ಹೊರಡಿಸಿದರು.—

॥ ಓಂ ॥

ಶ್ರೀಮತ್ತ್ರೈಯಂತ ವೇದ್ಯನಿಷ್ಕಲ ನಿರಂಜನ ನಿರ್ಗುಣಾದಿ ಪದ ವೇದನೀಯ ಪರಾತ್ಪರವಸ್ತು ಸ್ವಷಡ್‌ಭಾಗಾತ್ಮಕ ಷಟ್‌ಸ್ಥಲಾಶ್ರಿತ ಭಕ್ತಾದ್ಯೈಕ್ಯಾಂತೈಕ ವಿಂಶತ್‌ಸಹಸ್ರ ಪ್ರಥಮ ಪರಿಮಿತಿ ಮಾಹೇಶ್ವರಾನಂತ ಭಕ್ತಾಸಂಖ್ಯಾಗರ್ಭಿತ ವೀರಶೈವ ಮಹಾಮಠಸ್ಥಾಪನಾಚಾರ್ಯದಾರುಕಾಚಾರ್ಯಪರಂಪರಾಗತ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರು ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗರಾಜ ದೇಶಿಕೇಂದ್ರ ಮಹಾಸ್ವಾಮಿನಾಂ ಸನ್ನಿಧಾನೇನ :—

ಕೃಪಾಪಾತ್ರರಾದ ಗುಲ್ಬುರ್ಗಾ ವಗೈರಾ ತಮಾಮು ನೈಜಾಂ ಇಲಾಖಾ ಮಠ, ಮಹತ್ತು, ಶೆಟ್ಟರು, ಗೌಡರು ಮುಂತಾದ ಸಮಸ್ತ ವೀರಶೈವ ಮಂಡಳಿಗೆ ಆಶೀಃ ಪೂರ್ವಕವಾದ ಈ ಇಸ್ತಿಹಾರದ್ವಾರ ಸೂಚಿಸುವದೇನಂದರೆ:—

ಈ ನೈಜಾಂ ಪ್ರದೇಶವಲ್ಲಿ ಅನೇಕರು ಮೂಲಾಚಾರ್ಯ ಪೀಠಗಳ ಹುಕುಮು ಸನದುಗಳಿಲ್ಲದೇ ಸರಗಣಾಚಾರಿ ಮುಂತಾದ ರುಸುಮುಗಳನ್ನು ಅಕ್ರಮವಾಗಿ ನಡಿಸಿ ಕೊಳ್ಳುತ್ತಿದ್ದಂತೆ ಪಬ್ಲಿಕ ಬಿಲ್ ಮುಷಾಫಾ ಕೈಫಿಯತಿನಿಂದಾ ಈ ಸನ್ನಿಧಿಗೆ ವೇದ್ಯ ವಾಗಿದೆ. ಕಾರಣ ಸದರಿ ಸರಗಣಾಚಾರಿ ಬಾಬು ನಡಿಸಿಕೊಳ್ಳತಕ್ಕವರೂ, ಈ ಇಸ್ತಿ ಹಾರು ಮುಟ್ಟಿದ ೩ ತಿಂಗಳು ಮುದ್ದತ್ತಿನೊಳಗಾಗಿ, ಮಜಕೂರು ಸನ್ನಿಧಿ ಹುಮನಾ ಬಾದಿ ಮುಕ್ಕಾಂ ವಗೈರಾಕ್ಕೆ ಹಾಜರಾಗಿ ತಮ್ಮ ಹಕ್ಕಿನ ಕಾರಣ ದಸ್ತೈವಜಗಳನ್ನು ಹಾಜರುಮಾಡಿ ಸನ್ನಿಧಿಯಿಂದ ತಾತ್ಕಾಲಿಕ, ಯಾ, ದವಾಮನ್ ವಂಶಪರಂಪರೆಯ ಹುಕ್ಕುಂ ಪಡೆಯತಕ್ಕದ್ದು. ಈ ಮುದ್ದತ್ತಿನೊಳಗಾಗಿ ಹಾಜರಾಗಿ, ಕ್ರಮವಾದ ಹುಕುಂ ಹೊಂದದವರಿಗೆ, ಬಾಬನ್ನು ಯಾರೂ ನಡಿಸಕೂಡದು. ಖಂಡಿತ ಗ್ರಹಿಸ ತಕ್ಕದ್ದು. ತೇದಿ ೨೬—೧೨—೧೨ ಇಸ್ವಿ.

ಮುಕ್ಕಾಂ ಗುಲ್ಬುರ್ಗಾ, ಇಲಾಖಾ ನೈಜಾಂ.

ಈ ಗ್ರಾಮದಲ್ಲಿ ೨-೩ ತಿಂಗಳವರೆಗೆ ಮುಕ್ಕಾಂ ಇರಲಾಗಿ, ಈ ಮಹಾತ್ಮರ ದಿಗಂತವಿಶ್ರುತ ಕೀರ್ತಿಯನ್ನು ಕೇಳಿ, ಅನೇಕ ವಿದ್ವಾಂಸರೂ, ಗವಾಯಿಗಳೂ, ವಿದ್ಯಾರ್ಥಿಗಳೂ ಸನ್ನಿಧಿಗೆ ಬಂದು, ಸನ್ಮಾನಗಳನ್ನು ಪಡೆದು, ಸ್ತುತಿಸುತ್ತ ಹೋಗು ತ್ತಿದ್ದರು. ಆ ಕಾಲಕ್ಕೆ ಮಹಾಗಾಂವಿಯ ಒಬ್ಬ ಗುರುಲಿಂಗಸಿದ್ಧಕವಿಗಳೆಂಬವರು ಈ ಜಗದ್ಗುರುಗಳಮೇಲೆ ಕೆಲವು ಕವಿತ್ವ, ಮಂಗಲಸ್ತುತಿಗಳನ್ನು ರಚನಾಮಾಡಿ ಕೊಂಡು ಬಂದು ಅರ್ಪಿಸಿ ಆಶೀರ್ವಾದ ಪಡೆದರು.

ಈ ಗುಲ್ಬುರ್ಗಾ ನಗರದ ವೀರಶೈವ ಮಂಡಳಿಯ ಸೇವಾ-ಸತ್ಕಾರಗಳನ್ನು ತೀರಿಸಿಕೊಂಡು ಮುಂದೆ ಕಮಲಾಪುರ ಎಂಬಲ್ಲಿಗೆ ದಯಮಾಡಿಸಿದ ಕೆಲವು ದಿವಸ ಗಳ ನಂತರ ಹುಮನಾಬಾದ ಪಟ್ಟಣಕ್ಕೆ ಪ್ರಯಾಣ ಬೆಳೆಯಿತು. ಅಲ್ಲಿಯ ಸದ್ಭ ಕ್ತರು ಒಳ್ಳೇ ಉತ್ಸುಕತೆಯಿಂದ ಈ ಗುರುಪುಂಗವರ ದೊಡ್ಡ ಮಹೋತ್ಸವವನ್ನು ಮಾಡಿ ತಮ್ಮ ಭಕ್ತಿಯನ್ನು ಸಲ್ಲಿಸಿ ಗುರುಕೃಪೆಗೆ ಪಾತ್ರರಾದರು.

## ಭಸ್ಮಪ್ರದಾನದಿಂದ ಗ್ರಹಭಾಧೆ ನಿವಾರಣೆ

ಈ ಪ್ರಕಾರ ನಿಜಾಂ ರಾಜ್ಯದೊಳು ಸಂಚರಿಸುತ್ತಿರಲು ೨—೩ ವರುಷಗಳು ಗತಿ ಸಿದವು. ಮುಂದೆ ನಮ್ಮ ದೇಶಕ್ಕೆ ದಯಮಾಡಿಸಬೇಕೆಂದು ಸವಾರಿ ಹೊರಡಿಸಿ ಗ್ರಾಮಾನುಗ್ರಾಮಗಳಲ್ಲಿ ಮುಕ್ಕಾಂ ಮಾಡುತ್ತ ಬಿಚ್ಛಾಲಿ-ಮಂಚಾಲಿ ಗ್ರಾಮಗಳ ಸಮೀಪದ ರಾಮಪುರ ಎಂಬಲ್ಲಿಗೆ ಆಗಮಿಸಿದರು.

ಈ ಭಗವತ್ಪಾದರು ಸಣ್ಣ-ದೊಡ್ಡ ನಗರಗಳಲ್ಲಿರಲಿ, ಗಿರಿ-ಗುಹೆಗಳಲ್ಲಿರಲಿ ಅಥವಾ ನಿರ್ಜನ ಪ್ರದೇಶದ ಅರಣ್ಯದಲ್ಲಿದ್ದರೂ ಇವರ ಪ್ರಭಾವದಿಂದ ಜನರು ಸಕ್ಕರೆಯ ಕರಣೆಗೆ ಇರುವೆಗಳು ಮುಕ್ಕುರುವಂತೆ ಬಂದು ಸೇರುತ್ತಿದ್ದರು. ಹೀಗಿರಲು ಒಬ್ಬ ಸಾಹುಕಾರನು ತನ್ನ ಹೆಂಡತಿಗೆ ಬ್ರಹ್ಮರಾಕ್ಷಸವೆಂಬ ಗ್ರಹವು ಆವರಿಸಿಕೊಂಡು ಬಹು ಪರಿಯಿಂದ ವ್ಯಥೆಪಡಿಸಹತ್ತಿರಲು ನಾನಾವಿಧದಿಂದ ಯಂತ್ರ-ಮಂತ್ರ-ತಂತ್ರಗಳನ್ನು ಮಾಡಿಸಿದರೂ, ಎಷ್ಟು ದ್ರವ್ಯ ಖರ್ಚುಮಾಡಿದರೂ ಆ ಗ್ರಹಬಾಧಾನಿವಾರಣೆಯಾಗದೆ ಹೋಯಿತು. ಅವನು ಒಂದು ರಾತ್ರಿ ಕಳೆಯುವದು ಒಂದು ವರುಷ ಕಳೆದಂತಾಗುತ್ತಿತ್ತು. ಕಡೆಗೆ ಬೇಸತ್ತು ಶಿವ ಶಿವಾ! ಮುಂದೇನು ಮಾಡಲಿ, ಯಾವ ಮಹಾತ್ಮರಿಂದ ಈ ಕಷ್ಟನಿವಾರಣೆಯಾದೀತು, ಯಾವಾಗ್ಗೆ ನಾನು ಸುಖವಾಗಿ ನಿದ್ರೆ ಮಾಡೇನು ಹೀಗೆಂದು ಹಗಲಿರುಳೂ ಚಿಂತಿಸುತ್ತಿದ್ದನು.

ಅಷ್ಟರಲ್ಲಿ ಕೆಲಜನರು ಈ ಉಜ್ಜಯಿನೀ ಜ. ಸಿದ್ಧಲಿಂಗ ಮಹಾಸ್ವಾಮಿಗಳವರ ದರ್ಶನಮಾಡಿಕೊಂಡು ತೆರಳುವಾಗ್ಗೆ ಆ ಸಾಹುಕಾರನಿಗೆ ಭೆಟ್ಟಿಯಾಗಿ ಏನಪ್ಪಾ! ಸುಮ್ಮನೆ ಕಷ್ಟಪಡಬೇಡ, ಮಹಾ ಶಿವಯೋಗಿಗಳಾದ ಉಜ್ಜಯಿನೀ ಜಗದ್ಗುರುಗಳು ಮಹಾತ್ಮರಿದ್ದಾರೆ; ಅವರಲ್ಲಿಗೆ ಹೋದರೆ ಸುಖವಾಗುವದೆಂದು ಹೇಳಿದರು. ಕೇಳಿ ಸಂತುಷ್ಟನಾಗಿ, ಹಾ ಗುರುನಾಥ! ನಿನ್ನ ಮರೆಹೊಗುವೆನೆಂದು ಹೊರಟು ಸನ್ನಿಧಿಗೆ ಬಂದು ವಂದಿಸಿ, ತನ್ನ ಹೆಂಡತಿಯ ಕಷ್ಟವನ್ನು ಅರಿಕೆಮಾಡಿಕೊಂಡನು.

ಎಲಾ ಭಕ್ತನೇ, ಚಿಂತಿಸಬೇಡ. ನಮ್ಮ ಸನ್ನಿಧಿಯಲ್ಲಿ ೮–೧೦ ದಿವಸಗಳವರೆಗೆ ಉಭಯರೂ ಸೇವಾಮಾಡುತ್ತ ಇರಬೇಕು. ಇಗೋ ಈ ಪವಿತ್ರ ಭಸ್ಮವನ್ನು ಸ್ನಾನಮಾಡಿ ದಿನಾಲು ಧರಿಸಿಕೊಂಡು ಕಿಂಚಿತ್ ಸ್ವೀಕಾರಮಾಡಲುಹೇಳಿ ಕೊಟ್ಟರು. ಪರಮಭಕ್ತಿಯಿಂದ ಅದೇಪ್ರಕಾರ ಮಾಡಲಾಗಿ ಆ ದಿವಸವೇ ಸುಖವಾಗಿ ನಿದ್ರೆಮಾಡಿದರು. ಗ್ರಹ ಬಿಟ್ಟುಹೋಯಿತು. ಅತ್ಯಂತ ನಿಷ್ಠೆಯಿಂದ ಸೇವಾ ಮಾಡುತ್ತ ಒಂದು ತಿಂಗಳು ವರೆಗೂ ಇದ್ದು, ಮಹಾತ್ಮರೇ, ನಿಮ್ಮಿಂದ ಸುಖವಾಯಿತು; ಹರ ಮುನಿದರೂ ಗುರು ಕಾಯುವನೆಂಬುದು ಸಿದ್ಧವಾಯಿತು; ಇಂದಿಗೆ ನೀವೇ ಪರಶಿವನೆಂದು ಸ್ತುತಿಸಿದನು.

ಭಾ॥ ಷ॥ ಭಕ್ತಮನಸಾಭೀಷ್ಟದಾಯಕ । ಭಕ್ತವತ್ಸಲ ದೀನಬಾಂಧವ । ಭಕ್ತ
ಜನ ಸಂತಾಪನಾಶಕ ಪುಣ್ಯಫಲದಾತಾ ॥ ಭಕ್ತಲಾಲಿತ ನಿತ್ಯಸದ್ಗುರು ।
ಭಕ್ತಸೇವಿತ ಪಾದಪದ್ಮನು । ಮುಕ್ತಿದಾಯಕ ಸಲಹು ಶ್ರೀಗುರು ಸಿದ್ಧ
ಲಿಂಗೇಶಾ ॥ ೧ ॥

ಈ ಪ್ರಕಾರ ದಂಪತಿಗಳು ಕೊಂಡಾಡಿ ಫಲಾಶೀರ್ವಾದ ಪಡೆದು ಹೋದರು.

ಈ ರೀತಿ ನಿಜಾಂ ಪ್ರಾಂತದಲ್ಲಿರುವ ವೀರಶೈವರನ್ನು ದರ್ಶನ, ಆಶೀರ್ವಾದಗಳಿಂದ ಪುನೀತರನ್ನಾಗಿ ಮಾಡಿ, ತಮ್ಮ ದಿವ್ಯಜ್ಯೋತಿ ಪ್ರಭೆಯನ್ನೂ, ಅಜರಾಮರ

ವಾದ ಸತ್ಕೀರ್ತಿಯನ್ನೂ ನೆಲೆಗೊಳಿಸಿ, ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿದ ಮದ್ರಾಸ ಇಲಾಖಾ, ಬಳ್ಳಾರಿ ಜಿಲ್ಹೆಗೆ ಆಗಮಿಸಿದರು.

ಇವರು ಸಂಸ್ಥಾನ (ದರ್ಜಾಗ) ಮಠಕ್ಕೆ ಪುನಃ ಆಗಮಿಸುವದರೊಳಗಾಗಿ ಮಠದಲ್ಲಿದ್ದ ಮೊದಲಿನ ಸ್ವಾಮಿಗಳು ಮಾಡಿದ ೧೦-೧೨ ಸಾವಿರ ರೂಪಾಯಿ (ಸಾಲ) ರುಣಭಾರವು ಹೆಚ್ಚಾಗಿ ಸಂಸ್ಥಾನದ ಯಾವದಾಸ್ತಿಗಳು ಮಾರ್ವಾಡಿಯವರಿಂದಲೂ, ಸಾವಕಾರರಿಂದಲೂ ದಾವಾ ಮಾಡಲ್ಪಟ್ಟು, ಸ್ವಲ್ಪು ದಿವಸಗಳಲ್ಲಿಯೇ ಹರಾಜು (ಲಿಲಾವು) ಆಗುವ ಸಮಯ ಪ್ರಾಪ್ತವಾಗಿತ್ತು.

ಇಂತಹ ದುರ್ಧರ ಪ್ರಸಂಗ ಬಂದೊದಗಿರುವದನ್ನು ಈ ಮಹೋದಯರು ಬಂದು ನೋಡಿ ಮನದಲ್ಲಿ ನೊಂದು, ಭೋ ಮರುಳಸಿದ್ಧೇಶಾ, ಅಪಾರವಾದ ಸಂಪತ್ಸಮೃದ್ಧಿಯಿಂದ ತುಂಬಿ ತುಳುಕುತ್ತಿದ್ದ ಈ ನಿನ್ನ ಪೀಠಕ್ಕೆ ಎಂತಹ ವಿಪನ್ನಾವಸ್ಥೆಯು ಪ್ರಾಪ್ತವಾಯಿತಲ್ಲಾ! ಎಂದು ಮರುಗಿ, ಪುನಃ ಧೈರ್ಯ ತಾಳಿ, ಆಯಾ ವ್ಯಾಜ್ಯಗಳಿಗೆ ಸರಿಯಾಗಿ ಚತುರೋಪಾಯಗಳಿಂದ ಸಾಹಸಮಾಡುತ್ತಲೂ, ತಮ್ಮ ತಪೋಬಲದಿಂದಲೂ ಭೂರಿ ರುಣಭಾರವನ್ನು ಪರಿಹರಿಸಿ, ಮಹಾಸಂಸ್ಥಾನದ ಆಸ್ತಿಗಳನ್ನು ಉಳಿಸಿದರು. ಕೆಲವು ವ್ಯಾಜ್ಯಗಳನ್ನು ಮದ್ರಾಸ ಹೈಕೋರ್ಟನವರೆಗೂ ನಡೆಯಿಸಿದರು.

ಇಷ್ಟೆಲ್ಲಾ ಕೆಲಸಗಳನ್ನು ಪೂರೈಸುವದರೊಳಗೆ ವಿಶೇಷ ಧನವ್ಯಯವಾಯಿತು. ಸಂಸ್ಥಾನದ ಸಿಬ್ಬಂದಿ ಖರ್ಚು-ವೆಚ್ಚಗಳು ಹೆಚ್ಚಾದವು. ಮತ್ತು ಮುಂದೆ ವ್ಯಾಜ್ಯಕ್ಕೆ ಹಣ ಬೇಕಾಯಿತು. ಇದನ್ನೆಲ್ಲ ತಿಳಿದು ನೋಡಿ, ಇನ್ನು ಮಠದಲ್ಲಿ ಸುಮ್ಮನೆ ಕೂಡ್ರಲಾಗದೆಂದು ಪುನಃ ಸಿಬ್ಬಂದಿಯೊಡನೆ ಸರಕೀಟು ಹೊರಟು, ಹರಪನಹಳ್ಳಿ ತಾಲೂಕಿನಲ್ಲಿ ಕೆಲವು ಗ್ರಾಮ ಮುಕ್ಕಾಂ ಮಾಡಿ ಬಳಿಕ ಹೂವಿನ-ಹಡಗಲಿ ತಾಲೂಕ ಸೋಗೀ ಗ್ರಾಮಕ್ಕೆ ದಯಮಾಡಿಸಿದರು. (೧೯೧೪).

ಇಲ್ಲಿ ಶ್ರೀ ವೀರಭದ್ರದೇವರ ಪ್ರಭಾವವು ಬಹಳ ಪ್ರಶಂಶನೀಯವಾಗಿದೆ. ದೇವಾಲಯವು ಭವ್ಯವಾಗಿರುವದರಿಂದ ಈ ಸ್ಥಾನದಲ್ಲಿಯೇ ಜಗದ್ಗುರುಗಳವರ ಮುಕ್ಕಾಂ ಮೇಲಿಂದಮೇಲೆ ಆಗುತ್ತದೆ. ಈ ಗ್ರಾಮದಲ್ಲಿ ಮಹಾಸವಾರಿ ಇರುವದನ್ನು ತಿಳಿದು, ಅನೇಕಜನ ಸದ್ಭಕ್ತರು ದರ್ಶನಾಪೇಕ್ಷಿಗಳಾಗಿ ಬರುತ್ತಿರಲು, ಭಕ್ತಪ್ರೇಮಿಗಳಾದ ಈ ಮಹಾತ್ಮರು ನೆರೆದ ಸಭಿಕರಿಗೆ 'ಶಿವಭಕ್ತಿ' ಎಂಬ ವಿಷಯ ಅಪ್ಪಣೆಕೊಡಿಸಿದರು.—

ಶಿವ (ಇಷ್ಟಲಿಂಗ) ಪೂಜಾ, ಶಿವಧ್ಯಾನ, ಶಿವಸ್ತೋತ್ರ, ಶಿವಭಜನೆ ಇತ್ಯಾದಿಗಳಲ್ಲಿ ಅತ್ಯಾದರ ಬುದ್ಧಿಯಿಂದ ನಡೆಯಿಸುವದೂ, ಶಿವೋತ್ಸವ ನೋಡಬೇಕೆಂಬಾಪೇಕ್ಷೆ, ಶಿವೋತ್ಸವಾದಿಗಳಿಗೆ ಬರತಕ್ಕ ಮಹಾಶಯರಿಗೆ ಅನ್ನೋದಕಗಳನ್ನೀಯುವದು; ಶಿವಕಥೆಗಳನ್ನು ಕೇಳುವಾಗ್ಗೆ ಮನಶ್ಚಂಚಲವಾಗದೆಯಿರುವಿಕೆ, ಶಿವನಿಗಾಗಿ

ಪೂದೋಟ, ಕೆರೆ, ಭಾವಿ, ಕೊಳ ಮೊದಲಾದವುಗಳನ್ನು ಕಟ್ಟಿಸುವದು, ಶಿವಾಲಯಕ್ಕೆ ಪೌಳಿ, ಗೋಪುರಾದಿಗಳನ್ನು ನಿರ್ಮಿಸುವದು, ಶಿವಭಕ್ತರಿಗಾಗಿ ಬೇಕಾಗುವ ಸಾಹಿತ್ಯಗಳನ್ನೊದಗಿಸಿಕೊಡುವದು, ಶಿವಾರಾಧನೆ ಎಂಬ ಬುದ್ಧಿಯಿಂದ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ನಡೆಯಿಸುವದು, ಶಿವವಿದ್ಯಾ ಪುಸ್ತಕಗಳನ್ನು ಬರೆಯುವದೂ ಬರೆಯಿಸಿಕೊಡುವದೂ, ಶಿವಶಾಸ್ತ್ರಗ್ರಂಥಗಳನ್ನೋದುವದೂ, ಶಿವಜ್ಞಾನಸಂಪನ್ನರಾದವರಿಗೆ ಮಠ, ಮಂದಿರಗಳನ್ನು ಕಟ್ಟಿಸಿಕೊಟ್ಟು ಅನ್ನಪಾನಾದಿಗಳಿಗನುಕೂಲತೆ ಮಾಡಿಕೊಡುವದೂ, ಶಿವಮಂತ್ರ ಜಪಿಸುವ ಮಹಾಪುರುಷರ ಶೇವಾ, ಶುಶ್ರೂಷೆ ಮಾಡುವದೂ, ಶಿವಕ್ಷೇತ್ರ, ಯಾತ್ರೆಗಳನ್ನು ಮಾಡುವವರಿಗೆ ಆದರಾತಿಥ್ಯಗಳನ್ನು ಮಾಡಿ ಸಂತೈಸುವದೂ ಮತ್ತು ಅಂತಹ ಸಜ್ಜನರಿಗೆ ಏನಾದರೂ ತೊಂದರೆಗಳಾಗುತ್ತಿದ್ದರೆ ನಿವಾರಿಸುವದೂ, ಗುರು-ದೇವತಾ-ಜಂಗಮ ದ್ರವ್ಯಾದಿಗಳನ್ನಪಹರಿಸುವವರಿಗೆ ತಕ್ಕ ಪ್ರಾಯಶ್ಚಿತ್ತಮಾಡುವದೂ, ಹಸಿವೆ-ತೃಷೆಗಳಿಂದಲೂ, ರೋಗಾದ್ಯುಪದ್ರವಗಳಿಂದಲೂ ಬಳಲುವವರಿಗೆ ತನ್ನ ಶಕ್ತ್ಯಾನುಸಾರ ಸಹಾಯಮಾಡುವದೂ, ಸರ್ವ ಪ್ರಾಣಿಗಳಲ್ಲಿ ದಯೆಯಿಡುವದೂ, ಸರ್ವರಿಗೂ ಹಿತವಾಗುವ ಕಾರ್ಯಕ್ಕೆ ಸಹಾಯ ಮಾಡುವದೂ, ಗುರು-ದೇವತಾ, ಮಾತಾ-ಪಿತೃಗಳಲ್ಲಿ ಶುದ್ಧವಾದ ಭಕ್ತಿಯಿಂದ ವರ್ತಿಸುವದೂ, ಭಸಿತ-ರುದ್ರಾಕ್ಷ-ಮಂತ್ರಾದಿ ಅಷ್ಟಾವರಣಗಳಲ್ಲಿ ಶ್ರದ್ಧೆಯುಳ್ಳವರಾಗಿರುವದೂ, ವೇದಾಗಮ, ಪುರಾಣಾದಿಗಳಲ್ಲಿ ನಂಬಿಕೆ ಇಡುವದೂ ಇತ್ಯಾದಿ ವಿಷಯಗಳೆಲ್ಲಾ ಶಿವಭಕ್ತಿ ಎಂದು ಪ್ರಖ್ಯಾತವಾಗಿರುವವು.

## ಉಭಯ ಜಗದ್ಗುರುಗಳವರನ್ನು ರಾಜೀಮಾಡುವ ಪ್ರಯತ್ನ

ತರುವಾಯ ಮಹಾಸನ್ನಿಧಿಗೆ ಪ್ರೀತಿಸ್ಥಾನವಾದ ಹಿರೇಹಡಗಲಿ ಗ್ರಾಮಕ್ಕೆ ದಯಮಾಡಿಸಲಾಗಿ ಪುರಪ್ರಮುಖರಾದ ಮಾ। ಪುರವರ್ಗಮಠದ ಶ್ರೀ ಪಟ್ಟದ ಮಳೇಸ್ವಾಮಿಗಳೂ, ಗುರುಪಾದದೇವರಮಠದ ಶ್ರೀ ಹಾಲಸ್ವಾಮಿಗಳೂ, ಪುರಾಣಿಕಮಠದ ವೇ॥ ಗುರುಶಾಂತಾರ್ಯರೂ, ಮಾನಿಹಳ್ಳಿ ಮಠದ ದೊಡ್ಡವೀರಗೌಡರು, ಶಬ್ದಮಣಿ ಮಠದ ಚೆನ್ನಯ್ಯನವರು, ಮಾನಿಹಳ್ಳಿ ಮಠದ ಸದಾಶಿವಗೌಡರು, ಮ. ರಾ. ಪಟ್ಟೇದ ಮಹಾಂತಪ್ಪ, ಹರಪನಹಳ್ಳಿ ಕೊಟ್ರೂರಪ್ಪ, ಕರ್ಜಗಿ ಶಿವಪ್ಪ, ಆಲೂರು ಆಣಿ ವೀರಪ್ಪ, ಹಮ್ಮಿಗಿ ಸಣ್ಣಪ್ಪ, ಜ್ಯೋತಿ ಕುರುವತ್ತೆಪ್ಪ, ಬಾಗಳಿ ಬಸಲಿಂಗಪ್ಪ ಮುಂತಾದ ಮಂಡಲಿಯು ಸೇರಿ ತಾ. ೬-೩-೧೯೧೫ನೇ ದಿವಸ ಮಹೋತ್ಸವದೊಡನೆ ಕರೆತಂದು ಕರ್ಜಗಿ ಸಂಗಪ್ಪನವರ ಭವ್ಯವಾದ ಮಂದಿರದೊಳು ಅಲಂಕರಿಸಲ್ಪಟ್ಟ ಭದ್ರಾಸನದಲ್ಲಿ ಮೂರ್ತಗೊಳಿಸಿದರು.

ಬಳಿಕ ಪದ್ಧತಿ ಪ್ರಕಾರ ಸನ್ನಿಧಿಗೆ ಕಾಣಿಕಾದಿಗಳ ಸಮರ್ಪಣೆ, ಧರ್ಮಶ್ರವಣ ಮುಂತಾದ ಕಾರ್ಯಕ್ರಮಗಳು ಜರಗುತ್ತಿದ್ದವು. ಮತ್ತು ಸಾಯಂಕಾಲದಲ್ಲಿ ಹೊನ್ನ

ತ್ತಿಮಠದ ( ತುಂಬಿನಕೆರಿ ) ವೇ|| ವೀರಪ್ಪಯ್ಯ ಶಾಸ್ತ್ರಿಗಳವರಿಂದ ಪುರಾಣ-ಪ್ರವಚನ ನಡೆದನಂತರ ಜಗದ್ಗುರುಗಳವರು ಧರ್ಮೋಪದೇಶಮಾಡಿ ಆನಂದಪಡಿಸುತ್ತಿದ್ದರು.

ಈ ಮಹಾತ್ಮರು ಸನ್ನಿಧಿಗೆ ಬಂದಿರುವ ಪರಸ್ಥಲದ ಗುರುಭಕ್ತಾವಳಿಗೆ ಅನ್ನ ತೃಪ್ತಿ ಮಾಡಿಸಿ ಬಡವರು-ಬಲ್ಲಿದರೆಲ್ಲರನ್ನೂ ಬಹು ಪ್ರೇಮದಿಂದ ಆದರಿಸುತ್ತಿದ್ದರು. "ಸರ್ವೇಷಾಮೇವದಾನಾನಾಂ । ಅನ್ನದಾನಂ ಪರಂ ಸ್ಮೃತಂ ॥" ಎಂಬಂತೆ ಅನ್ನ ಸಂತರ್ಪಣೆಯ ಬಗ್ಗೆ ಸಂಸ್ಥಾನದಲ್ಲಿ ಯೋಗ್ಯ ವ್ಯವಸ್ಥೆ ಮಾಡಿದ್ದು, ಬಂದ ಭಕ್ತರ ಕುಶಲಾದಿ ವಿಚಾರಿಸಿ ಒಳಗೆ ಹೋಗಿರಿ, ಮೊದಲು ಗುರುಪ್ರಸಾದ ಸ್ವೀಕಾರಮಾಡಿ ರೆಂದು ಅಪ್ಪಣೆಮಾಡುತ್ತಿದ್ದರು.

ಈಪ್ರಕಾರ ನಡೆದಿರಲು ಇದೇ ಪೀಠದ ಯಜಮಾನರಾದ ಶ್ರೀ ಮರುಳಸಿದ್ಧ ಸ್ವಾಮಿಗಳವರು ಇವರ ಮೇಲಿನ ವೈಷಮ್ಯದಿಂದ ತಾವೂ ಹೊರಟು ಏಕಕಾಲಕ್ಕೆ ಇಲ್ಲಿಗೆ ( ಹಿರೇಹಡಗಲಿಗೆ ) ದಯಮಾಡಿಸಿದರು. ಆದರೆ ಒಬ್ಬರ ಮೇಲೊಬ್ಬರು ಬರುವದು ಯೋಗ್ಯವಲ್ಲವೆಂದು ತಿಳಿದಿದ್ದರೂ ಬಂದಿಳಿದರು. "ಗುರುದ್ವಯಂ ಶಿಷ್ಯ ನಿಪಾತ ಹೇತುಃ" ಎಂಬಂತೆ ಶಿಷ್ಯಮಂಡಳಿಗೆ ಬಹು ತೊಂದರೆಯಾಯಿತು.

ಊರಲ್ಲಿ ಕೆಲವು ಜನರು ಆಕಡೆಗೆ ಸೇರಿ ಗಲಭೆ ನಡೆಯಲಾರಂಭಿಸಿತು. ಆಗ ಈ ಗುರುಪುಂಗವರು ಚಿಂತಿಸಿ, ಏನಿದು? ನಮ್ಮ ಯಜಮಾನರಾದ ಶ್ರೀಗಳು ಏಕ ಕಾಲಕ್ಕೆ ಇಲ್ಲಿಗೆ ಆಗಮಿಸಿ, ಇಲ್ಲಿ ವಿರೋಧ ಬೆಳೆಸುವರಲ್ಲಾ! ಇದು ಸರಿಯಾದುದೇ? ಇರಲಿ, ನಾವೇ ಅಲ್ಲಿಗೆ ಹೋಗಿ ಹೇಳಿಕೊಳ್ಳೋಣವೆಂದು ಕೆಲವು ಪ್ರಮುಖರೊಡ ಗೂಡಿ ಅವರಿದ್ದ ಕಲ್ಲುಮಠಕ್ಕೆ ದಯಮಾಡಿಸಿ, ವಂದಿಸಿ ನಮ್ರಭಾವದಿಂದ- ಮಹಾ ಗುರುವೇ, ಇದೇನು ತಾವು ಹೀಗೆ ಅವಸರದಿಂದಿಲ್ಲಿಗೆ ಆಗಮಿಸಬಹುದೇ? ಬಂದರೂ ಕೂಡ ಗಲಭೆ ಎಬ್ಬಿಸುವದುಚಿತವೇ? ಹೀಗೇಕೆ ಮಾಡಬೇಕು? ತಾವೇ ಇಲ್ಲಿ ಮುಕ್ಕಾಂ ಮಾಡಿರಿ, ನಾನು ಬೇರೆಕಡೆಗೆ ತೆರಳುವೆನು ಹೀಗೆಂದು ವಿನಯ, ಶಾಂತಿ ಯಿಂದ ಹೇಳಿಕೊಂಡರು. ಇವರ ಮಾತುಗಳಿಗೆ ಲಕ್ಷ್ಯಕೊಡದೆ ಶ್ರೀ ಮರುಳಸಿದ್ಧ ಸ್ವಾಮಿಗಳು ಸುಮ್ಮನೆ ಅಸಮಂಜಸವಾದ ಮಾತುಗಳಾಡುತ್ತ ಕೋಪವನ್ನು ತೋರಿಸಿ ಎದ್ದು ಒಳಗೆ ಹೋದರು. ಒಂದು ಗಂಟೆಯಾದರೂ ಪುನಃ ಹೊರಗೆ ಬರಲಿಲ್ಲ. ತರುವಾಯ ಈ ಮಹಾನುಭಾವರು ಹಿಂದಿರುಗಿ ಸ್ವಸ್ಥಾನಕ್ಕೆ ಆಗಮಿಸಿದರು.

ಈ ಉಭಯ ಜಗದ್ಗುರುಗಳವರ ಮನಸ್ತಾಪವಾಗಿರುವದನ್ನೂ, ಪರಸ್ಪರ ವ್ಯಾಜ್ಯಗಳು ನಡೆದಿರುವದನ್ನೂ ಕೇಳಿದ ಭಕ್ತರು ಹೇಗಾದರೂ ಇವರನ್ನು ರಾಜೀ ಮಾಡಿಸಿ ಶಾಂತರನ್ನಾಗಿ ಮಾಡಬೇಕೆಂದು ಆಲೋಚಿಸಿದರು.

ತರುವಾಯ ಗುರುಪೀಠಾಭಿಮಾನಿಗಳಾದ ಮ. ರಾ. ರಾ. ಹೊಳಗುಂದಿ ಯಜ ಮಾನ ಸಿದ್ಧಲಿಂಗಪ್ಪನವರೂ, ಹಿರೆಕೊಳಚಿ ಹತ್ತಿ ಮಹಾಂತಪ್ಪನವರೂ, ಹೂವಿನ-ಹಡಗಲಿ ಕೋರಿ ಗುರುಶಾಂತಪ್ಪನವರೂ, ಹೊಳಲು ಜೋತಿ ಚನ್ನಬಸಪ್ಪನವರೂ,

ಉತ್ತಂಗಿ ಶಾನಭೋಗ ಶಿವನಾಗಪ್ಪನವರೂ, ಹರಪನಹಳ್ಳಿ ಪಾಟೀಲ ಬೆಟ್ಟನಗೌಡರೂ ಮುಂತಾದ ಸ್ಥಲ-ಪರಸ್ಥಲದ ಪ್ರಮುಖ ಜನರು ಸಮ್ಮಿಳಿತರಾಗಿ ಉಭಯ ಶ್ರೀಗಳವರನ್ನು ರಾಜಿಮಾಡಿಸಬೇಕೆಂದು ನಾನಾರೀತಿಯಿಂದ ಪ್ರಯತ್ನಮಾಡಿದರೂ ಹಿರಿಯ ಶ್ರೀಗಳು ಒಪ್ಪದೆಹೋದರು. ಇದರಿಂದ ನೆರೆದ ಜನರಿಗೆ ತುಂಬಾ ವೆಥೆಯೂ, ಕೋಪವೂ ಉತ್ಪನ್ನವಾದವು. ಹಾಗು ಅವರ ವರ್ತನಕ್ಕೆ ತಿರಸ್ಕಾರಬುದ್ಧಿಯೂ ಹುಟ್ಟಿತು. ಮಾರನೆದಿಸವೇ ಹಿರಿಯ ಶ್ರೀಗಳು ಸ್ವತಂತ್ರರಾಗಿ ಪ್ರಯಾಣಮಾಡಿಬಿಟ್ಟರು.

ತಾ. ೨೯-೪-೧೯೧೫ ನೇ ದಿವಸ ಅನೇಕ ಜನರು ಕೂಡಿ ಸಭೆ ಮಾಡಿ ಆಲೋಚನೆ ನಡಿಸಿ, ಚಿಕ್ಕವರಾದ ಶ್ರೀ ಜ|| ಸಿದ್ಧಲಿಂಗ ಮಹಾಸ್ವಾಮಿಗಳವರ ಶಾಂತತೆ, ತಪೋನುಷ್ಠಾನ, ದೀರ್ಘಾಲೋಚನೆ, ಸಮಾಜ ಸುಧಾರಣೋತ್ಸುಕತೆ, ಭಕ್ತಪ್ರೇಮ, ಸಹನಶೀಲತೆ ಮೊದಲಾದ ಉದಾತ್ತ ಸದ್ಗುಣಗಳನ್ನು ನೋಡಿ ಕೊಂಡಾಡಿ, ತರುವಾಯ ಕೆಲವು ತೀರ್ಮಾನುಗಳನ್ನು ಮಾಡಿದರು. ಹಾಗೂ ಆ ಮೀಟಿಂಗಿನ ರಿಪೋರ್ಟನ್ನು ಮುದ್ರಿಸಿ ಪ್ರಸಿದ್ಧಮಾಡಿದರು.

ಆಗ ಊರಲ್ಲಿ ಎರಡು ಪಾರ್ಟಿಗಳಾದುದರಿಂದ ಈ ಮಹಾತ್ಮರು ಸರ್ವರನ್ನೂ ಸನ್ನಿಧಿಗೆ ಕರೆಯಿಸಿ, ಅನೇಕ ರೀತಿಯಿಂದ ಹಿತೋಪದೇಶ ಮಾಡಿ ಭಕ್ತರೇ, ಹೀಗೆ ಪರಸ್ಪರ ವಿರೋಧವಾಗಿರುವದು ಯುಕ್ತವಲ್ಲ. ಐಕ್ಯಮತ್ಯದಿಂದ ಅನಂತರೀತಿ ಸುಖವುಂಟು. ಎಂಬುದಕ್ಕೆ ದೃಷ್ಟಾಂತವನ್ನು ಹೇಳಲು, ಸರ್ವರೂ ಕೇಳಿ ಸಂತೋಷಚಿತ್ತರಾಗಿ ಒಪ್ಪಿ ಏಕೀಕರಣವಾದರು.

ಮಹಾಶ್ರೀಗಳು ತಂಮ ಆಜ್ಞಾ ಪ್ರಕಾರ ರಾಜಿಯಾದುದಕ್ಕೆ ಆನಂದಪಟ್ಟು ಪ್ರಿಯಶಿಷ್ಯರೇ, ನಾವು ಒಂದು ಗಣಾರಾಧನೆ ಮಾಡಿಸಿ, ನಿಂಮೆಲ್ಲರನ್ನು ತೃಪ್ತಿಪಡಿಸಬೇಕೆಂಬಾಶೆಯಿದೆ. ಸಕಲ ಸಾಹಿತ್ಯ ಸಿದ್ಧತೆ ಮಾಡಿರೆಂದು ಹೇಳಲು, ಆ ಪ್ರಕಾರ ಸರ್ವರೂ ಭಕ್ತಿಯಿಂದ ಶಾಕ-ಪಾಕಾದಿಗಳನ್ನು ತಯಾರಮಾಡಿದರು. ಭಕ್ತ-ಮಾಹೇಶ್ವರಾದಿ ಸರ್ವರಿಗೂ ಆಮಂತ್ರಣ ಕೊಡಿಸಿ, ಉದಯ ೧೦ ಗಂಟೆಯಿಂದ ಸಾಯಂ-ಕಾಲದವರೆಗೂ ಭೂರಿ ಅನ್ನಸಂತರ್ಪಣೆ ನಡೆಯಿತು. ಈ ಜಗದ್ಗುರುಗಳು ಪ್ರತಿಯೊಬ್ಬ ಜಂಗಮರಿಗೆ ಎರಡು ಆಣೆ ದಕ್ಷಿಣೆ, ತಾಂಬೂಲಾದಿಗಳನ್ನು ಸ್ವತಃ ತಾವೇ ಕೊಡುತ್ತ, ಗರ್ಭಿಣಿಸ್ತ್ರೀಯರಿಗೆ ನಾಲ್ಕುಆಣೆಯಂತೆ ಕೊಟ್ಟು, ಸಮಾರಾಧನೆಯನ್ನು ಪೂರೈಸಿ ಸತ್ಕೀರ್ತಿಪಡೆದರು.

ಆನಂತರ ಮಹಾಸನ್ನಿಧಿಗೆ ಕೇವಲ ಪ್ರೀತ್ಯಾಸ್ಪದರಾದ ಮಾನಿಹಳ್ಳಿಮಠದ ದೊಡ್ಡವೀರನಗೌಡರು ಬಿನ್ನಹಮಾಡಿ, ತಮ್ಮ ಮಂದಿರಕ್ಕೆ ದಯಮಾಡಿಸಿಕೊಂಡು ಭಕ್ತಿಯಿಂದ ಸೇವಾಸತ್ಕಾರಗಳನ್ನು ಸಲ್ಲಿಸಿ ಆನಂದಪಡಿಸಿದರು.

## ಮೂನಿಹಳ್ಳಿ ಪುರವರ್ಗ ಮಠಕ್ಕೆ ಆಗಮನ

ಹಿರೇಹಡಗಲಿಗೆ ಹೊಂದಿರುವ ಮಾನಿಹಳ್ಳಿ ಎಂಬ ಚಿಕ್ಕ ಗ್ರಾಮದಲ್ಲಿ ಅನೇಕ ಶಿಷ್ಯಮಂಡಳಿಯಿಂದಲೂ, ಪುತ್ರವರ್ಗದವರಿಂದಲೂ ಕೂಡಿಕೊಂಡಿರುವ ಪುರವರ್ಗ ಮಠದ ಪಟ್ಟಾಧ್ಯಕ್ಷ ಶ್ರೀ ಮಳೇಸ್ವಾಮಿಗಳವರು ಈ ಉಜ್ಜಯಿನೀ ಜಗದ್ಗುರು ಶಾಖಾನುವರ್ತಿಗಳಾಗಿದ್ದು, ಪ್ರಾಚೀನಕಾಲದಿಂದಲೂ ನಡೆದು ಬಂದಿರುವ ಪದ್ಧತಿಯಂತೆ ಮಹಾಶ್ರೀಗಳವರನ್ನು ಹಿರೇಹಡಗಲಿಯಿಂದ ಮಹೋತ್ಸವದೊಡನೆ ಬಿಜಯಂಗೈಸಿಕೊಂಡು ತಮ್ಮ ಭವ್ಯವಾದ ಮಠದಲ್ಲಿ ಮೂರ್ತಗೊಳಿಸಿದರು. ಈ ಸಮಾರಂಭಕ್ಕೆ ತಮ್ಮ ಪುತ್ರವರ್ಗದವರಾದ ತುಂಬಿನಕೇರಿ, ಮಾನಿಹಳ್ಳಿ, ಶಿವಲಿಂಗನಹಳ್ಳಿ, ಹಿರೇಹಡಗಲಿ, ಬೂದನೂರು, ಜಾಲವಾಡಿಗಿ ಗ್ರಾಮಗಳ ಮಾಹೇಶ್ವರರೂ, ಬಂಧುಗಳಾದ ಪುರಾಣಿಕಮಠದ ವೇ॥ ಚೆನ್ನವೀರಯ್ಯನವರೂ, ಪರಮೇಶ್ವರಯ್ಯನವರೂ ಮುಂತಾದವರೆಲ್ಲಾ ಸೇರಿ, ಮಹಾಪಾದ ಪೂಜಾಸಮಾರಂಭ, ಭೂರಿ ಗಣಾರಾಧನೆಯನ್ನು ನಡೆಯಿಸಿದರು; ಹಾಗೂ ಜಗದ್ಗುರುಗಳವರಿಂದ ಮಳೆ ಸ್ವಾಮಿಗಳವರು ಬ್ರಹ್ಮೋಪದೇಶ (ಅನುಗ್ರಹ) ವನ್ನು ಪಡೆದು ಗುರುಕಾಣಿಕಾದಿಗಳನ್ನು ಅರ್ಪಿಸಿ, ಫಲಾಶೀರ್ವಾದ ಹೊಂದಿ ಕೃತಾರ್ಥರಾದರು.

ತರುವಾಯ ಹೊಳಲು, ಮೈಲಾರ, ಕುರವತ್ತಿ ಗ್ರಾಮಗಳಿಗೆ ದಯಮಾಡಿಸಿ, ಅಲ್ಲಿಯ ಸದ್ಭಕ್ತರ ಸೇವೆಯಂ ಕೈಕೊಂಡು ಹಿಂತಿರುಗಿ ಹಂಪಸಾಗರಕ್ಕೆ ಆಗಮನವಾಯಿತು.

## ವಿದ್ಯಾಫಂಡಿನ ಸಲುವಾಗಿ ಮೀಟಿಂಗು

ಹುವ್ವಿನಹಡಗಲಿ ತಾಲೂಕು ಹಂಪಸಾಗರ ಗ್ರಾಮಕ್ಕೆ ತಾ. ೧೦-೨-೧೯೧೬ ದಿವಸ ಮುಕ್ಕಾಂ ಮಾಡಿ ಸಂಸ್ಥಾನ ಪದ್ಧತಿ ಪ್ರಕಾರ ಕಾಣಿಕಾದಿಗಳನ್ನು ವಸೂಲ ಮಾಡುತ್ತಿದ್ದರು. ತಮ್ಮ ದರ್ಬಾರ ಕಾರ್ಯಗಳಲ್ಲಿ ತೊಡಗಿದ್ದರೂ ವೀರಶೈವ ಸಮಾಜ ಸುಧಾರಣೆಯ ಸಲುವಾಗಿ ಮನದಲ್ಲಿ ಹಗಲಿರುಳೂ ಯೋಚನೆಮಾಡಿ ಪ್ರಥಮದಲ್ಲಿ ಪ್ರತಿಯೊಂದು ಗ್ರಾಮದಲ್ಲಿರುವ ಗುರುವರ್ಗ ಮಠಾಧಿಕಾರಿಗಳ ಬಾಲಕರು ವೈದಿಕ ವಿದ್ಯಾವಂತರಾಗುವದು ಮುಖ್ಯವಾಗಿದೆ; ಮತ್ತು ವೀರಶೈವ ಸಮಾಜದಲ್ಲಿ ನಿತ್ಯ-ನೈಮಿತ್ತಿಕ ಕಾರ್ಯಗಳನ್ನು ಸಕ್ರಮವಾಗಿ ಜರುಗಿಸಲಿಕ್ಕೆ ಅನುಭವವಾಗಬೇಕಾದರೆ ದೇಶಮಧ್ಯ ಅಲ್ಲಲ್ಲಿ ವೈದಿಕವಿದ್ಯಾ (ಗುರುವರ್ಗ ಸುಧಾರಣ) ಪಾಠಶಾಲೆಗಳನ್ನು ಸ್ಥಾಪಿಸಬೇಕೆಂದಾಲೋಚಿಸಿದರು.

"ಸ್ವಾರ್ಥೋ ಯಸ್ಯ ಪರಾರ್ಥ ಏವ ಸಪುಮಾನ್ ಏಕಃ ಸತಾಮಗ್ರಣೀಃ ॥" ಅಂದರೆ ಪರಹಿತವೇ ತನ್ನ ಹಿತವೆಂದು ತಿಳಿದಾಚರಿಸುವ ಮಹಾಪುರುಷರೇ ಸಜ್ಜನರಲ್ಲಿ ಶ್ರೇಷ್ಠರು; ಎಂಬುಕ್ತಿಯಂತೆ ವಿದ್ಯಾಭಿವೃದ್ಧಿಯ ಬಗ್ಗೆ ಫಂಡು ಕೂಡಿಸಲಿಕ್ಕೆ ಮೊದಲು ಆಲೋಚನಾ ಸಭೆಯನ್ನು ಕರೆಯಲು ನಿರ್ಧರಿಸಿ ಆ ಪ್ರಾಂತದ ಮುಖಂಡ

ಜನರಿಗೆಲ್ಲಾ ಸೂಚನಾ ಪತ್ರಿಕೆಗಳನ್ನು ಕಳಿಸಿದರು. ಆಪ್ರಕಾರ ಅನೇಕಜನ ಪ್ರಮುಖರು ಶ್ರೀ ಜಗದ್ಗುರುಗಳವರ ಸನ್ನಿಧಿಯಲ್ಲಿ ತಾ. ೧೪-೨-೧೯೧೬ನೇ ದಿವಸ ಸಮ್ಮಿಳಿತರಾದರು.

ಮಹಾಸಂಸ್ಥಾನದ ಸರ್ವಾಧಿಕಾರಿಗಳಾದ ಚೋರನೂರು ಪಟ್ಟದ ಶ್ರೀಗಳವರು ಈ ದಿವಸ ಸಭೆಗೆ ಬಳ್ಳಾರಿಯ ಶ್ರೀಮಂತ ಗಡಿಗೆ ವೀರಭದ್ರಪ್ಪನವರು ಅಧ್ಯಕ್ಷಸ್ಥಾನವನ್ನಲಂಕರಿಸಬೇಕೆಂದು ಸೂಚನಾ ತಂದದ್ದಕ್ಕೆ ಸರ್ವರೂ ಒಪ್ಪಿಗೆ ಕೊಟ್ಟರು. ತರುವಾಯ ಭಾಷಣಗಳು ನಡೆದವು. ಬಳಿಕ ಸರ್ವಾನುಮತದಿಂದ ಕೆಳಗೆ ಬರೆದ ಠರಾವುಗಳು ಪಾಸಾದವು.

೧ ಪ್ರತಿಯೊಬ್ಬ ಗೃಹಸ್ಥನು ವರುಷವಂದಕ್ಕೆ ರೂ. ೨-೦-೦ ಪ್ರಕಾರ ಹತ್ತು ವರುಷಗಳ ಹಣವನ್ನು ಒಮ್ಮೆಗೆ ಕೊಡತಕ್ಕದ್ದು. ಅಥವಾ ಪ್ರತಿ ವರುಷ ಕೊಡಬೇಕು.

೨ ವೀರಶೈವರು ಲಗ್ನದಲ್ಲಿ ವರನ ಕಡೆಯಿಂದ ರೂ. ೨-೦-೦ ಮತ್ತು ವಧುವಿನ ಕಡೆಯಿಂದ ರೂ. ೧-೦-೦ ಪ್ರಕಾರ ಫಂಡಿಗೆ ಕೊಡತಕ್ಕದ್ದು.

೩ ಶಿವದೀಕ್ಷಾ (ಉಪನಯನ) ಸಂಸ್ಕಾರ ಹೊಂದತಕ್ಕ ವಟುವಿನ ಕಡೆಯಿಂದ ರೂ. ೧-೦-೦ ತೆಗೆಯಿಸತಕ್ಕದ್ದು.

೪ ಪ್ರತಿಯೊಬ್ಬ ವೀರಶೈವನು ಶಿಶುವು ಜನನವಾದರೆ ಲಿಂಗಧಾರಣ ಕಾಲಕ್ಕೆ ಗಂಡುಕೂಸಿಗೆ ೮ ಆಣೆ, ಹೆಣ್ಣುಕೂಸಿಗೆ ೪ ಆಣೆ ಈ ಪ್ರಕಾರ ಕೊಡತಕ್ಕದ್ದು.

೫ ಈವಳಗಾಗಿ ಶ್ರೀ ಜ. ಸಿದ್ಧಲಿಂಗರಾಜ ದೇಶಿಕೇಂದ್ರ ಮಹಾಸ್ವಾಮಿಗಳವರ ಸನ್ನಿಧಿಯಿಂದ ಸ್ಥಾಪಿಸಲ್ಪಟ್ಟ ಹೊಳಗುಂದಿ ಸಂಸ್ಕೃತ-ವೈದಿಕ ಪಾಠಶಾಲೆಯನ್ನು ಈ ಕಮಿಟಿಯಲ್ಲಿ ಸರ್ವಾನುಮತದಿಂದ ಈ ಫಂಡಿನ ಖರ್ಚಿನಿಂದಲೇ ಜರಗುವಂತೆ ಪಾಸುಮಾಡಲ್ಪಟ್ಟಿತು.

ಮತ್ತು ವೈದಿಕವಿದ್ಯಾ ಪ್ರಸಾರಣೆಗಾಗಿ ಮತಗ್ರಂಥಗಳನ್ನು ಸಂಗ್ರಹಿಸಿ ಅವುಗಳಲ್ಲಿರುವ ಮುಖ್ಯ ಸಾರವನ್ನು ತೆಗೆದು ಪ್ರಚುರಮಾಡಿಸುವ ಬಗ್ಗೆ ಒಂದು ಮತಗ್ರಂಥದ ಪರಿಶೋಧನಾಲಯವನ್ನು ಸ್ಥಾಪಿಸತಕ್ಕದ್ದು.

ಇತ್ಯಾದಿ ಇನ್ನೂ ಕೆಲಕೆಲವು ಉಪಯುಕ್ತವಾದ ವಿಷಯಗಳು ಸಭೆಯಲ್ಲಿ ವಿಮರ್ಶೆಮಾಡಲ್ಪಟ್ಟು, ಸಭಾ ಮುಕ್ತಾಯವಾಯಿತು. ( ಈ ಸಭಾ ರಿಪೋರ್ಟು ಮುದ್ರಿಸಿ ಹಂಚಲ್ಪಟ್ಟವು. )

## ಬಳ್ಳಾರಿಯಲ್ಲಿ ವಿದ್ಯಾವರ್ಧಕ ಸಂಘ ಸ್ಥಾಪಸನೆ

ಈ ಮೊದಲು ೧೯೨೯ ನೇ ಇಸ್ವಿ ಡಿಶಂಬರ ತಿಂಗಳ ಬಳ್ಳಾರಿಪಟ್ಟಣದಲ್ಲಿ ೫ ನೇ ಅ। ಭಾರತೀಯ ವೀರಶೈವ ಮಹಾಸಭೆಯು ನಡೆದು, ವೀರಶೈವಸಮಾಜ ಸುಧಾರಣೆಯಾಗಲು ವಿದ್ಯಾಭಿವೃದ್ಧಿಗಾಗಿ ಕೆಲವು ನಿಬಂಧನೆಗಳನ್ನು ಮಾಡಿದ್ದರು. ತದನಂತರ ೫-೬ ವರ್ಷಗಳಾದರೂ ಯಾವದೊಂದು ಕೆಲಸ ಕಾರ್ಯಗಳು ಮುಂದುವರಿಯದೆ ಉಳಿದುದರಿಂದ, ಆ ಬಳ್ಳಾರಿನಗರದ ಪ್ರಮುಖ ಮಂಡಲಿಯವರು ಕೂಡಿ, ಈ ವಿದ್ಯಾಭಿವೃದ್ಧಿಯ ಬೀಜವು ಅಂಕುರಿತವಾಗಿ ಫಲಿಸುವದಕ್ಕೆ, ಬಹುಜನ ಸಮ್ಮತಿಯೊಡನೆ ವೀರಶೈವ ಮಠಾಚಾರ್ಯರಾದ ಶ್ರೀಮದುಜ್ಜಯಿನೀ ಜಗದ್ಗುರು ಚರಪಟ್ಟಾಧೀಶ ಶ್ರೀ ಸಿದ್ಧಲಿಂಗರಾಜ ದೇಶಿಕೇಂದ್ರ ಮಹಾಸ್ವಾಮಿಗಳವರ ಸನ್ನಿಧಿಯಲ್ಲಿ ಸಭೆ ನಡೆಯಿಸುವದು ಯೋಗ್ಯವೆಂದು ಆಲೋಚಿಸಿ, ತಾ. ೧೬-೧೦-೧೯೧೬ ಇಸ್ವಿ ಚಂದ್ರವಾರ ಮೀಟಿಂಗು ನಡೆಯತಕ್ಕದ್ದೆಂದು ನಿರ್ಧರಿಸಿ, ಹಸ್ತಪತ್ರಿಕೆಗಳನ್ನು ಸರ್ವತ್ರ ಹಂಚಿದರು.

ಬಳಿಕ ಜಗದ್ಗುರು ಮಹಾಸನ್ನಿಧಿಯವರಿಗೆ ಸಮಸ್ತ ವಿದ್ಯಾಮಾನಗಳನ್ನು ಬಿನ್ನೈಸಿಕೊಳ್ಳಲು, ಏನಕೇನ ಪ್ರಕಾರೇಣ ಸಮಾಜಸುಧಾರಣೆ ಗೈಯ್ಯಬೇಕೆಂಬ ಲವಲವಿಕೆಯಿಂದ ಕೂಡಿರುವ ಮಹಾಶ್ರೀಗಳವರಿಗೆ ಈ ಸದ್ವಾರ್ತೆಯು ಬಂದಕೂಡಲೇ ಪರಮೋಲ್ಲಾಸಭರಿತರಾಗಿ, ಸರ್ವ ಸಿಬ್ಬಂದಿಯ ವಂದಿಗೆ ಬಿಟ್ಟು, ಮಿತಪರಿವಾರದೊಡನೆ ಹೊರಟು, ತಾ. ೧೬-೧೦-೧೯೧೬ ನೇ ಇಸ್ವಿ ದಿವಸ ಬಳ್ಳಾರಿನಗರಕ್ಕೆ ಆಗಮಿಸಿದರು.

ಶ್ರೀ ಜಗದ್ಗುರು ಮಹಾಸನ್ನಿಧಿಯಲ್ಲಿ ವಿದ್ಯಾಭಿವೃದ್ಧಿಯ ಮೀಟಿಂಗು ನಡೆಯುವದೆಂಬ ಸದ್ವಾರ್ತೆಯನ್ನು ಕೇಳಿ, ಸ್ಥಲ-ಪರಸ್ಥಲಗಳಿಂದ ಅನೇಕ ಸದ್ಗೃಹಸ್ಥರೂ, ಪದವೀಧರರೂ, ಶ್ರೀಮಂತರೂ, ಧೀಮಂತರೂ ಬಂದು ಸೇರಿದರು. ಮಹಾಸನ್ನಿಧಿಯಲ್ಲಿ ವಿದ್ಯಾಭಿವೃದ್ಧಿಯಬಗ್ಗೆ ಅನೇಕ ವಿಧವಾಗಿ ಭಾಷಣಗಳೂ, ಕರಸ್ಪಾಂಡೆನ್ಸುಗಳೂ ಪರಸ್ಪರ ನಡೆದು ತರುವಾಯ '**ಮದ್ರಾಸ ಇಲಾಖಾ ವೀರಶೈವ ವಿದ್ಯಾವರ್ಧಕ ಸಂಘ ಫಂಡು**' ಎಂದು ನಾಮ ನಿರ್ದೇಶಮಾಡಿದರು. ಬಳಿಕ ಪ್ರಥಮದಲ್ಲಿ ಸರ್ವ ಉದಾರಶಾಲಿಗಳೂ ತಂಮ ತಂಮ ಯೋಗ್ಯತೆಮೀರಿ ಧನವನ್ನು ಹಾಕಬೇಕೆಂತಲೂ ಮತ್ತು ಲಕ್ಷಾಂತರ ರೂಪಾಯಿಗಳವರೆಗೂ ಕೂಡಿಸಬೇಕೆಂತಲೂ, ಇದು ಮೂಲಧನವಾಗಿದ್ದು ಈ ಧನರಾಶಿಯ ವ್ಯಾಜು (ಬಡ್ಡಿ) ಯಿಂದ ವಿದ್ಯಾವರ್ಧಕ ಸಂಘವು ಆಚಂದ್ರಾರ್ಕ ಚಿರಸ್ಥಾಯಿಯಾಗಿ ಉತ್ತರೋತ್ತರ ಅಭಿವೃದ್ಧಿ ಹೊಂದತಕ್ಕದ್ದೆಂತಲೂ ಸರ್ವಾನುಮತದಿಂದ ಠರಾವು ಪಾಸಾದವು.

ತರುವಾಯ ಶ್ರೀಮದುಜ್ಜಯಿನೀ ಜಗದ್ಗುರು ಮಹಾಸನ್ನಿಧಿಯವರ ಮಹಾ ಶೀರ್ವಾದವು ಪ್ರಥಮದಲ್ಲಿ ಆಗಬೇಕೆಂದು ಸರ್ವರೂ ಬಿನ್ನೈಸಿಕೊಳ್ಳಲು, ಆಗ ಮಹಾಶ್ರೀಗಳವರು ಪರಮಹರ್ಷಿತರಾಗಿ ಅತ್ಯುತ್ಸುಕತೆಯಿಂದ ಐದುಸಾವಿರ (೫೦೦೦) ರೂಪಾಯಿಗಳನ್ನು ಆಶೀರ್ವದಿಸುತ್ತೇವೆಂದು ನುಡಿದರು.

( ಈ ವಿಷಯವು ಬಳ್ಳಾರಿಯಲ್ಲಿ ನೆರೆದ ೫ ನೇ ವೀರಶೈವ ಮಹಾಸಭಾದ ರಿಪೋರ್ಟ ಬುಕ್ಕಿನ ಪಾನು ೨೭೦-೭೧ ರಲ್ಲಿ ಅದೆ. )

ಸದ್ಭಕ್ತರೇ, ಈ ವಿದ್ಯಾವರ್ಧಕ ಧನವು ಶೀಘ್ರದಿಂದ ಕೂಡಿ ಉತ್ತರೋತ್ತರ ಅಭಿವೃದ್ಧಿ ಹೊಂದುತ್ತ ನಮ್ಮ ವೀರಶೈವ ಸಮಾಜವು ಸರ್ವ ರೀತಿಯಿಂದಲೂ ಉನ್ನತಸ್ಥಿತಿಗೆ ಬಂದು ಜಗದ್ವಿಖ್ಯಾತವಾಗುವದು. ಮತ್ತು ಮುಂದೆ ಲಕ್ಷಾಂತರ ರೂಪಾಯಿಗಳ ವರೆಗೂ ವಿದ್ಯಾಫಂಡು ಸಂಗ್ರಹವಾಗಿ ಬಹುಜನ ವಿದ್ಯಾರ್ಥಿಗಳು ರಾಜಕೀಯ ವಿದ್ಯಾರ್ಜನೆಮಾಡಿ ಪದವೀಧರರಾಗಬಹುದು ಇತ್ಯಾದಿ ತಮ್ಮ ಅಮೃತ ವಾಣಿಯಿಂದ ನುಡಿದು ಸಂಪೂರ್ಣ ಆಶೀರ್ವಾದವನ್ನು ಮಾಡಿದರು.

ಈ ಮಹಾನುಭಾವರ ಶುಭೋದ್ಗಾರಗಳನ್ನು ಶ್ರವಣಮಾಡುತ್ತಲೇ ಸರ್ವ ಸಭಿಕರೂ ಜಯಜಯಧ್ವಾನ ಮಾಡಿದುದಲ್ಲದೆ, ಪ್ರತಿಯೊಬ್ಬರೂ ತಮ್ಮ ತಮ್ಮ ಶಕ್ತ್ಯಾನುಸಾರ ವಿದ್ಯಾಫಂಡಿಗೆ ಧನಸಹಾಯ ಮಾಡಲಾರಂಭಿಸಿದರು. ಅನಂತರ ಸ್ಥಲ-ಪರಸ್ಥಲದ ವಿದ್ಯಾರ್ಥಿಗಳು ಬಂದು ಸೇರಿದರು. ಶ್ರೀಮಾನ್ ಕೈ. ವಾ. ಸಕ್ಕರೆ ಕರಡೆಪ್ಪನವರ ಚೌಕಿಯಲ್ಲಿ ವಿದ್ಯಾರ್ಥಿಗಳ ವಿಶ್ರಾಂತಿ ನಿಲಯ (ಹಾಸ್ಟೆಲ್) ಪ್ರಾರಂಭವಾಯಿತು.

ಅಲ್ಪಾವಧಿಯಲ್ಲಿಯೇ ಜನರಲ್ಲಿ ಹೊಸಕಳೆಯು ಉತ್ಪನ್ನವಾಗಿ "ಮದ್ರಾಸ ವೀರಶೈವ ವಿದ್ಯಾವರ್ಧಕ ಸಂಘ" ವೆಂಬ ನಾಮಾಂಕಿತ ಹೊಂದಿದ ಈ ಸಂಸ್ಥೆ ಯು ಸನ್ ೧೯೧೭ ನೇ ಇಸ್ವಿಯಲ್ಲಿ ಬ್ರಿಟಿಶ್ ಗವ್ಹರ್ನಮೆಂಟ ಸೊಸಾಯಿಟಿ ಆ್ಯಕ್ಟಿನ ಪ್ರಕಾರ ರಜಿಸ್ಟರ ಮಾಡಲ್ಪಟ್ಟಿತು. ಈ ಸಂಘದ ಸದಸ್ಯರು ಯೋಗ್ಯರೀತಿಯಿಂದ ವ್ಯವಸ್ಥೆಗೊಳಿಸುತ್ತ ಪ್ರತಿವರುಷ ಸಂಘದ ಆದಾಯ-ವೆಚ್ಚಗಳ ರಿಪೋರ್ಟ ಬುಕ್ಕು ಗಳನ್ನು ಪ್ರಸಿದ್ಧಪಡಿಸುತ್ತ ಅತ್ಯುನ್ನತಾವಸ್ಥೆಗೆ ಬಂದು ಜಗತ್ಪ್ರಸಿದ್ಧವಾಗಿದೆ.* ಮಹಾ ಸವಾರಿಯು ಬಳ್ಳಾರಿಯಿಂದ ಉಜ್ಜಯಿನೀ ಪೀಠಕ್ಕೆ ದಯಮಾಡಿಸಿತು. ತದನಂತರ ಮಠಾಧಿಕಾರಿಗಳ ವಟುಗಳಿಗೆ ವೈದಿಕ ವಿದ್ಯಾಭ್ಯಾಸ ಮಾಡಲು ಮಹಾಸಂಸ್ಥಾನದಲ್ಲಿ ಒಂದು ಪಾಠಶಾಲೆಯನ್ನು ಸ್ಥಾಪಿಸಿ ಪ್ರಸಿದ್ಧಪತ್ರಿಕೆಯನ್ನು ದೇಶಮಧ್ಯ ಹಂಚಿದರು.

---

* ಈಚೆಗೆ ಸನ್ ೧೯೪೩ ನೇ ಇಸ್ವಿ ಡಿಶಂಬರ ತಿಂಗಳಲ್ಲಿ ಈ ಸಂಘದ ರಜತಮಹೋತ್ಸವ ಸಮಾರಂಭವು ನಡೆದು, "ಬೆಳ್ಳಿ ಹಬ್ಬದ ಬೆಳದಿಂಗಳು" ಎಂಬ ಪುಸ್ತಕದ ಪಾನು ೪ ಮತ್ತು ೩೭ ರಲ್ಲಿಯೂ ಮಹಾನುಭಾವರಾದ ಈ ಉಜ್ಜಯಿನೀ ಜ|| ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿ ಗಳವರ ಭಾವಪಟ ಸೇರಿಸಿ ನಾನಾರೀತಿಯಿಂದ ಪ್ರಶಂಸೆಮಾಡಿ ಧನ್ಯವಾದಗಳನ್ನು ಅರ್ಪಿಸಿದ್ದಾರೆ.

# ಪ್ರಸಿದ್ಧ ಪತ್ರಿಕೆ

॥ ಶ್ರೀ ೧೦೮ ಜಗದ್ಗುರು ಮರುಲಾರಾಧ್ಯಾಯನಮಃ ॥

ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ ಜಗದ್ಗುರು ಚರಪಟ್ಟಾಧ್ಯಕ್ಷ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ಮಹಾಸಂಸ್ಥಾನದ ಸರ್ವಾಧಿಕಾರಿಗಳ ಕಡೆಯಿಂದ ಯಾವತ್ತು ಮಠಾಧಿಕಾರಿಗಳಿಗೆ ತಿಳಿಯಪಡಿಸುವದೇನಂದರೆ :—

ಯುಗಯುಗಾಂತರಗಳಲ್ಲಿ ಜಗದ್ಗುರು ಪಂಚಾಚಾರ್ಯರು ಇಡೀ ಭರತಖಂಡದಲ್ಲಿ ಪರಮಪವಿತ್ರವಾದ ವೀರಶೈವ ಮತವನ್ನು ಸ್ಥಾಪಿಸಿ ಆ ಮೂಲಕ ಧರ್ಮಶಾಸ್ತ್ರಗಳನ್ನು ರಚಿಸಿ ಈ ಮತದ ಯಾವತ್ತು ಧಾರ್ಮಿಕ ವಿಷಯಗಳು ಸುವ್ಯವಸ್ಥೆಯಿಂದ ನಡೆಯಬೇಕೆಂದು ನಿರ್ಧರಿಸಿ ವೀರಶೈವರಿದ್ದ ಪ್ರತಿಯೊಂದು ಗ್ರಾಮಗಳಲ್ಲಿ ಶಾಖಾಮಠಗಳನ್ನು ಸ್ಥಾಪಿಸಿ, ಆ ಆ ಮಠಗಳಿಗೆ ಧರ್ಮಶಾಸ್ತ್ರಜ್ಞರನ್ನು ಅಧಿಕಾರಿಗಳನ್ನಾಗಿ ಮಾಡಿ ದೀಕ್ಷಾ, ಶಿಕ್ಷಾ, ದಂಡನ, ಖಂಡನ ಮೊದಲಾದ ಅಧಿಕಾರಗಳನ್ನು ಅವರಿಗೆ ಕೊಟ್ಟು ಉತ್ತಮರೀತಿಯಿಂದ ಈ ಮತರಾಜ್ಯವನ್ನು ಪರಿಪಾಲಿಸಬೇಕೆಂದುಪದೇಶಿಸಿ ಶಿವಲೋಕಕ್ಕೆ ತೆರಳಿದರು. ಆ ಜಗದ್ಗುರುಗಳ ಉಪದೇಶದಂತೆ ಮಠಾಧಿಕಾರಿಗಳು ಧರ್ಮಶಾಸ್ತ್ರದಲ್ಲಿ ನಿಷ್ಣಾತರಾಗಿ ತಮ್ಮ ಕರ್ತವ್ಯವನ್ನು ಬಹುಕಾಲದವರೆಗೆ ಯೋಗ್ಯರೀತಿಯಿಂದ ಮಾಡುತ್ತ ಬಂದರು. ಆದರೆ ಸ್ವಲ್ಪ ದಿವಸಗಳಿಂದೀಚೆಗೆ ಮಠಾಧಿಕಾರಿಗಳು ಧಾರ್ಮಿಕ ವಿದ್ಯೆಯಕಡೆಗೆ ಲಕ್ಷ್ಯಗೊಡದೆ ಸುಮ್ಮನೆ ಕುಳಿತಕಾರಣ ತಾವೂ ಆ ಮೂಲಕ ಈ ಮತವೂ ಇಷ್ಟು ಹೀನಾವಸ್ಥೆಯನ್ನು ಹೊಂದಲಿಕ್ಕೆ ಕಾರಣವಾಯಿತು. ಆದಕಾರಣ ಈಗಿರತಕ್ಕ ಮಠಾಧಿಕಾರಿಗಳು ತಮ್ಮ ಪೂರ್ವಜರಂತೆ ಧಾರ್ಮಿಕ ಶಿಕ್ಷಣವನ್ನು ಪಡೆದು ತಮ್ಮ ಪೂಜ್ಯಸ್ಥಾನಕ್ಕೆ ಶೋಭೆಯನ್ನುಂಟುಮಾಡಿಕೊಳ್ಳುವದು ಇವರ ಮುಖ್ಯ ಕರ್ತವ್ಯವಾಗಿರುತ್ತದೆ. ಹೀಗಾಚರಿಸದಿದ್ದರೆ ಗುರುದ್ರೋಹಕ್ಕೆ ಪಾತ್ರರಾಗುವರೆಂದು ಬೇರೆಹೇಳುವ ಅವಶ್ಯಕತೆಯೇ ಇಲ್ಲ. ಈ ಮಠಾಧಿಕಾರಿಗಳು ಧಾರ್ಮಿಕ ವಿದ್ಯಾಶೂನ್ಯರಾದ್ದರಿಂದಲೇ ಇವರನ್ನು ಇವರ ಶಿಷ್ಯರೂ ಕೂಡ ಮನ್ನಿಸದ ಪ್ರಸಂಗ ಒದಗಿರುತ್ತದೆ. ಈ ತರದ ಅಮಾನ್ಯತೆಯನ್ನು ಸದ್ಯಃ ಮಠಾಧಿಕಾರಿಗಳು ಅನುಭವಿಸುತ್ತಿದ್ದಾರೆ. ಹೀಗಿದ್ದಾಗ್ಯೂ ಇನ್ನೂ ವರೆಗೆ ಮಠಾಧಿಕಾರಿಗಳು ಎಚ್ಚರಾಗದಿದ್ದದ್ದನ್ನು ನೋಡಿ ಪರಮಾಶ್ಚರ್ಯವೆನಿಸುತ್ತದೆ. ಇನ್ನುಮೇಲೆಯಾದರೂ ಮಠಾಧಿಕಾರಿಗಳು ತಮ್ಮ ವಟುಗಳಿಗೆ ಧಾರ್ಮಿಕ ಶಿಕ್ಷಣವನ್ನು ಕಲಿಸುವದಕ್ಕೋಸ್ಕರ ಕಳುಹಿಸತಕ್ಕದ್ದು. ಇದೇ ಉದ್ದೇಶದಿಂದ ಶ್ರೀ ಜಗದ್ಗುರು ಮಹಾಸಂಸ್ಥಾನದಲ್ಲಿ ಧಾರ್ಮಿಕ, ವೈದಿಕಾದಿ ವಿಷಯಗಳ ಬಗ್ಗೆ ಸಂಸ್ಕೃತ ಪಾಠಶಾಲೆಯು ಸ್ಥಾಪಿಸಲ್ಪಟ್ಟಿರುತ್ತದೆ. ಸದ್ಯಃ ೨೦ ಜನ ವಟುಗಳು ಅಭ್ಯಾಸ ಮಾಡುತ್ತಿರುವರು. ಆದಕಾರಣ ಪಟ್ಟಾಧಿಕಾರಿಗಳೂ, ಚರಮೂರ್ತಿಗಳೂ ಹಾಗೂ ಮಠೋತ್ಪನ್ನ ವಟುಗಳೂ, ಗುರುಪೀಠದಲ್ಲಿದ್ದು ವಿದ್ಯಾವಂತರಾಗಿ ತಮ್ಮ ಕರ್ತವ್ಯದಕ್ಷರಾಗಬೇಕೆಂದು ಪೂರ್ಣ ಆಶೆ

ಯುಂಟು. ಇಲ್ಲಿಗೆ ಅಧ್ಯಯನವನ್ನು ಮಾಡಲಿಕ್ಕೆ ಬರತಕ್ಕವರು ೪ನೆಯ ಇಯತ್ತೆಯನ್ನು ಮಾಡಿದವರಾಗಿಯೂ ಹಾಗೂ ತಮ್ಮ ಯಾವತ್ತು ಮತಾದಿ ವಿಷಯಗಳಬಗ್ಗೆ ಆ ಊರ ಪ್ರಮುಖ ಭಕ್ತರ ಕಡೆಯಿಂದ ಸರ್ಟಿಫಿಕೀಟ್ ತೆಗೆದುಕೊಂಡು ಬಂದು ಸುಶೀಲರಾಗಿಯೂ ಇರತಕ್ಕದ್ದು.

ಮಹಾಸಂಸ್ಥಾನ ಉಜ್ಜಯಿನೀ.

---

## ॥ ನವಸ್ತೋತ್ರ ರತ್ನಮಾಲಾ ॥

ಶ್ರೀಗೌರೀರಮಣಾಜ್ಞಯಾ ಕ್ಷಿತಿತಲೇ ಪ್ರಾದುರ್ಭವಲ್ಲೀಲಯಾ ।
ಪಾತುಂಲೋಕಮಿಮಂ ಜಗದ್ಗುರುವರ ಶ್ರೀದಾರುಕಾರ್ಯೋಪರಃ ॥
ಯಃ ಕ್ಷೇತ್ರೋಜ್ಜಯಿನೀ ಪುರೇ ಸಮಭವತ್ಸದ್ಧರ್ಮ ಪೀಠಾಧಿಪ ।
ಸ್ತಂ ವಂದೇ ಸತತಂ ಜಗದ್ಗುರುವರಂ ಶ್ರೀ ಸಿದ್ಧಲಿಂಗೇಶ್ವರಂ ॥ ೧ ॥

ಭಕ್ತೈಃ ಪೂಜಿತಪಾದ ಪದ್ಮಯುಗಲಃಕಾಷಾಯ ವಸ್ತ್ರಾನ್ವಿತೋ ।
ರುದ್ರಾಕ್ಷಾಭರಣೈರ್ವಿಭೂಷಿತವಪುರ್ಭಸ್ಮ ತ್ರಿಪುಂಡ್ರಾಂಕಿತಃ ॥
ಧತ್ತೆ ದೀಪ್ತ ಕಮಂಡಲುಂ ಕರತಲೇ ಪಾಲಾಶ ದಂಡಂಚಯ ।
ಸ್ತಂ ವಂದೆ ಸತತಂ ಜಗದ್ಗುರುವರಂ ಶ್ರೀಸಿದ್ಧಲಿಂಗೇಶ್ವರಂ ॥ ೨ ॥

ಪೂರ್ಣೇಂದುರ್ವರ ವೀರಶೈವ ಸಮಯಾಂ ಭೋರಾಶಿ ಸಂವರ್ಧನೆ ।
ದುರ್ವಾದಿಪ್ರಬಲೇಭಗಂಡದಲನೇ ಕಂಠೀರವಃ ಕ್ರೋಧನಃ ॥
ಯಃ ಶಿಷ್ಯೇಭ್ಯೋ ನಿಗಮಾಗಮಾರ್ಥಮಖಿಲಂ ಸಂಬೋಧಯಾಮಾ ಸಸ ।
ಸ್ತಂ ವಂದೇ ಸತತಂ ಜಗದ್ಗುರುವರಂ ಶ್ರೀಸಿದ್ಧಲಿಂಗೇಶ್ವರಂ ॥ ೩ ॥

ದುರ್ವಾರೇಂದ್ರಿಯ ಸಂಚಯಂಚ ಪ್ರಬಲಾನ್ ಕಾಮಾದಿ ಶತ್ರೂನ್ ಜಯ ।
ನ್ಯೋಗೇನಾ ವಿರತಂ ಶಿವಾರ್ಚನಪರೋ ಬ್ರಹ್ಮೌಜಸಾಭಾಸ್ವರಃ ॥
ಯಃ ಶಾಂತ್ಯಾದಿ ಗುಣಾನ್ವಿತೊ ಬುಧಜನೈಸ್ಸಂಕೀರ್ತ್ಯಮಾನೋಭೃಶಂ ।
ತಂ ವಂದೇ ಸತತಂ ಜಗದ್ಗುರುವರಂ ಶ್ರೀ ಸಿದ್ಧಲಿಂಗೇಶ್ವರಂ ॥ ೪ ॥

ಯಂ ಪ್ರಾಹುಃಶಿವಯೋಗಿನಂ ಯತಿವರಾಃ ಕೈವಲ್ಯಕಲ್ಪದ್ರುಮಂ ।
ಯಂ ಪ್ರಾಜ್ಞಾನಿಗಮಾಗಮಜ್ಞಮವದನ್ ಜ್ಞಾನೈಕರತ್ನಾಕರಂ ॥
ಯಂ ಲೋಕಃ ಪ್ರಬುಬೋಧಚಾರ್ಥಿನಿವಹಸ್ಯೇಷ್ಟಾರ್ಥ ಚಿಂತಾಮಣಿಂ ।
ತಂವಂದೇ ಸತತಂ ಜಗದ್ಗುರುವರಂ ಶ್ರೀ ಸಿದ್ಧಲಿಂಗೇಶ್ವರಂ ॥ ೫ ॥

ಶೃತ್ಯಾದಿ ಪ್ರತಿಪಾದಿತಾರ್ಥ ವಿದುಷಾ ಭಕ್ತೌಘ ವಿಧ್ವಂಸಿನಾ ।
ಯೇನಾಸ್ಮಿನ್ ಭುವನೇಶ್ವರೀಯತಪಸಾ ಧರ್ಮಃ ಪ್ರಚಾರೀಕೃತಃ ॥

ಸಂಸಾರಾರ್ಣವಮಗ್ನ ಭಕ್ತನಿವಹಶ್ಚೋದ್ಧಾರಿತಃ ಶ್ರದ್ಧಯಾ ।
ತಂವಂದೇ ಸತತಂ ಜಗದ್ಗುರುವರಂ ಶ್ರೀ ಸಿದ್ಧಲಿಂಗೇಶ್ವರಂ ॥ ೬ ॥

ಭಕ್ತಾಭಕ್ತಿಭರಾನ್ವಿತಾಸ್ತನುಮನೋ ದ್ರವ್ಯಾಣಿಯಸ್ಮೈದದು ।
ರ್ಯಸ್ಮಾದ್ಭೀತಿಮುಪೇತ್ಯ ಪಾಪಮಖಿಲಂ ನ್ರೂಣಾಂದ್ರುತಂ ಸತ್ವರಂ ॥
ಯಸ್ಮಾನ್ಮಂತ್ರರಹಸ್ಯಮಪ್ಯಧಿಗತಂ ಶುದ್ಧಾತ್ಮನೋಯೋಗಿಭಿ ।
ಸ್ತಂವಂದೇ ಸತತಂ ಜಗದ್ಗುರುವರಂ ಶ್ರೀ ಸಿದ್ಧಲಿಂಗೇಶ್ವರಂ ॥ ೭ ॥

ಯಸ್ಯಾರಾಧ್ಯ ಪದಾಂಬುಜೇಶಮವತೋ ವಿದ್ಯಾವತಃ ಶ್ರೀಮತಃ ।
ಲೋಕೇಸ್ಮಿನ್ ಸತತಂ ಜನಾಗತಭಯಾಃ ಪ್ರಾಪುಃ ಸುಖಂಚಶ್ರಿಯಂ ॥
ಕೈಲಾಸೇಚಸುದುರ್ಲಭಂ ಪರತರಂ ಶಂಭೋಃ ಪದಂ ಶಾಶ್ವತಂ ।
ತಂವಂದೇ ಸತತಂ ಜಗದ್ಗುರುವರಂ ಶ್ರೀ ಸಿದ್ಧಲಿಂಗೇಶ್ವರಂ ॥ ೮ ॥

ಯಸ್ಮಿನ್ ಸಂಯಮಿನಾಂವರೇಧೃತಿಧನೇನಿರ್ಧೂತಪಾಪವ್ರಜೋ ।
ಯೋಗೇನಾಶು ಗಿರೀಶ ಸಕ್ತಮನಸಾ ತೇನೇಶಿವೇಬ್ರಹ್ಮಣಿ ॥
ನೇತಾರಂ ಸಮುಪಾಪಶ್ಯೈವಸಮಯಃ ಸಿದ್ಧೇಶ್ವರಂ ಸದ್ಗುರುಂ ।
ತಂವಂದೇ ಸತತಂ ಜಗದ್ಗುರುವರಂ ಶ್ರೀ ಸಿದ್ಧಲಿಂಗೇಶ್ವರಂ ॥ ೯ ॥

ಸ್ವಾಮಿನ್ ವಿಶ್ವಗುರೋ ಕೃಪಾಜಲನಿಧೇ ಶ್ರೀ ಸಿದ್ಧಲಿಂಗೇಶ್ವರ ।
ಶಿಷ್ಯಸ್ತ್ರೋಮ ಹೃದಾರ್ತಿದೂರಭವತಃ ಪಾದಾರವಿಂದೇ ಮಯಾ ॥
ವಿನ್ಯಸ್ತಾಸ್ತವ ನೂತ್ನ ರತ್ನವಿಲಸನ್ಮಾಲಾ ಪ್ರಸನ್ನೋ ಭವ ।
ಮಹ್ಯಂದೇಹಿ ಜಯಂ ಮನೋರಥಫಲಂ ಪಾಹಿಪ್ರಭೋ ಮಾಂ ಸದಾ ॥೧೦॥

ಸದಾಶಿವೇನ ಸಂಪ್ರೋಕ್ತಂ । ಸಿದ್ಧಲಿಂಗ ಜಗದ್ಗುರೋಃ । ಸ್ತೋತ್ರಂ
ಪಠತಿಯೋನಿತ್ಯಂ । ಸಯಾತಿಪರಮಾಂ ಪದಂ ॥

ಎಂಬಲ್ಲಿಗೆ ಹಿರೇಹಡಗಲಿ ಪುರಾಣಿಕ ಮಠಾಧಿಪ ಶ್ರೀ ಚೆನ್ನವೀರಪಂಡಿತ ವಂಶಾಬ್ಧಿ
ರಾಕಾಶಶಾಂಕ ಸಮಾನ ವೇ॥ ವಿರೂಪಾಕ್ಷಶಾಸ್ತ್ರಿಯಿಂದ ವಿರಚಿತವಾದ
ಜಗದ್ಗುರು ಶ್ರೀ ಸಿದ್ಧಲಿಂಗೇಶ ವಿಜಯದೊಳು
೨ ನೇ ಅಧ್ಯಾಯ ಸಮಾಪ್ತವಾದುದು.



॥ ಶ್ರೀ ಜಗದ್ಗುರು ಮರುಳಾರಾಧ್ಯಾಯ ನಮಃ ॥

# ೩ ನೆಯ ಅಧ್ಯಾಯ

## ಶ್ರೀ ಜಗದ್ಗುರು ಹಿಮವತ್ಕೇದಾರ ಪೀಠೋದ್ಧಾರ ಯೋಚನೆ

### ( ೧೯೧೭ ನೇ ಇಸ್ವಿಯಲ್ಲಿ )

ಶ್ರೀಮತ್ಪೂಜ್ಯ ಭಗವತ್ಪಾದರವರು ಉಜ್ಜಯಿನೀ ಸಂಸ್ಥಾನಮಠದಲ್ಲಿ ತ್ರಿಕಾಲ ದೊಳ್ಪರಶಿವಾರ್ಚನಾಲೋಲರಾಗಿ ಕೆಲಕಾಲ ವಿಶ್ರಾಂತಿ ಹೊಂದುತ್ತಿರಲು, ವೇದಾಗಮ - ಪುರಾಣೇತಿಹಾಸ ಧರ್ಮಗ್ರಂಥಗಳನ್ನೂ ಹಾಗೂ ಮಹಾಸಂಸ್ಥಾನದಲ್ಲಿದ್ದ ಪ್ರಾಚೀನ ರಿಕಾರ್ಡುಗಳನ್ನೂ ಸಂಗ್ರಹಿಸಿ ಒಂದೊಂದೇ ಅವಲೋಕನಮಾಡುತ್ತಿರಲಾಗಿ, ಶ್ರೀಮತ್ಪರಶಿವನ ಸದ್ಯೋಜಾತಾದಿ ಪಂಚಮುಖೋದ್ಭವರಾದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಪಂಚಪೀಠಗಳಲ್ಲಿ ಶ್ರೀ ಜ|| ಏಕೋರಾಮಾರಾಧ್ಯರ ಕೇದಾರ ಪೀಠವು ಶಾಸ್ತ್ರದಿಂದ ಮಾತ್ರ ಪ್ರಸಿದ್ಧವಾಗಿದೆ. ಲೌಕಿಕ ಪ್ರಪಂಚದಲ್ಲಿ ಈ ಪೀಠದ ವಿಷಯವೇ ಅದೃಶ್ಯವಾಗಿರುವದಲ್ಲದೆ ಯಾವ ಕಾಲದಲ್ಲಿಯೂ ನಮ್ಮ ಕರ್ನಾಟಕ ಜನರಿಗೆ ಆ ಪೀಠದ ( ಜಗದ್ಗುರುಗಳ) ದರ್ಶನ, ಪೂಜನ, ವಂದನಾದಿಗಳಿಲ್ಲದೆ ನಾಮಶೇಷವಾಗಿರುವದಲ್ಲಾ! ಎಂದು ಪರ್ಯಾಲೋಚಿಸಿ ಇದೇನು "ಗತಾನುಗತಿಕೋಲೋಕಃ" ಎಂಬಂತೆ ಪೂರ್ವಾಪರ ಯಾವ ವಿಷಯಗಳನ್ನೂ ಪರಿಶೋಧ ಮಾಡದೆ ಸುಮ್ಮನೆ ಹಿಂದಿನವರಂತೆ ನಾವೂಕೂಡ ಸ್ವಾರ್ಥಾವಲಂಬಿಗಳಾಗಿ ತೆರಳಿದರೆ ಪ್ರಯೋಜನವೇನು ? ನಮ್ಮ ಕಾಲಮಾನದಲ್ಲಿ ಆ ಕೇದಾರ ಪೀಠವನ್ನು ಪ್ರಕಾಶಕ್ಕೆ ತಂದು, ನಮ್ಮ ದಕ್ಷಿಣ ಹಿಂದುಸ್ಥಾನದ ಭಕ್ತಾದಿಗಳಿಗೆ ದರ್ಶನವಾಗುವಂತೆ ಮಾಡಬೇಕೆಂದೂ ಈ ಕೆಲಸವನ್ನು ಆದಷ್ಟು ಶೀಘ್ರವಾಗಿ ನಡೆಯಿಸಬೇಕೆಂದೂ ದೃಢ ಸಂಕಲ್ಪಮಾಡುವವರಾದರು.

## ಶ್ರೀ ಕೇದಾರ ಸಂಸ್ಥಾನ ವಿಷಯ

ಹಿಮವತ್ಪರ್ವತದ ಕೇದಾರವೆಂಬೆಡೆಯಲ್ಲಿ ಈ ಪ್ರಸಿದ್ಧ ಪೀಠವಿರುವುದು. ಈ ಪೀಠವು ಅತ್ಯಂತ ಮಹತ್ವದ್ದು ಮತ್ತು ಪ್ರಾಚೀನವಾದುದು ಎಂಬುದಕ್ಕೆ ಅನೇಕ ಆಧಾರಗಳಿವೆ. ದ್ವಾಪರಯುಗದಲ್ಲಿದ್ದ ಲೋಕಪ್ರಸಿದ್ಧನಾದ ವ್ಯಾಸಮಹರ್ಷಿಯು ಈ ಪೀಠ ಸ್ಥಾಪಕರಾದ ಶ್ರೀ ಘಂಟಾಕರ್ಣ ಶಿವಾಚಾರ್ಯರಿಂದ ಶಿವಸಿದ್ಧಾಂತೋಪದೇಶವನ್ನು ಪಡೆದು ಮುಕ್ತನಾದನು. ಇದನ್ನು ವ್ಯಾಸಮಹರ್ಷಿಯೇ ತನ್ನಿಂದ ರಚಿಸಲ್ಪಟ್ಟ ಸ್ಕಾಂದಪುರಾಣಾಂತರ್ಗತ ಕಾಶೀಕಾಂಡದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದಾನೆ.

ಈ ಪೀಠವು ಪಾಂಡವರ ಕಾಲದಲ್ಲಿ ಇತ್ತೆಂಬ ಬಗ್ಗೆ ಅದೇ ಸ್ಕಾಂದಪುರಾಣದ ಕೇದಾರ ಕಾಂಡದಲ್ಲಿ ಉಲ್ಲೇಖವಿದೆ. ಇದರಿಂದ ದ್ವಾಪರಯುಗದಲ್ಲಿಯೇ ಇತ್ತೆಂಬುವದು ಸ್ಪಷ್ಟವಾಗುವುದು.

ಸಧ್ಯಕ್ಕೆ ಈ ಪೀಠದಲ್ಲಿ (೩೦೦ ರ) ಮೇಲೆ ಈ ಪೀಠಾದೀಶರಾದ ಮಹಾಸ್ವಾಮಿಗಳವರ ಪಟ್ಟಾವಳಿಯು ದೊರೆಯುತ್ತಿದೆ. ಒಬ್ಬೊಬ್ಬ ಸ್ವಾಮಿಗಳ ಜೀವಮಾನವನ್ನು ಕಡಿಮೆಯಂದರೆ (೨೦) ವರುಷಗಳೆಂದು ಇಟ್ಟುಕೊಂಡರೂ ಪೀಠ ಸ್ಥಾಪನೆಯಾಗಿ (೬) ಸಹಸ್ರ ವರುಷಗಳಾಗಿರಬೇಕೆಂದು ಸಿದ್ಧವಾಗುತ್ತದೆ. ಅಲ್ಲದೆ ಈ ಪೀಠದ ಪ್ರಾಚೀನತ್ವದಬಗ್ಗೆ ದೇವನಾಗರಿ (ಲಿಪಿ) ಯಲ್ಲಿ ಬರೆದ ಅನೇಕ ಶಿಲಾಲೇಖನಗಳೂ, ತಾಮ್ರಶಾಸನಗಳೂ ಉಪಲಬ್ದವಿವೆ.

ಶ್ರೀಕರ ಭಾಷ್ಯವನ್ನು ಬರೆದ ಶ್ರೀಪತಿ ಪಂಡಿತನು ಈ ಪೀಠದ ಶಿಷ್ಯನಾಗಿದ್ದನೆಂದು ಆತನು ಬರೆದ ಭಾಷ್ಯದಿಂದಲೆ ಗೊತ್ತಾಗುತ್ತದೆ. ಈ ಪೀಠದಲ್ಲಿ ಕಲಿಯುಗದಾದಿಯಲ್ಲಿ ಅವತಾರಮಾಡಿದ " ಏಕೋರಾಮ ಶಿವಾಚಾರ್ಯರು " ಬ್ರಹ್ಮಸೂತ್ರಗಳ ಮೇಲೆ ಅಧಿಕರಣಭಾಷ್ಯವೆಂಬ ಹೆಸರಿನಿಂದ ಶಕ್ತಿವಿಶಿಷ್ಟಾದ್ವೈತ ಬೋಧಕವಾದ ಒಂದು ಭಾಷ್ಯವನ್ನು ಬರೆದಿರುವುದು ಶ್ರೀಕರ ಭಾಷ್ಯದಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಈ ಪೀಠಕ್ಕೆ ಹಿಮಾಲಯದ ಟಿಹರಿ ರಾಜ್ಯದ ಮಹಾರಾಜರು ಮುಖ್ಯ ಶಿಷ್ಯರಾಗಿರುತ್ತಾರೆ. ಅಲ್ಲದೆ ಉದಯಪುರ, ಜಂಬು (ಕಾಶ್ಮೀರ) ಮೊದಲಾದ (೧೧) ಜನ ರಾಜರು ಪ್ರತಿ ವರುಷ ಕಾಣಿಯನ್ನು ಅರ್ಪಿಸುತ್ತಾರೆ. ಈಗ್ಗೆ ೬೦–೭೦ ವರುಷಗಳ ಪೂರ್ವದಲ್ಲಿ ಈ ಪೀಠಕ್ಕೆ (೪೭೬) ಗ್ರಾಮಗಳು ಜಹಗೀರಾಗಿದ್ದವು. ಇತ್ತೀಚಿಗೆ (೪೫೫) ಗ್ರಾಮಗಳು ಕೈತಪ್ಪಿ ಈಗ (೧೪೧) ಗ್ರಾಮಗಳು ಮಾತ್ರ ಪೀಠದ ಆಡಳಿತಕ್ಕೆ ಒಳಪಟ್ಟಿರುತ್ತವೆ.

ಈ ಪೀಠದ ಮಹಾಸ್ವಾಮಿಗಳು ಟಿಹರಿರಾಜ್ಯದಲ್ಲಿ ಬ್ರಾಹ್ಮಣಾದಿ ಚತುರ್ವರ್ಣಗಳವರೆಗೂ ಬಹಿಷ್ಕಾರಾದಿ ದಂಡನ, ಖಂಡನ, ಪ್ರಾಯಶ್ಚಿತ್ತಗಳನ್ನು ನಡೆಯಿಸುತ್ತಾರೆ. ಈ ಪೀಠದ ಜಗದ್ಗುರುಗಳವರಿಗೆ ಪ್ರಾಚೀನ ಮಹಾರಾಜರಿಂದ ದತ್ತವಾದ " ರಾವಲ್ " ಎಂಬ ಬಿರುದು ಅನೂಚೀನವಾಗಿ ನಡೆದುಕೊಂಡುಬಂದಿದೆ. (ಕೇದಾರ ಪೀಠದ ಚರಿತ್ರ ಪಾನು ೮೦) ಮತ್ತು ಲೋಕಪ್ರಸಿದ್ಧವಾದ ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ಶ್ರೀ ಕೇದಾರೇಶ್ವರ ದೇವಾಲಯವು ಈ ಪೀಠದ ಅಧಿಪತ್ಯಕ್ಕೆ 'ಒಳಪಟ್ಟಿರುತ್ತದೆ.' ಬ್ರಿಟಿಷ್ ಸರಕಾರದವರೂ ಸಹ ಈ ಪೀಠಕ್ಕೆ ಬಹಳ ಗೌರವವನ್ನು ಕೊಡುತ್ತಿದ್ದಾರೆ. ಹಿಂದೂಸ್ಥಾನದಲ್ಲೆಲ್ಲಾ ಇವರು ಬೇಕಾದಷ್ಟು ಕತ್ತಿ, ಕಠಾರಿ, ಬಂದೂಕು, ರಿವಾಲ್ವಾರ್ ಮುಂತಾದವುಗಳನ್ನು ಉಪಯೋಗಿಸಬಹುದೆಂದು ವೈಸ್ರಾಯರವರು ರಹದಾರಿಯನ್ನು ದಯಪಾಲಿಸಿರುತ್ತಾರೆ. ಇದಲ್ಲದೆ ಬ್ರಿಟಿಷ್‌ರಾಜ್ಯದಲ್ಲೆಲ್ಲಾ ಅಡ್ಡಪಲ್ಲಕ್ಕಿ ಮೊದಲಾದ (೭೨) ಬಿರುದಾವಳಿಗಳನ್ನು ಉಪಯೋಗಿಸುವದಕ್ಕೆ

ರಹದಾರಿಯೂ ಉಂಟು. ಆ ಪ್ರಾಂತದ ಕೆಲಜನ ಸ್ಮಾರ್ತರು ಈ ಪೀಠವನ್ನು ತಮ್ಮ ಸ್ವಾಧೀನಪಡಿಸಿಕೊಳ್ಳಬೇಕೆಂಬ ದುರುದ್ದೇಶದಿಂದ ಈ ಪೀಠವು ವೀರಶೈವರದಲ್ಲವೆಂದೂ ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟದ್ದೆಂದೂ ವ್ಯಾಜ್ಯವನ್ನು ತಂದಿದ್ದರು. ಈ ವ್ಯಾಜ್ಯವು ಬಹುದಿವಸಗಳವರೆಗೂ ನಡೆದು, ಅಂತ್ಯದಲ್ಲಿ ಅಲಹಾಬಾದ್ ಕೋರ್ಟಿನಲ್ಲಿ ಈ ಪೀಠವು ಶಂಕರಾಚಾರ್ಯರಿಗಿಂತ ಒಷ್ಟೋ ವರುಷಗಳ ಪೂರ್ವದಲ್ಲಿದ್ದುದೆಂದೂ, ಇದು ಜಂಗಮರಿಗೆ ಸೇರಿದ್ದುದೆಂದೂ ತೀರ್ಮಾನಿಸಿರುತ್ತಾರೆ.

ಇದು ವೀರಶೈವ ಮತದ ಪ್ರಾಚೀನತ್ವಕ್ಕೆ ಅತ್ಯಂತ ಮಹತ್ವ (ಬಲ) ವಾದ ಆಧಾರವಾಗಿದೆ. (೧೯೨೭, ಬೆಂಗಳೂರು ವೀರಶೈವ ಕರದರ್ಪಣದಿಂದ)

ಮಹಾಶ್ರೀಗಳವರು ಈ ಘನವಾದ ಆಲೋಚನೆ ಮಾಡುತ್ತಲೇ ಅತ್ತ ಹಿಮಾಚಲಪ್ರದೇಶದ ಯಾವ ವಿಧವಾದ ವರ್ತಮಾನವಿಲ್ಲ, ಅಲ್ಲಿಯ ಪರಿಚಯವಿಲ್ಲ ಹೇಗೆ ಮಾಡಬೇಕೆಂಬ ಸಂಶಯಗಳು ಬಂದು ನಿಂತವು. ಇದಕ್ಕೆ ಕೆಲವುಕಾಲ ಯೋಚಿಸಿ, ಶ್ರೀ ಕಾಶೀಕ್ಷೇತ್ರದಲ್ಲಿ ರಾರಾಜಿಸುವ ಶ್ರೀ ಜಗದ್ಗುರು ವಿಶ್ವಾರಾಧ್ಯ ಪೀಠಾಧೀಶರಾದ **ಶ್ರೀ ೧೦೮ ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರಲ್ಲಿಗೆ** ಪತ್ರದ್ವಾರ ಉತ್ತರ ಹಿಂದುಸ್ಥಾನದಲ್ಲಿರುವ ಶ್ರೀ ಜಗದ್ಗುರು ಕೇದಾರ ಸಿಂಹಾಸನದ ಸಮಾಚಾರಗಳೇನು, ಹಿಮಾಲಯ ಪರ್ವತಕ್ಕೆ ಪ್ರಯಾಣದ ಮಾರ್ಗಗಳಾವವು ಇತ್ಯಾದಿ ವಿವರಗಳನ್ನು ಬರೆದು ಇತ್ತಕಡೆಗೆ ತಿಳುಹಿಸಬೇಕೆಂದು ಅರಿಕೆಮಾಡಿಕೊಂಡರು.

ಉಜ್ಜಯಿನೀ ಜಗದ್ಗುರು ಮಹಾನುಭಾವರು ಈ ಮಹತ್ತರವಾದ ಕಾರ್ಯಕ್ಕೆ ಪ್ರಯತ್ನಮಾಡಿರುವದನ್ನು ತಿಳಿದು, ಶ್ರೀ ಕಾಶೀಪೀಠದ ಜಗದ್ಗುರುಗಳವರು ತುಂಬಾ ಆನಂದಾಶ್ಚರ್ಯಭರಿತರಾಗಿ, ಅತ್ತ ಹಿಮವತ್ಕೇದಾರ ಮಹಾಸ್ವಾಮಿಗಳವರಿಗೆ ಪತ್ರ ಬರೆದು ಸಮಸ್ತ ವಿಷಯಗಳ ತರಿಸಿಕೊಂಡು, ಇತ್ತ ಉಜ್ಜಯಿನೀ ಮಹಾಶ್ರೀಗಳವರಿಗೆ ಪತ್ರದ್ವಾರಾ ಶೃತಪಡಿಸಿದರು. ಏನಂದರೆ—

ಉತ್ತರ ಹಿಂದುಸ್ಥಾನದಲ್ಲಿ ಬ್ರಿಟಿಷ ಸಾಮ್ರಾಜ್ಯಾಧಿಪತ್ಯಕ್ಕೊಳಪಟ್ಟ, ಟೆಹರಿ ಮಹಾರಾಜಾಧಿಕಾರದ ಪ್ರದೇಶದಲ್ಲಿ ಹಿಮವತ್ಪರ್ವತದ ಉಷಾಮಠದಲ್ಲಿ ಶ್ರೀ ಜಗದ್ಗುರು ಕೇದಾರ ಪೀಠವು ವಿರಾಜಮಾನವಾಗಿದ್ದು, ಸಧ್ಯಃ ವಿಶ್ವಲಿಂಗ ಶಿವಾಚಾರ್ಯರೆಂಬವರು ಇದ್ದಾರೆ. ಅಲ್ಲಿ ಹಿಂದೀಭಾಷೆಯೇ ಪ್ರಾಮುಖ್ಯವಾಗಿದೆ. ನಮ್ಮ ದೇಶದಿಂದ ಹರದ್ವಾರ, ಬದರೀನಾಥಗಳೆಂಬ ಪ್ರಸಿದ್ಧ ಕ್ಷೇತ್ರಗಳವರೆಗೆ ಮಾತ್ರ ರೈಲು ಮಾರ್ಗ ಪ್ರಯಾಣ. ಅಲ್ಲಿಂದ ಮುಂದೆ ೧೫೦–೧೬೦ ಮೈಲುಗಳವರೆಗೆ ಅತಿ ಕಠಿಣವಾದ ಕಾಲುಮಾರ್ಗದಿಂದ ನಡೆದು, ನೂರಾರು ಗುಡ್ಡಗಳನ್ನು ಏರುತ್ತ ಇಳಿಯುತ್ತ, ಗಿಡಗಳಿಂದಲೂ, ಕಾಡುಪ್ರದೇಶಗಳಿಂದಲೂ ಭೀಕರವಾಗಿರುವ ದಾರಿಯನ್ನು ತುಳಿಯುತ್ತ, ಅತ್ಯಂತ ಶ್ರಮದಿಂದ ಹಿಮಾಲಯವನ್ನು ಸೇರುವರು. ಅಲ್ಲಿಯಾದರೂ ಸಹಿಸಲಸಾಧ್ಯವಾದ ಅದ್ಭುತ ಮಂಜುಗಡ್ಡೆಗಳೂ, ವಿಶೇಷ ಛಳಿಯೂ ತುಂಬಿರು

ವದರಿಂದ ಜನರು ವಾಸಮಾಡಲು ಬಹು ಕಷ್ಟವಾಗಿರುವದೆಂತಲೂ, ಆ ಪೀಠದ ಶ್ರೀಗಳವರು ಕನ್ನಡ ಪ್ರಾಂತಕ್ಕೆ ಯಾವಾಗ್ಯೂ ಆಗಮಿಸಿರುವದಿಲ್ಲವೆಂತಲೂ ಇತ್ಯಾದಿ ಅನೇಕ ವಿಷಯಗಳನ್ನು ಇಲ್ಲಿಗೆ ತಿಳುಹಿಸಿದರು.

ವಾಚಕ ಮಹಾಶಯರೇ, ಅಶೃತದೃಷ್ಟಪೂರ್ವವಾದ ಹಿಮವತ್ಕೇದಾರ ಪೀಠದ ವಿಷಯಗಳನ್ನು ಕೇಳಿ ಎಂಥವರಿಗಾದರೂ ಅಸಾಧ್ಯವೆಂದು ನಿರಾಶಾಜನಕವಾಗ ಬಹುದು. ಆದರೆ ಈ ಮಹಾತ್ಮರಿಗೆ ಕಿಂಚಿತ್ತಾದರೂ ಅಧೈರ್ಯ ಉಂಟಾಗಲಿಲ್ಲ. ಒಳ್ಳೇದು ಇರಲಿ; ಎಷ್ಟೇ ಕಷ್ಟವಾದರೂ ಆ ಕೇದಾರ ಪೀಠಾಧೀಶರನ್ನು ನಮ್ಮಲ್ಲಿಗೆ ಕರೆಯಿಸಿಕೊಂಡು ಆ ಪೀಠಾಚಾರ್ಯರ ದರ್ಶನವನ್ನು ಸರ್ವರಿಗೂ ಮಾಡಿಸುವದಲ್ಲದೆ ಪಂಚಸಿಂಹಾಸನಾಧೀಶ್ವರರೂ ಜಗತ್ತಿನಲ್ಲಿ ಮೆರೆಯುವಂತೆ ಮಾಡಬೇಕೆಂದು ಪುನಃ ದೃಢೀಕರಿಸಿದರು.

ತರುವಾಯ ಹಿಮವತ್ಕೇದಾರ ಸಿಂಹಾಸನಾಧಿಪತಿಗಳಲ್ಲಿಗೆ ಹೋಗಿ ಅಲ್ಲಿಯ ವಿದ್ಯಮಾನಗಳನ್ನೂ ಹಾಗು ಇಲ್ಲಿಯ ವಿಷಯಗಳನ್ನು ಪರಸ್ಪರ ತಿಳುಹಿಸುವದಕ್ಕೋಸ್ಕರ ಕಾಶೀ ಜಂಗಮವಾಡೀ ಮಠದಲ್ಲಿ ಗೀರ್ವಾಣ ವಿದ್ಯಾಭ್ಯಾಸ ತತ್ಪರರಾಗಿದ್ದ ವೇ॥ ಗಂಗಾಧರ ಶಾಸ್ತ್ರಿಗಳು ( ಸದ್ಯಃ ಕೇದಾರಪೀಠದ ಪಟ್ಟಾಧೀಶರಾಗಿರುವ ಶ್ರೀ ನೀಲಕಂಠಲಿಂಗ ಶಿವಾಚಾರ್ಯರು ) ಇವರನ್ನೂ ಮತ್ತೊಬ್ಬರನ್ನೂ ಜೊತೆಮಾಡಿ ಕಾಶೀ ಜಗದ್ಗುರುಗಳವರು ಹಿಮಾಲಯಕ್ಕೆ ಕಳುಹಿಸಿಕೊಟ್ಟರು.

ಅಲ್ಲಿಗೆ ಹೋಗಿ ಕೇದಾರ ಪೀಠಾಧೀಶರಾದ ಶ್ರೀ ವಿಶ್ವಲಿಂಗ ಮಹಾಸ್ವಾಮಿಗಳವರಿಗೆ ಮೊದಲು ತಮ್ಮ ವಿಷಯಗಳನ್ನು ಅರಿಕೆಮಾಡಿಕೊಂಡು ಬಳಿಕ ಮದ್ರಾಸ ಇಲಾಖಾ ಬಳ್ಳಾರಿ ಜಿಲ್ಹೆಗೆ ಸೇರಿದ ಕೂಡ್ಲಿಗಿ ತಾಲೂಕಿನಲ್ಲಿ ಸುಪ್ರಸಿದ್ಧವಾದ ವಟಕ್ಷೇತ್ರದ ಮಧ್ಯದಲ್ಲಿ ವಿರಾಜಿಸುವ ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ ಚರಪಟ್ಟಾಧ್ಯಕ್ಷರೂ, ಶಿವಯೋಗಿಪುಂಗವರೂ, ಮಹಿಮಾನ್ವಿತರೂ ಆದ ಶ್ರೀ ೧೦೮ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮನ್ನು ಕನ್ನಡನಾಡಿಗೆ ಕರೆಯಿಸಿಕೊಂಡು ತಮಗೆ ಸಕಲವಿಧವಾದ ಸೇನಾ-ಸಿಬ್ಬಂದಿ ಮುಂತಾದವುಗಳನ್ನು ಕೊಟ್ಟು ಆ ಪ್ರಾಂತದಲ್ಲಿ ತಮ್ಮ ಸರ್ಕೀಟು ಮಾಡಿಸಬೇಕೆಂಬ ಸತ್ಸಂಕಲ್ಪವುಳ್ಳವರಾಗಿದ್ದಾರೆ. ಆದಕಾರಣ ತಾವು ದಕ್ಷಿಣಹಿಂದುಸ್ಥಾನ ಪ್ರಾಂತಕ್ಕೆ ದಯಮಾಡಿಸಬೇಕೆಂದು ಸಮಸ್ತ ವಿಚಾರಗಳನ್ನು ಅರಿಕೆಮಾಡಿಕೊಂಡರು.

ಈಪ್ರಕಾರ ವೇ॥ ಗಂಗಾಧರ ಶಾಸ್ತ್ರಿಗಳವರ ಪರಿಮುಖದಿಂದ ಉಜ್ಜಯಿನೀ ಜಗದ್ಗುರುಗಳವರ ಘನತರವಾದ ಆಲೋಚನೆ, ಸದಭಿಪ್ರಾಯವನ್ನು ತಿಳಿದು, ಕೇವಲ ಮುಗ್ಧಸ್ವಭಾವದವರೂ, ಶಾಂತಚಿತ್ತರೂ, ಪರಸ್ಥಲ ಸಂಚಾರವಿಲ್ಲದೆ ಸ್ವಸ್ಥಾನದಲ್ಲೇ ಕಾಲಹರಣಮಾಡಿದವರೂ ಆದಂಥ ಕೇದಾರಪೀಠದ ಶ್ರೀ ವಿಶ್ವಲಿಂಗ ಸ್ವಾಮಿಗಳವರು

ಆಸಂದಾಶ್ಚರ್ಯಚಕಿತರಾಗಿ, ಆಹಾ! ನಾವು ಬಹುದೂರದ ಪ್ರದೇಶದವರೂ ಅಪರಿಚಿತರೂ ಆಗಿದ್ದರೂ ನಮ್ಮ ಪೀಠದ ಮೇಲೆ ಉಜ್ಜಯಿನೀ ಶ್ರೀ ಜಗದ್ಗುರುಗಳವರು ತಮ್ಮ ನಿಜವಾದ ಪ್ರೇಮ, ಉದಾರತ್ವ, ಧೀರೋದಾತ್ತ, ಗಂಭೀರ ಗುಣಾದಿಗಳನ್ನು ತೋರಿಸುವರಲ್ಲಾ ಎಂದು ಮನದಲ್ಲಿ ಸಂತೋಷಭರಿತರಾಗಿ, ಶಾಸ್ತ್ರಿಗಳೇ, ನಮ್ಮ ಪೀಠಕ್ಕೆ ಸರಿಯಾದ ಆದಾಯವಿಲ್ಲದೆ ಬಹು ಕಷ್ಟಪರಂಪರೆಯಿಂದ ಬಳಲುತ್ತಿರುವೆವು. ಹಿಂದೆ ಕೆಲವು ಕಾರಣಗಳಿಂದ ವ್ಯಾಜ್ಯ ನಡೆದು ಪೀಠಕ್ಕೆ ಸದ್ಯಃ ೫೦-೬೦ ಸಹಸ್ರ ರೂಪಾಯಿಗಳ ಋಣಭಾರವಾಗಿ ಈ ಪೀಠವು ಅನ್ಯಾಕ್ರಾಂತವಾಗುವಂತಿದೆ. ಈ ಭಾರವನ್ನು ಪರಿಹಾರಮಾಡಲು ನಮಗೆ ಶಕ್ತಿಯಿಲ್ಲದೆ ವಿಪನ್ನಾವಸ್ಥೆಯಲ್ಲಿದ್ದು ಬಹು ಚಿಂತಾಕ್ರಾಂತರಾಗಿದ್ದೇವೆ. ಇಂತಹ ಸಮಯದಲ್ಲಿ ಬಿಟ್ಟು ದಕ್ಷಿಣಪ್ರಾಂತಕ್ಕೆ ಹೊರಡಲು ಸದ್ಯಃ ಅನುಕೂಲವಿಲ್ಲದಾಗಿದೆ. ಇತ್ಯಾದಿ ವಿವರಗಳನ್ನು ಶೃತಪಡಿಸಿದರು.

ಮೇಲಿನ ಸಕಲ ವೃತ್ತಾಂತಗಳನ್ನು ಹಿಮಾಲಯದಿಂದ ಇತ್ತ ಉಜ್ಜಯಿನೀ ಮಹಾಸನ್ನಿಧಿಯ ವರೆಗೆ ಗಂಗಾಧರ ಶಾಸ್ತ್ರಿಗಳು ಅರಿಕೆಮಾಡಿಕೊಳ್ಳಲು ಮಹಾಶ್ರೀಗಳವರು ನೋಡಿ ಬಹು ವ್ಯಾಕುಲಪಟ್ಟು ಆದರೂ ಪುನಃ ಉತ್ಸುಕತೆಯುಳ್ಳವರಾಗಿ ಪತ್ರದಿಂದ "ಗಂಗಾಧರ ಶಾಸ್ತ್ರಿಗಳೇ, ಆ ಜಗದ್ಗುರುಗಳಿಗೆ ಧೈರ್ಯ ಮತ್ತು ಸಮಾಧಾನೋಕ್ತಿಗಳನ್ನು ಹೇಳುತ್ತ ಅವರ ಶುಶ್ರೂಷೆ, ಅಲ್ಲಿಯ ಸಂಸ್ಥಾನ ವಹಿವಾಟ ಮಾಡುತ್ತ ಕೆಲವು ದಿವಸ ನೀವು ಅಲ್ಲಿಯೇ ವಾಸಮಾಡಿರಿ. ನಿಮಗೆ ಬೇಕಾಗುವ ಹಣ-ಕಾಸು ಮುಂತಾದವುಗಳನ್ನು ನಾವು ಇಲ್ಲಿಂದ ಅನುಕೂಲಮಾಡುತ್ತಿರುವೆವು" ಎಂಬ ಅಭಿಪ್ರಾಯದ ಪತ್ರಿಕೆಯು ಹಿಮಾಲಯಕ್ಕೆ ತಲ್ಪಿತು. ಆ ಜಗದ್ಗುರುಗಳವರು ನೋಡಿ ಉಲ್ಹಾಸದಿಂದ ಧೈರ್ಯತಾಳಿಕೊಂಡು ಗಂಗಾಧರ ಶಾಸ್ತ್ರಿಗಳವರನ್ನು ತಮ್ಮ ಸಂಸ್ಥಾನದಲ್ಲಿಯೇ ಕಾರಭಾರಿಗಳನ್ನಾಗಿರಿಸಿಕೊಂಡು ಕೆಲಕಾಲ ಸಂತೋಷಚಿತ್ತರಾಗಿ ಇದ್ದರು.

ಇತ್ತ ನಮ್ಮ ಜಗದ್ಗುರುಗಳವರಿಗೆ ಕೇದಾರ ಮಹಾಸಂಸ್ಥಾನವನ್ನು ಜೀರ್ಣೋದ್ಧಾರ ಮಾಡಬೇಕು; ನಮ್ಮ ಪ್ರಾಂತಕ್ಕೆ ಆ ಮಹಾಸ್ವಾಮಿಗಳವರನ್ನು ಬರಮಾಡಿಕೊಂಡು ಋಣಭಾರವನ್ನು ಪರಿಹರಿಸಬೇಕೆಂತಲೂ ಮತ್ತು ಇನ್ನುಳಿದ ಜಗದ್ಗುರು ಪೀಠಗಳನ್ನು ಸಹ ಪ್ರಕಾಶಕ್ಕೆ ಬರುವಂತೆ ಮಾಡಬೇಕೆಂದೂ ನಿರಂತರದಲ್ಲಿಯೂ ಹಲವು ವಿಧವಾದ ಆಲೋಚನಾ ತರಂಗಗಳಲ್ಲಿ ನಿಮಗ್ನರಾಗಿದ್ದರು. ಆಹಾ! ಇದೇ ಅಲ್ಲವೇ ನಿಜವಾದ ಪ್ರೇಮವು! ಇವರೇ ನಿಜವಾದ ಜಗದ್ಗುರುಗಳು! ಸ್ವಾರ್ಥತ್ಯಾಗಿಗಳು!



## ಕಂಪಲಿಯಲ್ಲಿ ಅಭೂತಪೂರ್ವ ಮಹೋತ್ಸವವು

ಹೊಸಪೇಟೆ ತಾಲೂಕು ಕಂಪಲಿ ಗ್ರಾಮದಲ್ಲಿ ವೀರಶೈವ ಮಂಡಳಿ ನಿವಾಸ ವಿಶೇಷವಾಗಿರುವದರಿಂದ ಆಗಾಗ್ಗೆ ಸತ್ಕಾರ್ಯಗಳ ಮಾಡಲು ಮುಂದೊರೆಯುತ್ತಿರು ವರು. ಮಹಾಂತಿನಮಠದಲ್ಲಿ ಶ್ರೀ ಬಸವಪುರಾಣ ಪ್ರವಚನವು ನಡೆದಿರಲು ಸಮಾಪ್ತಿ ಕಾಲದಲ್ಲಿ ಆ ಪುರಾಣೋತ್ಸವ ಮಾಡಲಾಗದೆಂದು ಬ್ರಾಹ್ಮಣರು ಕೋರ್ಟಿನಲ್ಲಿ ವ್ಯಾಜ್ಯ ಹೂಡಿದರು. ಮುಂದೆ ಹೊಸಪೇಟೆ ಡಿ|| ಮೆ|| ಕೋರ್ಟ ಧೊರೆಗಳವರಲ್ಲಿ ವಿಚಾರಣೆ ಕೆಲವು ದಿವಸ ಜರುಗಿ ಕೊನೆಗೆ ವೀರಶೈವ ಮತೀಯರಂತೆ ತಾ. ೮-೫-೧೯೧೬ ನೇ ದಿವಸ ತೀರ್ಮಾನವಾಯಿತು. ( ಈ ವ್ಯಾಜ್ಯದ ರಿಕಾರ್ಡಬುಕ್ಕು ಮುದ್ರಿ ಸಲ್ಪಟ್ಟಿವೆ. )

ತರುವಾಯ ಸದರೀ ಪುರಾಣ ಸಮಾಪ್ತಿ ಮಂಗಲ ಮಹೋತ್ಸವಕ್ಕೆ ಪರಮ ಪೂಜ್ಯರೂ ಮಹಾತ್ಮರೂ ಆದ ಉಜ್ಜಯಿನೀ ಜ. ಶ್ರೀ ಸಿದ್ಧಲಿಂಗ ಶಿವಾರ್ಯ ಮಹಾ ಸ್ವಾಮಿಗಳವರಲ್ಲಿ ಬಿನ್ನೈಸಿಕೊಂಡಮೇರೆಗೆ ಮಹಾಸವಾರಿಯು ದಯಮಾಡಿಸಿತು. ಪುರಪ್ರಮುಖರು ಸಮಸ್ತವಿಧವಾದ ಏರ್ಪಾಡುಗಳನ್ನು ಮಾಡಿ ಸಕಲ ಬಿರುದಾವಲೀ ಯುಕ್ತವಾಗಿ ತಿರ್ಯಗಾಂದೋಲಿಕಾದಲ್ಲಿ ಮಹಾಸನ್ನಿಧಿಯೊಡನೆ ಪುರಾಣೋತ್ಸವವು ಅತ್ಯಂತ ಸಂಭ್ರಮದಿಂದ ನೆರವೇರಿತು. ಮತ್ತು ಭೂರಿ ಅನ್ನಸಂತರ್ಪಣೆಯೂ ಜರುಗಿತು. ೨೫-೩೦ ಸಹಸ್ರ ಪ್ರೇಕ್ಷಕ ಜನಸಮುದಾಯವು ಸೇರಿ ಈ ಉಜ್ಜಯಿನೀ ಜಗದ್ಗುರು ಮಹಾಪ್ರಭುಗಳವರ ದರ್ಶನದಿಂದ ಪವಿತ್ರಾತ್ಮರಾದೆವೆಂದು ಸ್ತುತಿಸಿದರು.

ಬಳಿಕ ಈ ಗ್ರಾಮದಲ್ಲಿ ಸ್ಥಾಪಿತವಾಗಿರುವ ವೀರಶೈವ ಸಂಸ್ಕೃತ ಪಾಠಶಾಲೆಗೆ ಮಹಾಸವಾರಿಯು ತಾ. ೫-೪-೧೯೧೭ ನೇ ದಿವಸ ದಯಮಾಡಿಸಿ ವಿದ್ಯಾರ್ಥಿಗಳ ಅಭ್ಯಾಸಕ್ರಮವನ್ನು ಪರಾಂಬರಿಸಿ ಸಂತುಷ್ಟಚಿತ್ತರಾಗಿ ಅಧ್ಯಾಪಕರಿಗೆ ೨೫ ರೂಪಾಯಿ ಗಳನ್ನು, ವಿದ್ಯಾರ್ಥಿಗಳಿಗೆ ೧೦ ರೂಪಾಯಿಗಳನ್ನು ಆಶೀರ್ವದಿಸಿ, ಪಾಠಶಾಲೆಯ ವ್ಹಿಜಿಟರ್ಸ ಬುಕ್ಕಿನಲ್ಲಿ ಅಮೋಘವಾದ ತಮ್ಮ ಸದಭಿಪ್ರಾಯವನ್ನು ಸ್ವಹಸ್ತಾಕ್ಷರ ಗಳಿಂದ ಲಿಖಿಸಿ ಆಗಮಿಸಿದರು.

## ಶ್ರೀ ಜಗದ್ಗುರು ಪಂಚಾಚಾರ್ಯರ ಸಮ್ಮೇಲನ ಪ್ರಯತ್ನ
### ( ೧೯೧೮ ನೇ ಇಸ್ವಿಯಲ್ಲಿ )

ಶ್ರೀ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳವರು ಒಂದೊಂದೇ ಸಮಾಜ ಕಾರ್ಯಗಳನ್ನೂ, ಮಹತ್ಕಾರ್ಯಗಳನ್ನೂ ನೆರವೇರಿಸುತ್ತಿರಲು, ಮತ್ತೊಂದು ಘನ ವಾದ ಕಾರ್ಯದಾಲೋಚನೆಯನ್ನು ಮಾಡಿದರು. ಆ ಕಾರ್ಯಕ್ಕೆ ಯಾವ ಯಾವ ಸಂಗ್ರಹಬೇಕು ಎಂಬ ತರ್ಕ-ವಿತರ್ಕಗಳನ್ನು ಆತ್ಮದಲ್ಲಿಯೇ ವಿಮರ್ಶಮಾಡುತ್ತ ಒಮ್ಮೆ ಅನಾದರಭಾವವುಂಟಾಗುತ್ತಲೂ, ೪-೬ ದಿವಸಗಳ ನಂತರ ಪುನಃ ಉಲ್ಹಾಸ

ಗೊಂಡು, ಪ್ರಯತ್ನಮಾಡಿ ಆ ಕಾರ್ಯ ದಿಗ್ವಿಜಯ ಮಾಡಲೇಬೇಕೆಂತಲೂ ಮನಸ್ಸಂಕಲ್ಪ ಮಾಡುತ್ತಿದ್ದರು. ಅದಾವ ಮಹತ್ಕಾರ್ಯವೆಂದರೆ— ಕಾಶೀ ಕ್ಷೇತ್ರದಲ್ಲಿ "ಶ್ರೀ ಜಗದ್ಗುರು ಪಂಚಾಚಾರ್ಯ ಸಮ್ಮೇಲನ" ನಡೆಯಿಸಬೇಕೆಂಬುವದೇ ಮುಖ್ಯೋದ್ದೇಶವು.

ಈ ಪಂಚಾಚಾರ್ಯ ಮಹಾಸಮ್ಮೇಲನಕ್ಕೆ ಅಧಿಕ ಧನವ್ಯಯಮಾಡಬೇಕಾಗುವದೆಂತಲೂ, ಚತುರ್ದಿಕ್ಕುಗಳಲ್ಲಿರುವ ಬಹುದೂರ ದೂರ ಪ್ರದೇಶಗಳ ಒಬ್ಬೊಬ್ಬ ಪೀಠಾಧೀಶರನ್ನು ಏಕಕಾಲಕ್ಕೆ ಆಹ್ವಾನಿಸಿಕೊಳ್ಳುವದು, ಮಹತ್ಪ್ರಯಾಸವಾಗುವದೆಂತಲೂ ಪೂರ್ಣ ಅರಿತುಕೊಂಡರೂ ಎದೆಗುಂದಿ ಹಿಮ್ಮುಖರಾಗದೆ, ಈ ಮಹತ್ಕಾರ್ಯಕ್ಕೆ ಎಷ್ಟು ಖರ್ಚು-ವೆಚ್ಚಗಳು ಹಿಡಿದರೂ ಬಿಡಲಾಗದೆಂದು ದೃಢೀಕರಿಸಿ, ಮೊದಲು ಶ್ರೀ ಕಾಶೀಪೀಠದ ಜಗದ್ಗುರು ಶಿವಲಿಂಗಮಹಾಸ್ವಾಮಿಗಳವರಲ್ಲಿಗೆ ತಮ್ಮ ಸತ್ಸಂಕಲ್ಪಾದಿಗಳನ್ನೂ, ಸಮ್ಮೇಲನವು ಯಾವ ಮಿತಿಗೆ ನಡೆಯತಕ್ಕದೆಂಬುವದನ್ನೂ ಸವಿಸ್ತಾರವಾಗಿ ಪತ್ರದ್ವಾರ ಅರಿಕೆಮಾಡಿಕೊಂಡರು.

ಶ್ರೀ ಕಾಶೀ ಜಗದ್ಗುರುಗಳಾದರೂ ವಿದ್ಯಾವಂತರೂ, ತಪೋನಿಷ್ಠರೂ, ಕೇವಲ ಸಮಾಜಾಭಿಮಾನಿಗಳೂ ಮತ್ತು ವಯೋವೃದ್ಧರೂ, ಜ್ಞಾನವೃದ್ಧರೂ ಆಗಿದ್ದರಲ್ಲದೆ, ಕೆಲವುಕಾಲದಿಂದ ತಮ್ಮ ಜಂಗಮವಾಡೀ ಮಠದಲ್ಲಿ ದಕ್ಷಿಣ ಪ್ರಾಂತದಿಂದ ವಿದ್ಯಾಭ್ಯಾಸಕ್ಕೆ ತೆರಳಿದ ವಿದ್ಯಾರ್ಥಿಗಳಿಗೆ ಆಶ್ರಯವನ್ನು ಕೊಟ್ಟು, ಅಶನ-ವಸನಾದಿಗಳನ್ನೀಯುತ್ತ ಬಹು ಪ್ರೀತಿಯಿಂದ ವಿದ್ಯಾಭ್ಯಾಸ ಮಾಡಿಸಿ ಕಾಶಿ, ಕಲಕತ್ತಾ ಗವ್ಹರ್ನಮೆಂಟ ಯುನಿವ್ಹರ್ಸಿಟಿಯಲ್ಲಿ ಪರೀಕ್ಷೆಗೆ ಕೂಡ್ರಿಸಿ ಉತ್ತೀರ್ಣರಾದವರಿಗೆಲ್ಲಾ ಶುಭಾಶೀರ್ವಾದಮಾಡಿ ನಮ್ಮ ದೇಶಕ್ಕೆ ಎಷ್ಟೋ ಜನ ವಿದ್ಯಾವಂತರನ್ನು ಕಳುಹಿಸಿರುತ್ತಾರೆ. ಈ ಜಗದ್ಗುರುಗಳವರ ಕೃಪಾಪೋಷಿತರಾಗಿ ನ್ಯಾಯ, ವ್ಯಾಕರಣ, ವೇದಾಂತ, ಮೀಮಾಂಸಾದಿ ಶಾಸ್ತ್ರಸಂಘದಲ್ಲಿ ಘನವಾದ ಪಾಂಡಿತ್ಯವನ್ನು ಸಂಪಾದಿಸಿಕೊಂಡು ನಮ್ಮ ದೇಶಕ್ಕೆ ಬಂದವರಲ್ಲಿ ಕೆಲವರು ಶ್ರೀ ಜಗದ್ಗುರು ಪೀಠಾಲಂಕೃತರೂ, ಪಾಠಶಾಲಾಧ್ಯಾಪಕರೂ, ಧರ್ಮೋಪದೇಶಕರೂ, ಸಮಾಜ ಸುಧಾರಕರೂ ಆಗಿದ್ದಾರೆ.

( ಆ ವಿದ್ಯಾವಂತರ ಹೆಸರುಗಳನ್ನು ತಾ. ೯—೧೨—೧೯೩೬ ಇಸ್ವಿ, ಮೈಸೂರು ಪಂಚಾಚಾರ್ಯ ಪ್ರಭಾ ಪತ್ರಿಕೆಯಲ್ಲಿ ಅವಲೋಕನಮಾಡಬಹುದು. )

ಈ ಉಜ್ಜಯಿನೀ ಜಗದ್ಗುರುಗಳವರಿಂದ ಬಂದ ಪಂಚಾಚಾರ್ಯ ಮಹಾಸಮ್ಮೇಲನ ಪತ್ರಿಕೆಯನ್ನವಲೋಕನಮಾಡಿ, ಕಾಶೀ ಶ್ರೀ ಜಗದ್ಗುರುಗಳವರಿಗೆ ಪರಮಾನಂದವಾಯಿತು. ಇವರು ಸಹ ಇದೇ ವಿಚಾರದಲ್ಲಿ ಯೋಚನೆಮಾಡುತ್ತಿದ್ದರು. ಈ ಪತ್ರಿಕೆಯನ್ನು ನೋಡಿ ನೋಡಿ ಹರ್ಷಿತರಾಗಿ, ಆಹಾ! ಉಜ್ಜಯಿನೀ ಜಗದ್ಗುರುಗಳವರು ಪ್ರಯತ್ನಿಸಿರುವ ಘನವಾದ ಕಾರ್ಯಕ್ಕೆ ನಾವು ಪೂರ್ಣ ಮನಗೊಡಬೇಕು.

ಇಂತಹ ಸುಸಮಯದಲ್ಲಿ ಹಿಂಜರಿಯಲಾಗದು. "ನರಃ ಪತಿತ ಕಾಯೋಽಪಿ | ಯಶಃ ಕಾಯೇನ ಜೀವತಿ ||" ಎಂಬುಕ್ತಿಯಂತೆ ಈ ಕಾರ್ಯವನ್ನು ನಮ್ಮ ಕಾಲಮಾನದಲ್ಲಿ ನಡೆಯಿಸಿದರೆ ಮುಂದೆ ಚಿರಕಾಲ ಸ್ಮರಣೀಯವಾಗಿರುವದೆಂದು ಆ ಕೂಡಲೇ ಉಜ್ಜಯಿನೀ ಮಹಾಶ್ರೀಗಳವರಿಗೆ ಪತ್ರ ಮೂಲಕ ತಮ್ಮ ಸಂಕಲ್ಪದಂತೆ ಸಮಸ್ತ ವಿಧವಾದ ಸಹಾಯ ಸಂಗ್ರಹ ಸಿದ್ಧತೆಗಳನ್ನು ತಯ್ಯಾರಿಸಲು, ನಮಗೆ ಸಂಪೂರ್ಣ ಒಪ್ಪಿಗೆ ಇರುತ್ತದೆಂದು ಅರಿಕೆಮಾಡಿಕೊಂಡರು.

ಮಹಾ ಶ್ರೀಗಳವರು ಕಾಶಿಯಿಂದ ಬಂದ ಲೇಖನವನ್ನು ಅವಲೋಕನಮಾಡಿ ಪರಮೋತ್ಸುಕತೆಯಿಂದ ತಮ್ಮ ಸಂಸ್ಥಾನದ ಕಾರಭಾರಿ, ಎಜಂಟರು ಹಾಗು ಇನ್ನುಳಿದ ಸೇವಕರನ್ನು ಒಂದೊಂದು ಕೆಲಸ ಕಾರ್ಯಗಳ ನಡೆಯಿಸಲು ನಿಯಮಿಸಿದರು. ಇನ್ನುಳಿದ ರಂಭಾಪುರೀ ಪೀಠದ ಶ್ರೀ ಜಗದ್ಗುರು ಪಂಚಾಕ್ಷರ ಮಹಾಸ್ವಾಮಿಗಳವರಿಗೂ, ಶ್ರೀಶೈಲ ಪೀಠದ ಶ್ರೀ ಜಗದ್ಗುರು ನಾಗಲೂಟಿ ಭಿಕ್ಷಾವೃತ್ತಿ ಮಹಾಸ್ವಾಮಿಗಳವರಿಗೂ, ಕೇದಾರಪೀಠದ ಶ್ರೀಜಗದ್ಗುರು ವಿಶ್ವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರಿಗೂ ಪತ್ರಗಳ ಮೂಲಕ ಶ್ರೀ ಕಾಶೀ ಕ್ಷೇತ್ರದಲ್ಲಿ ತಾ. ೩೦-೩-೧೯೧೮ ದಿವಸ ಶ್ರೀ ಜಗದ್ಗುರು ಪಂಚಾಚಾರ್ಯ ಮಹಾಸಮ್ಮೇಲನವನ್ನು ಜರಗಿಸುವ ಏರ್ಪಾಡುಮಾಡಿದೆ. ತಾವುಗಳು ದಯವಿಟ್ಟು ಆ ಸಮ್ಮೇಲನಕ್ಕೆ ಆಗಮಿಸಬೇಕೆಂದು ಪ್ರಥಮ ಸೂಚನೆಯನ್ನು ಕೆಲವು ದಿವಸ ಮುಂಚಿತವಾಗಿ ಬಿನ್ನೈಸಿಕೊಂಡರು. ಈ ಶುಭ ಸಂದೇಶವನ್ನು. ಅವಲೋಕನಮಾಡಿ, ತ್ರಿಪೀಠದ ಮಹಾಶ್ರೀಗಳವರು ತುಂಬಾ ಹರುಷಗೊಂಡು ತಾವು ಕೈಕೊಂಡಿರುವ ಮಹಾಕಾರ್ಯಕ್ಕೆ ಅತ್ಯವಶ್ಯಕವಾಗಿ ನಾವು ದಯಮಾಡಿಸುವೆವೆಂದು ಅನುಮೋದನವನ್ನು ತಿಳಿಸಿದರು.

ತರುವಾಯ ೪-೮ ದಿವಸಗಳಲ್ಲಿ ಹಿಮವತ್ಕೇದಾರ ಸಿಂಹಾಸನದ ಶ್ರೀ ವಿಶ್ವಲಿಂಗ ಮಹಾಸ್ವಾಮಿಗಳವರಿಂದ– "ನಮಗೆ ಅತ್ಯವಶ್ಯವಾದ ಇಲ್ಲಿ ಕೆಲಸವಿದೆ. ಕಾಶೀ ಸಮ್ಮೇಲನಕ್ಕೆ ಹೊರಡಲು ಸಾಧ್ಯವಾಗುವದಿಲ್ಲ. ಇನ್ನುಳಿದ ಪೀಠಾಧೀಶರೊಡನೆ ಮಹಾಸಭಾ ಕಾರ್ಯವು ಸಾಂಗೋಪಾಂಗವಾಗಿ ನಡೆಯಲಿ; ಮತ್ತು ಈ ಮಹಾ ಸಮ್ಮೇಲನದಲ್ಲಿ ಪಾಸಾದ ಠರಾವುಗಳಿಗೆ ನಮ್ಮ ಸಮ್ಮತಿ ಕೊಟ್ಟಿದ್ದೇವೆ." ಎಂಬ ಅಭಿಪ್ರಾಯದ ಪತ್ರ ಬರೆದು ಬಂದಿತು. ಅಷ್ಟರಲ್ಲಿ ಇತ್ತಕಡೆ "ಶ್ರೇಯಾಂಸಿ ಬಹು ವಿಘ್ನಾನಿ" ಎಂಬಂತೆ ಇಂತಹ ಸುಸಂಧಿಯಲ್ಲಿ ಯಾರೋ ಒಬ್ಬ ದುರಾತ್ಮರು ಪೀಠಾಚಾರ್ಯರು ಒಬ್ಬರಿಗೊಬ್ಬರು ಕೂಡದಂತೆ ಮಾಡಬೇಕೆಂಬ ದುರುದ್ದೇಶದಿಂದ ಶ್ರೀ ಜಗದ್ಗುರು ರಂಭಾಪುರೀ ಮತ್ತು ಶ್ರೀಶೈಲ ಈ ಉಭಯ ಪೀಠಗಳ ಮಹಾಸ್ವಾಮಿಗಳವರಲ್ಲಿ ನಾರದಮುನಿಯಂತೆ ಕಲಹಾಂಕುರವನ್ನು ಬೆಳೆಯಿಸಿದ್ದರು. ಉಭಯ ಶ್ರೀಗಳವರು ಪರಸ್ಪರ ರೋಷಾನ್ವಿತರಾಗಿ ಕುಳಿತರು. ಈ ಸಮಾಚಾರವು ತಿಳಿದಕೂಡಲೇ ಉಜ್ಜಯಿನೀ ಮಹಾಶ್ರೀಗಳವರು ವ್ಯಾಕುಲರಾಗಿ ಆತಕ್ಷಣವೇ ಮೋಟಾರು ಕಾರಿನಲ್ಲಿ

ಉಭಯ ಜಗದ್ಗುರುಗಳವರಲ್ಲಿಗೆ ಸ್ವತಃ ಪ್ರಯಾಣಮಾಡಿ ಅವರವರ ವಾಙ್ಮೂಲಗಳನ್ನರಿತುಕೊಂಡು "ಪರರ ಮಾತಿಗೆ ತಾವು ಮನಗೊಡಲಾಗದು; ಪೀಠಾಚಾರ್ಯರಾದ ನಾವುಗಳು ಐಕ್ಯಮತ್ಯದಿಂದಿರುವುದೇ ಭೂಷಣ. ಸದ್ಯಃ ಸಮಾಜದೇಳ್ಗೆಗೆ ಸಾಧನವಾದ ಮುಖ್ಯ ಕೆಲಸಗಳು ಬಂಡೊದಗಿದ್ದಾವೆ. ಹಿಂದೆ ಸಾವಿರಾರು ವರುಷಗಳಿಂದ ಕೂಡದೆ, ಈ ವರೆಗೂ ಪೀಠಾಧೀಶರು ಅಶ್ರದ್ಧೆ, ಅನೈಕ್ಯತೆಯಿಂದಲೂ ಸ್ವಕಾರ್ಯಾಸಕ್ತರಾಗಿರುವದರಿಂದಲೂ (ಪರಸ್ಪರ) ಒಬ್ಬರಿಗೊಬ್ಬರ ದರ್ಶನ, ಸಂಭಾಷಣ, ಪೂರ್ವಾಪರ ಆಲೋಚನೆಗಳಿಲ್ಲದೆ ಹೋದುದರಿಂದಲೇ ನಮ್ಮ ಸಮಾಜದವರು ಸ್ವೇಚ್ಛಾವಿಹಾರಿಗಳಾಗಿ ಅನಧಿಕಾರಿಗಳ ಅಟ್ಟಹಾಸವು ನಡೆಯುತ್ತಿರುವದು." ಇತ್ಯಾದ್ಯನೇಕ ವಿಷಯಗಳನ್ನು ಅಂತರಂಗದಲ್ಲಿ ವಿನಯದಿಂದಲೇ ಅವರವರಿಗೆ ಅರಿಕೆಮಾಡಿಕೊಂಡು ಸಮಾಧಾನದಿಂದ ಒಡಂಬಡಿಸಿ, ಏಕಕಾಲಕ್ಕೆ ತ್ರಿಪೀಠಾಧೀಶ್ವರರು ಗುಂತಕಲ್ಲು (ರೈಲ್ವೆ ಜಂಕ್ಸನ್) ಗ್ರಾಮಕ್ಕೆ ಆಗಮಿಸಿದರು.

ಈ ತ್ರಿಪೀಠಾಧಿಪರ ಸಿಬ್ಬಂದಿ ಜನರೂ, ಆನೆ-ಕುದುರೆ ಮುಂತಾದವುಗಳೆಲ್ಲಾ ಕೂಡಿ ಒಂದೇಸಾರೆಗೆ ಹೋಗುವದಕ್ಕೆ ಸ್ಪೆಶಲ್ ಒಂದು ರೈಲ ಎಂಜಿನ್ ಹಾಗೂ ಕೆಲವು ಡಬ್ಬಿಗಳು ಸಹಿತ ಪ್ರತ್ಯೇಕ ಐದಾರುನೂರು ರೂಪಾಯಿ ಚಾರ್ಜು ಗೊತ್ತು ಮಾಡಿಕೊಂಡು ಸರ್ವರೂ ಹೊರಟು ಗುಂತಕಲ್ಲಿನಿಂದ ಕಾಶೀಕ್ಷೇತ್ರಕ್ಕೆ ಪ್ರಯಾಣ ಬೆಳೆಯಿಸಿದರು.

## ಶ್ರೀ ಕಾಶೀಕ್ಷೇತ್ರದಲ್ಲಿ ಜಗದ್ಗುರುಗಳವರ ಅಭೂತಪೂರ್ವ ಮಹೋತ್ಸವವು

ಅಷ್ಟರೊಳಗೆ ಕಾಶೀಪೀಠದ ಜಗದ್ಗುರುಗಳವರು ಪರಮೋತ್ಸುಕತೆಯಿಂದ ಆ ವಾರಣಸೀ ಪಟ್ಟಣದ ರಾಜಬೀದಿಗಳನ್ನೂ, ಸಭಾಮಂಟಪ-ಮಹಾದ್ವಾರ ಮೊದಲಾದವುಗಳನ್ನೂ ನಾನಾವಿಧವಾದ ಚಿತ್ರ-ವಿಚಿತ್ರ ವಸ್ತುಗಳಿಂದ ಪ್ರೇಕ್ಷಕರ ಮನಾನಂದವಾಗುವಂತೆ ಶೃಂಗಾರಮಾಡಿಸಿದ್ದರು.

ಈ ಮೊದಲೇ ಪ್ರಸಿದ್ಧಪಡಿಸಿದಂತೆ ಭೂಕೈಲಾಸವೆನಿಸಿದ ಕಾಶೀನಗರಕ್ಕೆ ಬಹು ದೂರ ದೂರ ದೇಶಾಂತರಗಳಿಂದ ಅಸಂಖ್ಯಾತ ಜನಸಂದೋಹವು ಬಂದು ಸೇರಿತು. ಕಾಶೀ ಜಗದ್ಗುರುಗಳವರು ತ್ರಿಪೀಠಾಧೀಶ್ವರರನ್ನು ಅತ್ಯಾದರಪೂರ್ವಕ ಎದುರ್ಗೊಂಡು ಆಂದೋಲಿಕಾತ್ರಯದಲ್ಲಿ ಮೂರ್ತಗೊಳಿಸಿ ತಾವೊಂದು ಆಂದೋಲಿಕಾರೋಹಣ ಮಾಡಿದರು.

ದೇಶ-ವಿದೇಶೀ ವಾದ್ಯ ಧ್ವನಿಯಿಂದಲೂ, ವಿದ್ಯಾರ್ಥಿಗಳ ವೇದಘೋಷಣೆಯಿಂದಲೂ, ಸಕಲ ಬಿರುದಾವಳಿಯಿಂದಲೂ ಮಹೋತ್ಸವವು ಹೊರಟು ರಾಜಬೀದಿಗಳಲ್ಲಿಯೂ ಇನ್ನುಳಿದ ಮುಖ್ಯ ರೋಡುಗಳಲ್ಲಿಯೂ ಮಂದಗಮನದಿಂದ ಸಾಗುತ್ತ ಅಪಾರವಾದ ಮಹಾಸಾಗರದಂತೆ ಲಕ್ಷಾಂತರ ಜನತಿಂಥಿಣಿಯಿಂದ ತುಂಬಿ ತುಳುಕುತ್ತ

ಶ್ರೀ ಜ. ವಿಶ್ವಾರಾಧ್ಯರ ಮಹಾಸಂಸ್ಥಾನವಲ್ಲಿ ಅಲಂಕರಿಸಲ್ಪಟ್ಟ ಸುಂದರ ಸಭಾ ಮಂಟಪಕ್ಕೆ ಮಹೋತ್ಸವವು ಬಂದು ತಲ್ಪಿತು.

ಗುರುಸಾರ್ವಭೌಮರಾದ ಚತುಃಪೀಠಾಧೀಶರು ತಮ್ಮ ತಮ್ಮ ಸಿಂಹಾಸನಗಳಲ್ಲಿ ಮೂರ್ತಮಾಡಿದರು. ತರುವಾಯ ಮಹಾಪಂಡಿತರ ಭಾಷಣಗಳೂ, ಕಾಶೀ ಜಗದ್ಗುರುಗಳವರ ಆನಂದಪೂರಿತ ಭಾಷಣವೂ ಜರಗಿದನಂತರ ಶ್ರೀ ಜಗದ್ಗುರು ಪಂಚಾಚಾರ್ಯರ ಜಯಧ್ಯಾನದಿಂದ ಸಭಾ ಮುಕ್ತಾಯವಾಯಿತು.

ವಾಚಕಮಹಾಶಯರೇ, ಅಂದಿನ ಮಹೋತ್ಸವವನ್ನೂ, ಆನಂದೋಲ್ಲಾಸಗಳನ್ನೂ ಎಷ್ಟು ಬಣ್ಣಿಸಿದರೂ ಸಾಲದು. ಆ ವೈಭವವನ್ನು ಪ್ರತ್ಯಕ್ಷ ನೇತ್ರಗಳಿಂದ ನೋಡಿದವರೇ ಧನ್ಯಜೀವಿಗಳು. ಆ ಲಕ್ಷಾಂತ ಜನರಲ್ಲಿ ಪ್ರತಿಯೊಬ್ಬನೂ ಆಹಾ! ಮಹಾನುಭಾವರಾದ ಶ್ರೀಮದುಜ್ಜಯಿನೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಶಿವಯೋಗಿಗಳವರ ಪ್ರಯತ್ನದಿಂದ ಈ ಪಂಚಾಚಾರ್ಯ ಗುರುಸಾರ್ವಭೌಮರ ಪಾದಾರವಿಂದಗಳನ್ನು ದರ್ಶನಮಾಡಿಕೊಂಡೆವು! ಇಂದಿಗೆ ನಮ್ಮ ಜನ್ಮ ಸಾರ್ಥಕವಾಯಿತೆಂದು ಕೊಂಡಾಡುತ್ತಿದ್ದರು. ಮತ್ತು ಶ್ರೀ ಪಂಚಾಚಾರ್ಯರ ಜಯಘೋಷಗಳೂ, ಧ್ಯಾನ-ಸ್ತೋತ್ರಾದಿಗಳೇ ನಡೆದು ಆ ಮಹಾಸಭಾ ಮಂಟಪವು ಸಾಕ್ಷಾತ್ ಕೈಲಾಸದಲ್ಲಿ ಪರಶಿವನೊಡ್ಡೋಲಗದಂತೆ ದಿವ್ಯ ತೇಜೋಮಯವಾಗಿ ಶೋಭಿಸಿತು.

ತರುವಾಯ ಆಸ್ಥಾನಪಂಡಿತರಾದ ವೇ|| ಫಾಲಾಕ್ಷಶಾಸ್ತ್ರಿಗಳು ಮೊದಲಾದವರ ಭಾಷಣಗಳೂ, ಕಾಶೀ ವಿದ್ವನ್ಮಂಡಳಿಯವರ ಧರ್ಮೋಪನ್ಯಾಸಗಳೂ ಹಾಗೂ ಶ್ರೀ ಜಗದ್ಗುರುಗಳವರ ಬಹು ಸಾರಯುಕ್ತವಾದ ಅಮೋಘ ಭಾಷಣಗಳು ನಡೆದ ಬಳಿಕ ಆ ದಿನದ ಕಾರ್ಯಕ್ರಮಗಳು ಪೂರೈಸಿದವು.

ಪ್ರತಿದಿವಸ ಉದಯ ೧೧ ಗಂಟೆಯ ವರೆಗೂ ಮಧ್ಯಾಹ್ನ ೬ ಗಂಟೆಯವರೆಗೂ ಅನೇಕವಿಧವಾದ ಸಮಾಜಸುಧಾರಣೆಯ ಧರ್ಮೋಪನ್ಯಾಸಗಳೂ, ಶಿವಕೀರ್ತನಗಳೂ ಸಂಗೀತ ಕಚೇರಿಗಳೂ ೨-೩ ದಿವಸಗಳ ವರೆಗೂ ಆನಂದದಿಂದ ಜರಗುತ್ತಾ ಇದ್ದು ಪಂಚಪೀಠಗಳ ಸುವ್ಯವಸ್ಥೆ, ಗುರುವರ್ಗದ ಪಟ್ಟ-ಚರಾಧಿಕಾರಿಗಳ ಸಮ್ಮೇಳನಗಳ ಅವಶ್ಯಕತೆ, ಮಠಾಧಿಕಾರಿಗಳ ಸುಧಾರಣೆ, ಐಕ್ಯಮತ್ಯ, ಸಮಾಜದಲ್ಲಿ ಧರ್ಮಜಾಗ್ರತೆಯ ಉಪಾಯ ಇತ್ಯಾದಿ ಮುಖ್ಯ ವಿಷಯಗಳ ವಿಮರ್ಶೆಗಳು ನಡೆದಬಳಿಕ ಮಹಾಸಮ್ಮೇಲನದಲ್ಲಿ ತಾ. ೨೧-೩-೧೯೧೮ನೆಯ ದಿವಸ ಕೆಳಗೆ ಕಾಣಿಸಿದ ಮಹತ್ವವಾದ ಠರಾವುಗಳು ಸಮಸ್ತ ಜನರ ಸಮ್ಮತಿಯಿಂದ ಪಾಸಾದವು.

## ಶ್ರೀ ಕಾಶೀಕ್ಷೇತ್ರದಲ್ಲಿ ನೆರೆದ ಪಂಚಾಚಾರ್ಯ ಮಹಾಸಮ್ಮೇಳನ

ಯುಗಯುಗಾದಿಗಳಲ್ಲಿ ವೀರಶೈವ ಮತಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾ

ರಾಧ್ಯ, ವಿಶ್ವಾರಾಧ್ಯ ಶಿವಾಚಾರ್ಯರು ಆಸ್ಸೇತುಹಿಮಾಚಲ ಪರ್ಯಂತರವಾಗಿ ವೀರಶೈವ ಮತರಾಜ್ಯವನ್ನು ಸ್ಥಾಪಿಸಿ ಪರಮತ ಖಂಡನಪೂರ್ವಕ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಬೋಧಿಸಿ, ಮೋಕ್ಷಮಾರ್ಗಕ್ಕೆ ಹಚ್ಚಿ ತಾವು ಸ್ಥಾಪಿಸಿದ ವೀರಶೈವ ಮತ ಸುರಾಜ್ಯಪಾಲನವು ನಿಬಂಧನಪೂರ್ವಕ ಚಿರಕಾಲ ನಡೆಯಬೇಕೆಂದು ತಮ್ಮ ಶಿಷ್ಯ-ಪ್ರಶಿಷ್ಯರಿಗೆ ತಮ್ಮ ನೇಮುಗಳನ್ನು ಯಥಾಪ್ರಕಾರ ಬೋಧಿಸಿ ತಾವು ಪ್ರಾದುರ್ಭವಿಸಿದ ಕೊಲ್ಲಿಪಾಕಿ ಸೋಮೇಶ್ವರಲಿಂಗ, ವಟಕ್ಷೇತ್ರ ಸಿದ್ಧೇಶ್ವರಲಿಂಗ, ದ್ರಾಕ್ಷಾರಾಮ ರಾಮನಾಥಲಿಂಗ, ಸುಧಾಕುಂಡ ಮಲ್ಲಿಕಾರ್ಜುನಲಿಂಗ, ಕಾಶೀ ವಿಶ್ವನಾಥಲಿಂಗಗಳಲ್ಲಿ ಐಕ್ಯರಾದ ಸಂಗತಿಯು ಆಗಮಾದಿ ಗ್ರಂಥಗಳಿಂದ ಹೇಳಲ್ಪಟ್ಟು ಸುಪ್ರಸಿದ್ಧವಾಗಿಯೇ ಇರುವದು. ಆದರೆ ಆ ನಿಯಮಗಳು ಕಾಲಾನುಗುಣವಾಗಿ ಸಿಥಿಲಗಳಾಗಿರೋಣದರಿಂದ ಶ್ರೀಮಜ್ಜಗದ್ಗುರು ಪಂಚಸಿಂಹಾಸನಾಧೀಶ್ವರರು ಶ್ರೀಕ್ಷೇತ್ರ ಕಾಶಿಯಲ್ಲಿ ಏಕತ್ರಕೂಡಿ ಕೆಲವು ನಿಯಮಗಳನ್ನು ಜಾರಿಯಲ್ಲಿ ತರುವವಕ್ಕೋಸ್ಕರ ನಿರ್ಧರಿಸಿದ್ದೇವೆ. ಈ ಮಹಾಸಭೆಗೆ ಶ್ರೀಮಜ್ಜಗದ್ಗುರು ಏಕೋರಾಮ ಪೀಠಾಧೀಶ್ವರರಾದ ವಿಶ್ವಲಿಂಗ ಶಿವಾಚಾರ್ಯರು ತಮ್ಮ ಸಂಸ್ಥಾನದ ಕಾರ್ಯಬಾಹುಲ್ಯದಿಂದ ದಯಮಾಡಿಸುವದಾಗದ್ದರಿಂದ ಈ ಮಹಾಸಭೆಯಲ್ಲಿ ಪಾಸಾಗತಕ್ಕ ಠರಾವುಗಳಿಗೆ ಅನುಮತಿಯನ್ನು ಕೊಟ್ಟಿದ್ದಾರೆ.

**ಠರಾವುಗಳು —**

೧. ಪ್ರತ್ಯೇಕ ನಗರ-ಗ್ರಾಮಗಳಲ್ಲಿ ನಡೆಯತಕ್ಕ ಲಿಂಗಧಾರಣ, ದೀಕ್ಷಾ, ವಿವಾಹಾದಿ ಕಾರ್ಯಗಳನ್ನು ಸಶಾಸ್ತ್ರವಾಗಿ ಶ್ರೀಮಜ್ಜಗದ್ಗುರು ಪಂಚಾಚಾರ್ಯರ ಸಾಕ್ಷಿಭೂತಗಳಾದ ಪಂಚಕಲಶಗಳ ಸ್ಥಾಪನಪೂರ್ವಕ ಎಲ್ಲಾ ಕಾರ್ಯಗಳನ್ನು ನಡೆಯಿಸುವವಕ್ಕಾಗಿ ತಮ್ಮ ಶಿಷ್ಯರಾದ ಮಠಾಚಾರ್ಯ, ಗಣಾಚಾರ್ಯ, ಮಠಪತ್ತಿ. ಕುಮಾರ, ಸ್ಥಾವರರೆಂಬ ಐದುಮಂದಿ ಉಪಾಚಾರ್ಯರನ್ನು ನೇಮಿಸಿರುವರು. ಪಂಚ ಉಪಾಚಾರ್ಯರು ಲಿಂಗಧಾರಣ, ದೀಕ್ಷಾ; ವಿವಾಹ ಮೊದಲಾದ ಕಾರ್ಯಗಳಲ್ಲಿ ಪಂಚಕಲಶಗಳನ್ನು ಸ್ಥಾಪಿಸಿ ಯಜಮಾನನ ಯೋಗ್ಯತಾನುಸಾರವಾಗಿ ಕಾಣಿಕೆಗಳನ್ನು ಇಡಿಸಿ, ಅದರಲ್ಲಿ ಮೂರುಭಾಗಗಳನ್ನು ಮಾಡಿ ಒಂದು ಭಾಗವನ್ನು ಐದು ಮಂದಿ ಉಪಾಚಾರ್ಯರು ತೆಗೆದುಕೊಂಡು, ಎರಡು ಭಾಗಗಳನ್ನು ಮಹಾಚಾರ್ಯರಿಗೆ ಕಳುಹಿಸಿಕೊಡತಕ್ಕದ್ದು. ಮತ್ತು ವಿವಾಹ, ದೀಕ್ಷಾ ಕಾರ್ಯಗಳಲ್ಲಿ ಶ್ರೀಮಜ್ಜಗದ್ಗುರು ಪಂಚಾಚಾರ್ಯರ ಸಮ್ಮೇಲನ ಸ್ಮಾರಕವಾಗಿ ಕಾಶಿಯಲ್ಲಿ ಸ್ಥಾಪಿತವಾದ ಗುರುಕುಲಕ್ಕೆ ಯಜಮಾನನ ಯೋಗ್ಯತಾನುಸಾರವಾಗಿ ದ್ರವ್ಯವನ್ನು ಒಪ್ಪಿಸತಕ್ಕದ್ದು. ಉಪಾಚಾರ್ಯರ ಕರ್ತವ್ಯಕರ್ಮದ ಬಗ್ಗೆ ಮುಂದಿನ ಮಹಾಸಭೆಯಲ್ಲಿ ನಿರ್ಣಯಿಸಲ್ಪಡುವದು.

೨. ಶ್ರೀಮಜ್ಜಗದ್ಗುರು ಪಂಚಾಚಾರ್ಯರಿಂದ ಪಟ್ಟ ಚರಮೂರ್ತಿಗಳಿಗೆ ಆಯಾಯ ಗ್ರಾಮಗಳ ಧರ್ಮಸಂಬಂಧಿ ಸೂಕ್ಷ್ಮ ನ್ಯಾಯಗಳನ್ನು ತೀರಿಸುವದಕ್ಕೋ

ಸ್ಕರ ವಿಶೇಷ ಅಧಿಕಾರವು ಧರ್ಮಶಾಸ್ತ್ರಜ್ಞರಾದವರಿಗೆ ಕೊಡತಕ್ಕದ್ದು ಎಂದು ನಿರ್ಣಯಿಸಲ್ಪಟ್ಟಿರುತ್ತದೆ. ವಿಶೇಷ ಹುಕುಮನ್ನು ಪಡೆದ ಪಟ್ಟಚರಮೂರ್ತಿಗಳು ಆಯಾ ಗ್ರಾಮದ ಪ್ರಮುಖರಾದ ಶೆಟ್ಟಿ ಮೊದಲಾದ ಪಂಚರಿಂದ ಕೂಡಿ ನ್ಯಾಯಗಳನ್ನು ವಿಚಾರಿಸಿ ಆ ವಿಚಾರಣೆಯ ಒಂದು ರಿಕಾರ್ಡನ್ನು ತಮ್ಮ ಹತ್ತರ ಇಟ್ಟುಕೊಂಡು, ನ್ಯಾಯದ ತೀರ್ಮಾನುಗಳನ್ನು ಪಂಚಸಿಂಹಾಸನಾಧಿಪತಿಗಳಿಗೆ ಕಳುಹಿಸಿಕೊಡಬೇಕೆಂದು ನಿರ್ಧರಿಸಲ್ಪಟ್ಟಿರುತ್ತದೆ.

೩. ಶೆಟ್ಟಿ ಮೊದಲಾದ ಪಂಚರಿಗೆ ಅಧಿಕಾರವನ್ನು ಪೂರ್ವಸಾಂಪ್ರದಾಯಕ್ಕನುಸರಿಸಿ ವಿಚಾರಪೂರ್ವಕ ಕೊಡತಕ್ಕದ್ದೆಂದು ನಿರ್ಧರಿಸಲ್ಪಟ್ಟಿರುತ್ತದೆ. ಗುರುಸ್ಥಲ ವಂಶೋದ್ಭವರಾದ ಧರ್ಮಶಾಸ್ತ್ರವನ್ನು ಬಲ್ಲಂಥ ಹಾಗೂ ಶಿಷ್ಯರನ್ನು ಸರ್ವರೀತಿಯಿಂದ ರಕ್ಷಣೆಮಾಡಲು ಸಮರ್ಥರಿದ್ದಂಥ ವಟುಗಳಿಗೆ ಆಯಾಯ ಮಠಗಳ ರೂಢಿಗನುಸರಿಸಿ ತತ್ತಚ್ಛಾಖೆಯ ಸಿಂಹಾಸನಾಧಿಪತಿಗಳ ಅಪ್ಪಣೆಯಮೇರೆಗೆ ಪಟ್ಟಚರಾಧಿಕಾರಗಳನ್ನು ಕೊಡತಕ್ಕದ್ದೆಂದು ನಿರ್ಧರಿಸಲ್ಪಟ್ಟಿರುತ್ತದೆ.

೪. ಯಾವದೊಂದು ಅಧಿಕಾರವಿಲ್ಲದೆ ಸಿಂಹಾಸನದ ಹೆಸರು ಹೇಳಿ ಸಂಚರಿಸುವ ಡಾಂಭಿಕರನ್ನೂ ಮತ್ತು ಶಿಷ್ಯರನ್ನು ಮೋಸಮಾಡಿ ಹಣ ವಸೂಲುಮಾಡುತ್ತಿರುವ ಕಾದಲೂರು ವೀರಭದ್ರಯ್ಯನೆಂಬುವನು ಪರ್ವತ ಸಿಂಹಾಸನದ ಚರಮೂರ್ತಿಯೆಂತಲೂ, ನಿಂಬಲಗೇರಿಮಠದ ಜೂರಿ ವಿರೂಪಾಕ್ಷಯ್ಯನೆಂಬುವನು ಉಜ್ಜಯಿನೀ ಸಿಂಹಾಸನದ ಪಟ್ಟದ ಚಿನ್ನವೀರಸ್ವಾಮಿಯೆಂತಲೂ, ನಾಗಲಿಂಗಯ್ಯ ಪಾಂಡೇಕರ ಇವರೇ ಮೊದಲಾದವಡುಗಳಿಗೆ ವೀರಶೈವ ಮಂಡಲಿಯವರು ಯಾವ ಸನ್ಮಾನಗಳನ್ನೂ ಮಾಡದೆ ನಿರ್ಬಂಧಿಸಬೇಕೆಂದು ಠರಾಯಿಸಿರುತ್ತದೆ.

೫. ನಮ್ಮ ಸಮಾಜದ ಶಿಷ್ಯಮಂಡಲಿಯಲ್ಲಿ ಅನೇಕ ಪಂಗಡಗಳಿದ್ದು ತಮ್ಮತಮ್ಮೊಳಗೆ ವೈರಭಾವಗಳನ್ನುಂಟುಮಾಡಿಕೊಳ್ಳದೆ ಸರ್ವರೂ ಸಹೋದರಭಾವದಿಂದ ವರ್ತಿಸಬೇಕೆಂದು ನಿರ್ಧರಿಸಲ್ಪಟ್ಟಿರುತ್ತದೆ.

೬. ಪಂಚಾಚಾರ್ಯರ ಹೆಸರಿನಿಂದ ಸ್ಥಾಪಿಸಲ್ಪಡುವ ಫಂಡಿನ ವಿಷಯವಾಗಿಯೂ ಅದರ ನಿಬಂಧನ ವಿಷಯವಾಗಿಯೂ ಮುಂದಿನ ಮಹಾಸಭೆಯಲ್ಲಿ ನಿರ್ಧರಿಸಲ್ಪಡುತ್ತದೆ.

೭. ಶ್ರೀಕ್ಷೇತ್ರ ಕಾಶಿಯಲ್ಲಿ ಸ್ಥಾಪಿಸಲ್ಪಟ್ಟ ಹಿಂದೂ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ-ಇಂಗ್ಲೀಷ ಮೊದಲಾದ ಅಭ್ಯಾಸಮಾಡತಕ್ಕ ವೀರಶೈವ ವಿದ್ಯಾರ್ಥಿಗಳಿಗೆ ವಿದ್ಯಾ ಧರ್ಮೋನ್ನತಿಗಾಗಿ ಶ್ರೀ ಕಾಶಿಯಲ್ಲಿ ಜಗದ್ಗುರು ಪಂಚಾಚಾರ್ಯ ಸಮ್ಮೇಲನ ಸ್ಮಾರಕ "ಗುರುಕುಲ" ಸ್ಥಾಪಿಸಲ್ಪಟ್ಟಿರುತ್ತದೆ. ಅದಕ್ಕೆ ಸರ್ವರೂ ಸಹಾಯ ಮಾಡಬೇಕೆಂದು ನಿರ್ಧರಿಸಿರುತ್ತದೆ.

ಶ್ರೀ ಕಾಶೀ ಕ್ಷೇತ್ರದಲ್ಲಿ ಸಮ್ಮಿಲಿತರಾದ ಜ. ಪೀಠಾಧೀಶ್ವರರು



ಉ. ಸಿದ್ಧಲಿಂಗಸ್ವಾಮಿಗಳು    ಬಾ. ಪಂಚಾಕ್ಷರಸ್ವಾಮಿಗಳು    ಶ್ರೀಶೈಲ ನಾಗಲೋಟಿ ಸ್ವಾಮಿಗಳು    ಕಾಶಿ ಶಿವಲಿಂಗಸ್ವಾಮಿಗಳು

೮. ಈವರ್ಷನೆರವೇರಿದ ಶ್ರೀಮಜ್ಜಗದ್ಗುರು ಪಂಚಾಚಾರ್ಯ ಈ ಮಹಾಸಭೆಯಲ್ಲಿ ಈ ಮತದ ಪಂಡಿತರ ಯೋಗ್ಯತಾನುಸಾರವಾಗಿ ಪದವಿಗಳನ್ನು ಕೊಟ್ಟಂತೆ ಮುಂದಿನ ಮಹಾಸಭೆಯಲ್ಲಾದರೂ ಕೊಡತಕ್ಕದ್ದೆಂದು ನಿರ್ಧರಿಸಿರುತ್ತದೆ.

೯. ಶ್ರೀಮಜ್ಜಗದ್ಗುರು ಪಂಚಾಚಾರ್ಯ ಮಹಾ ಸಭೆಯು ಪ್ರತಿವರುಷ ಅವಿಚ್ಛಿನ್ನವಾಗಿ ನಡೆಯುವ ವ್ಯವಸ್ಥೆಯ ಬಗ್ಗೆ ಮುಂದಿನ ಮಹಾಸಭೆಯಲ್ಲಿ ನಿರ್ಣಯಿಸಲ್ಪಡುವದು.

೧೦. ವೀರಶೈವ ಮತದ ಗ್ರಂಥಾಲಯಗಳನ್ನು ಪಂಚಪೀಠಗಳಲ್ಲಿ ಸ್ಥಾಪಿಸಿ ಒಂದೊಂದು ಗ್ರಂಥಾಲಯದಲ್ಲಿ ಇಬ್ಬರು ಪಂಡಿತರನ್ನು ಗ್ರಂಥಶೋಧನ ಕಾರ್ಯಕ್ಕೆ ನಿಯಮಿಸಬೇಕೆಂದು ನಿರ್ಧರಿಸಿರುತ್ತದೆ.

೧೧. ಕಾಶೀಕ್ಷೇತ್ರದಲ್ಲಿ ಶ್ರೀಮಜ್ಜಗದ್ಗುರು ಪಂಚಾಚಾರ್ಯ ಮುದ್ರಣಾಲಯವನ್ನು ಸ್ಥಾಪಿಸಬೇಕೆಂದು ನಿರ್ಧರಿಸಲ್ಪಟ್ಟಿರುತ್ತದೆ.

೧೨. ಪಂಚಾಚಾರ್ಯ ಪೀಠಗಳಲ್ಲಿ ಪಟ್ಟಚರಾಧಿಕಾರಿಗಳು ಪೂರ್ವಸಾಂಪ್ರದಾಯದಿಂದ ನಡೆದುಬಂದಿರುತ್ತವೆ. ಈ ಕಾಲದಲ್ಲಿ ಉಭಯ ಅಧಿಕಾರಿಗಳೂ ಕೂಡಿ ಇದ್ದರೆ ಪರಸ್ಪರ ಸಹಾನುಭೂತಿಯಿಂದ ಇರುವದಿಲ್ಲಾದಕಾರಣ ಒಬ್ಬರೇ ಅಧಿಕಾರಿಗಳು ಇರತಕ್ಕದ್ದೆಂದು ನಿರ್ಧರಿಸಿರುತ್ತದೆ.

೧೩. ದೇಶಕಾಲಾನುಗುಣವಾಗಿ ಕೆಲಕೆಲವು ನಿಯಮಗಳನ್ನು ಹೆಚ್ಚುಕಡಿಮೆ ಮಾಡಿ ಸುಧಾರಿಸುವದರಲ್ಲಿ ಬರುವದೆಂದು ನಿರ್ಧರಿಸಲ್ಪಟ್ಟಿರುತ್ತದೆ.

## ಶ್ರೀಗಳವರ ಸಹಿಗಳು, ಅವರವರ ಮೋಹರುಗಳು

ಶ್ರೀಮತ್ಪಂಚಾಕ್ಷರೀರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು, ಬಾಳಿಹಳ್ಳಿ ವೀರಸಿಂಹಾಸನ ಮಠ.

ತಾ. ೨೧-೩-೧೯೧೮.

ಶ್ರೀ
ರಂಭಾ
ಪುರೀಶ

ಶ್ರೀಮಜ್ಜಗದ್ಗುರೂಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ, ಶ್ರೀ ಸಿದ್ಧಲಿಂಗರಾಜ ದೇಶಿಕೇಂದ್ರ ಮಹಾಸ್ವಾಮಿನಃ

ತಾ. ೨೧-೩-೧೯೧೮.

ಶ್ರೀ ಮರು
ಳಾರ್ಾಧ್ಯ

ಶ್ರೀಮಜ್ಜಗದ್ಗುರು ವಿಶ್ವಾರಾಧ್ಯ ಸಿಂಹಾಸನ ಶ್ರೀ ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿನಃ, ಶ್ರೀ ಕ್ಷೇತ್ರ ಕಾಶೀ. (ಇದು ಬಾಲಬೋಧೆಯಿಂದ ಅದೆ)

ತಾ. ೨೧-೩-೧೯೧೮.

ಶ್ರೀ ವಿಶ್ವಾರಾಧ್ಯ ಸಿಂಹಾಸನಾಧೀಶಃ ಶ್ರೀ ಕ್ಷೇತ್ರ ಕಾಶೀ ಜಂಗಮವಾಡೀ ಮಠ

ಶ್ರೀಮಜ್ಜಗದ್ಗುರು ಶ್ರೀಶೈಲ ಸಿಂಹಾಸನಾಧೀಶ್ವರ, ಶ್ರೀಮತ್ಪಟ್ಟಾಧ್ಯಕ್ಷ, ನಾಗಲೂಟಿ ಭಿಕ್ಷಾವರ್ತಿ ರಾಜ ದೇಶಿಕೇಂದ್ರ ಮಹಾಸ್ವಾಮಿನಃ

ತಾ: ೨೧-೩-೧೯೧೮.

ಶ್ರೀ ಗಿರಿರಾಜ ಸೂರ್ಯ ಸಿಂಹಾಸನ ಮಠಾಧ್ಯಕ್ಷಃ

ಈ ಠರಾವುಗಳು ಮುದ್ರಿಸಿ, ಪ್ರಸಿದ್ಧಮಾಡಲ್ಪಟ್ಟವೆ.

ಈ ಪ್ರಕಾರ ಶ್ರೀ ಜಗದ್ಗುರು ಪಂಚಾ| ಮಹಾಸಮ್ಮೇಲನ ಕಾರ್ಯವು ಸುಲಲಿತ ವಾಗಿಯೂ, ನಿರ್ವಿಘ್ನವಾಗಿಯೂ, ಸರ್ವೋತ್ತಮ ರೀತಿಯಿಂದ ಯಶಸ್ವಿಯಾಗಿ ಕೊನೆಗಂಡಿತು. ಆ ಮಹಾ ಪುಣ್ಯ ಕ್ಷೇತ್ರದಲ್ಲಿ ಚತುಃಪೀಠದ ಜಗದ್ಗುರುಗಳವರು ಸಮ್ಮಿಳಿತರಾಗಿ, ಪರಸ್ಪರ ಐಕ್ಯಮತ್ಯದಿಂದಲೂ, ಅತ್ಯಂತ ಪ್ರೇಮದಿಂದಲೂ ಇದ್ದು. ಮಹಾಪೂಜಾ, ವಂದನ (ಸಂಮಿಶ್ರಾದಿ) ಗಳನ್ನು ಜರಗಿಸುತ್ತ ಪರಮಾನಂದತುಂದಿಲ ಮಾನಸರಾಗಿ ಕೆಲವು ದಿವಸ (೧-೨ ತಿಂ.) ವರೆಗೆ ಮುಕ್ಕಾಂ ಮಾಡಿದ್ದರು. ಇಂತಹ ಮಹತ್ಕಾರ್ಯವನ್ನು ಅವಿಶ್ರಾಂತ ಶ್ರಮಪಟ್ಟು ಜ ರ ಗಿ ಸಿ , ಜಗದ್ವಿಖ್ಯಾತವಾದ ಸತ್ಕೀರ್ತಿಯಂ ಪಡೆದ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳವ ರಿಗೆ ಸಮಸ್ತ ವೀರಶೈವ ಜನಾಂಗವು ಅನಂತ ಧನ್ಯವಾದಗಳನ್ನರ್ಪಿಸಿತು.

ಕಾಶೀ ಪೀಠದ ಜಗದ್ಗುರು ಶ್ರೀ ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ವರು ಈ ಪ್ರಾಂತದಿಂದ ದಯಮಾಡಿಸಿದ ತ್ರಿಪೀಠದ ಜಗದ್ಗುರುಗಳವರಿಗೆ ಆದರಾ ತಿಥ್ಯಗಳನ್ನು ಮಾಡುತ್ತ ಉತ್ತಮೋತ್ತಮವಾದ ವಸ್ತ್ರಾಭರಣಗಳನ್ನು ಆಹೇರಮಾಡಿ ಸಂತೈಸಿದರು. ಬಳಿಕ ತ್ರಿಪೀಠಾಧೀಶ್ವರರು ತಮ್ಮ ತಮ್ಮ- ರಂಭಾಪುರೀ, ಉಜ್ಜ ಯಿನೀ, ಶ್ರೀಶೈಲ ಪೀಠಗಳಿಗೆ ಹೊರಟು, ಸ್ವಸ್ಥಾನಗಳನ್ನು ಸೇರಿ, ಆನಂದದಿಂದ ಶಿವಪೂಜಾಲೋಲರಾಗಿದ್ದರು:

## ಗೋ-ಸಂಘ ಪರಿಪಾಲನೆಯು

ಮಹಾಶ್ರೀಗಳವರು ಪ್ರತಿನಿತ್ಯ ಗೋ-ಕ್ಷೀರ, ದಧಿ, ಘೃತಾದಿಗಳಿಂದ ಶ್ರೀ ರುದ್ರಾಭಿಷೇಕ ಮಹಾಪೂಜಾ ಸಮಾರಂಭವನ್ನು ನಡೆಯಿಸುತ್ತಿದ್ದರು. ಹಾಗು ತಮ ನಿತ್ಯ ಸ್ವೀಕಾರ, ನೈವೇದ್ಯಗಳಿಂದರಿ ಹಾಲು, ಮೊಸರು, ತುಪ್ಪ, ಹೆಸರುಬೇಳೆ, ಅಕ್ಕಿ ಗೋದಿ ಮುಂತಾದ ಸಾತ್ವೀಕಾಹಾರ ಪದಾರ್ಥಗಳೇ ವಿಶೇಷ ರೂಢಿಯಲ್ಲಿದ್ದವು

ಆದರೆ ಸಮಯಾನುಸಾರವಾಗಿ ಮೃಷ್ಟಾನ್ನ-ಪಾನಾದಿಗಳನ್ನು (ಭಕ್ತರ ಪ್ರೇಮಕ್ಕಾಗಿ) ಸ್ವೀಕರಿಸುತ್ತಿದ್ದರು.

ತಮ್ಮ ನಿತ್ಯ ನೈಮಿತ್ತಿಕಾದಿ ಕೆಲಸಗಳಸಲುವಾಗಿ ಗೋವುಗಳು ಅವಶ್ಯ ಬೇಕಾಗಿದ್ದುದರಿಂದ ಧರ್ಮಶಾಸ್ತ್ರಾನುಸಾರವಾಗಿ ೧. ನಂದೆ, ೨. ಭದ್ರೆ, ೩. ಸುರಭಿ, ೪. ಸುಶೀಲೆ, ೫. ಸುಮನೆ ಎಂಬ ಪಂಚವರ್ಣ (ಬಣ್ಣ) ಗಳುಳ್ಳ ಉತ್ತಮ ಗೋವುಗಳನ್ನು ಸಂಗ್ರಹಿಸಲಾಗಿ ೨೫-೩೦ ರ ವರೆಗೆ ಗೋಸಮೂಹ ಬೆಳೆಯಿತು. ಇವುಗಳನ್ನು ತಮ್ಮ ಸರ್ಕೀಟಿನ ಹಿಂದೆ ಹೊರಡಿಸಿಕೊಂಡು ಹೋಗಿ, ಬಹು ಪ್ರೀತಿಯಿಂದ ಪೋಷಣೆ ಮಾಡುತ್ತಿದ್ದರು.

ಈ ಮಹಾತ್ಮರಿಗೆ ಗೋವುಗಳೆಂದರೆ ಪಂಚಪ್ರಾಣ. ಪ್ರತಿದಿವಸ ತಂಮ ಸಂಸ್ಥಾನದ ಸಾವಿರಾರು ಕೆಲಸಗಳಿದ್ದರೂ ಅವುಗಳನ್ನೆಲ್ಲಾ ನಿವಾರಿಸಿಕೊಂಡು ಕೊನೆಗೆ ಒಂದುಸಾರೆಯಾದರೂ ಗೋಸಮೂಹದಲ್ಲಿ ಪ್ರವೇಶಮಾಡಿ ಮಮತೆಯಿಂದ ಅವುಗಳ ದೇಹವನ್ನು ತಮ್ಮ ಹಸ್ತಗಳಿಂದ ಸ್ಪರ್ಶಮಾಡುತ್ತಾ ಸರ್ವಾಂಗಗಳನ್ನು ನಿರೀಕ್ಷಿಸಿ ಹಸನ್ಮುಖಿಗಳಾಗಿ, ಎಲಾ ಗೋಪಾಲಕಾ, ಈ ದಿವಸ ಗೋಮಾತೆಗಳಿಗೆ ಸರಿಯಾಗಿ ಆಹಾರ-ಜಲಾದಿಗಳಿಂದ ತೃಪ್ತಿಪಡಿಸಿದಿಯಾ ಎಂದು ವಿಚಾರಿಸಿ ದಯಮಾಡುತ್ತಿದ್ದರು. ಇವರಲ್ಲಿ ನಾವು ದೊಡ್ಡವರೆಂಬ ಅಭಿಮಾನ, ಅಹಂಕಾರ, ಡಾಂಭಿಕಾದಿಗಳಿರುತ್ತಿರಲಿಲ್ಲಾ.

ಗೋರಕ್ಷಣೆ ಮಾಡುವವನಿಗೆ ಅಕಸ್ಮಾತ್ ಬೇನೆ-ಬೇಸರಿಕೆ ಬಂದು ಮಲಗಿದರೆ ಅಥವಾ ಬೇರೆ ಯಾರೂ ಗೋಪಾಲಕರು ದೊರೆಯದಿದ್ದರೆ ಮಹಾಶ್ರೀಗಳವರು ಸ್ವತಃ (ತಾವೇ) ಗೋವುಗಳನ್ನು ಬಿಡಿಸಿಕೊಂಡು ಬಿಳೀಕಂಬಳಿ ಹೊದ್ದು ದಂಡಧಾರಿಗಳಾಗಿ ಬಗಲಲ್ಲಿ ೧ ಧರ್ಮಗ್ರಂಥವನ್ನು ಇಟ್ಟುಕೊಂಡು ಗೋವುಗಳ ಹಿಂದೆ ಒಂದೊಂದೇ ಹೆಜ್ಜೆ ಇಡುತ್ತಾ ಬಹುಸಂತೋಷದಿಂದ ಅಡವೆಗೆ ಪ್ರಯಾಣಮಾಡುತ್ತಿದ್ದರು.

ಮಧ್ಯಮಾರ್ಗದಲ್ಲಿ ಅಥವಾ ಅಡವಿಯಲ್ಲಿ ಯಾರಾದರು ಭಕ್ತರು ನೋಡಿ, ಮಹಾಗುರುವೇ ತಾವೇ ದಯಮಾಡಿಸಿದಿರಲ್ಲಾ! ನಾವು ಗೋರಕ್ಷಣೆ ಮಾಡಿಕೊಂಡು ಬರುತ್ತೇವೆಂದು ನಮ್ರಭಾವದಿಂದ ಅರಿಕೆಮಾಡಿಕೊಂಡರೆ, ಎಲಾ ಭಕ್ತರೇ ನೀವೆಂಥ ಹುಚ್ಚರು! ಪರೋಪಕಾರಿಗಳೂ, ಪುಣ್ಯಶರೀರಿಗಳೂ, ಲೋಕಪಾವನ ಮೂರ್ತಿಗಳಾದ ಈ ಗೋವುಗಳನ್ನು ಪಾಲನಮಾಡುವಂತಹ ಸುಯೋಗವು ಹತಭಾಗ್ಯರಿಗೆ ದೊರೆಯುವದೇ! ಇರಲಿ ನಾವೇಕೆ ಹೋಗಬಾರದು? ಪೂರ್ವದಲ್ಲಿ ಶ್ರೀಕೃಷ್ಣನು ಬಾಲ್ಯದಲ್ಲಿ ಗೋಕ್ಷೀರಾದಿಗಳಿಂದ ಬೆಳೆದು, ಸರ್ವದಾ ಗೋಪಾಲನತತ್ಪರನಾಗಿದ್ದುದರಿಂದ "ಗೋವಿಂಧ" ಎಂಬ ನಾಮಾಂಕಿತವೂ ಪ್ರಸಿದ್ಧವಾಯಿತು. ಇದಲ್ಲದೆ—"ಗವಾಮಂಗೇಷುತಿಷ್ಠಂತಿ । ಭುವನಾನಿ ಚತುರ್ದಶ ॥ ಪೃಷ್ಠೆಬ್ರಹ್ಮಾ ಗಲೇ ವಿಷ್ಣು! ರ್ಮುಖೇ ರುದ್ರಃ ಪ್ರತಿಷ್ಠಿತಃ ॥೧॥ ಎಂಬ ವಾಕ್ಯದಂತೆ ಈ ಗೋವಿನ ಪಾದಾದಿ

ಸರ್ವಾಂಗಗಳಲ್ಲಿಯೂ ಸಕಲ ದೇವಾದಿದೇವತೆಗಳು ವಾಸಮಾಡಿದ್ದಾರೆ. ಆದುದರಿಂದ ಈ ಗೋವುಗಳು ತೃಪ್ತಿಯಾದರೆ ಸಮಸ್ತ ದೇವತೆಗಳು ಆನಂದಹೊಂದುವರು. ಮತ್ತು ನೋಡಿರಿ, ಗೋವುಗಳು ನಮಗೆಷ್ಟು ಉಪಕಾರಿಗಳಾಗಿದ್ದಾವೆ. ಗೋವಿನ ಹಾಲು, ಮೊಸರು, ತುಪ್ಪ, ಮೂತ್ರ, ಮಯ, ರೋಚನ ಮುಂತಾದವು ಸರ್ವರೀತಿಯಿಂದಲೂ ಉಪಯೋಗವಾಗುವವು. ರೋಗಿಗಳಿಗೂ, ಬಾಲಕರಿಗೂ, ಲಿಂಗಧಾರಣ ವಿವಾಹ, ದೀಕ್ಷಾದಿ ಕಾರ್ಯಗಳಿಗೂ ಗೋಕ್ಷೀರಾದಿಗಳು ಅವಶ್ಯ ಬೇಕಾಗುವದಿಲ್ಲವೇ? ಮತ್ತು ಗೋಶಗಣೆಯಿಂದ ಪವಿತ್ರವಾದ ಭಸ್ಮ ತಯಾರಾಗುವದು. ಹಾಗು ಮನೆ, ಮಠಾದಿಗಳು ಸಾರಣೆಯಾಗಿ ಪರಿಶುದ್ಧವಾಗುವದಿಲ್ಲವೇ ? ಗೋಪುತ್ರರಾದ ವೃಷಭ (ಎತ್ತು) ಗಳಿಂದ ರೈತರು ಒಕ್ಕಲತನವನ್ನು ಸಾಗಿಸಿ, ಗೊಬ್ಬರದಿಂದ ಭೂಮಿಗಳು ಸಾರವತ್ತಾಗಿ ವಿಶೇಷ ಫಲ ಪ್ರಾಪ್ತಿಯಾಗುವದು. ಒಕ್ಕಲತನದಿಂದಲೇ ಜಗತ್ತಿನ ಮಾನವರಿಗೆ ಬೇಕಾಗುವ ಧಾನ್ಯಸಂಗ್ರಹವಾಗಿ ಸುಖಜೀವಿಗಳಾಗಿರುವರು.

ಹೀಗೆ ಲೌಕಿಕ, ಪಾರಮಾರ್ಥಿಕ ದೃಷ್ಟಿಯಿಂದಲೂ ಪರೋಪಕಾರಿಗಳಾದ ಮತ್ತು ಸಾಧು, ಪೂಜ್ಯ ಪ್ರಾಣಿಗಳಾದ ಗೋವುಗಳನ್ನು ಕೆಲವು ನೀಚರು ಮುಪ್ಪಾದ ಕೂಡಲೇ ಜಾತ್ರೆಗಳಿಗೆ ಹೊಡೆದುಕೊಂಡು ಹೋಗಿ ೩-೪ ರೂಪಾಯಿಗಳಿಗೆ ಮಾರಾಟ ಮಾಡಿ ಬರುವರು. ಇಂತಹ ದುರ್ಜನರಿಂದಲೇ ಪಾಪಾಧಿಕ್ಯವಾಗಿ, ಸರ್ವರೂ ನಾನಾವಿಧದಿಂದ ದುಃಖಪಡಬೇಕಾಗಿದೆ. ಇತ್ಯಾದಿ ಅನೇಕ ವಿಷಯಗಳನ್ನು ಬೋಧಿಸುತ್ತಿದ್ದರು.

ಅಡವಿಯಲ್ಲಿ ಗೋವುಗಳು ತೃಪ್ತಿಯಾಗುವವರೆಗೂ ಉಲ್ಹಾಸದಿಂದ ಅವುಗಳ ಹಿಂದೆ ಸಂಚರಿಸಿ, ಸೃಷ್ಟಿ ಸೌಂದರ್ಯವನ್ನು ನಿರೀಕ್ಷಿಸಿ ಆನಂದಪಡುತ್ತ ಹಸರುಹುಲ್ಲಿನಿಂದ ತಂಪಾದ ಇಂಪಾದ ಪ್ರದೇಶದಲ್ಲಿ ಕುಳಿತು, ಕೆಲವು ಹೊತ್ತು ಗ್ರಂಥಾವಲೋಕನಮಾಡಿ, ಮೆಲ್ಲಗೆ ಹೊಡೆದುಕೊಂಡು ಗ್ರಾಮಪ್ರವೇಶಮಾಡುತ್ತಿದ್ದರು

## ಶ್ರೀ ಪಟ್ಟಚರಾಧಿಕಾರಿಗಳ ಸುಧಾರಣೋಪಾಯ

ಶ್ರೀ ಕಾಶೀಕ್ಷೇತ್ರದಲ್ಲಿ- ಉಜ್ಜಯಿನೀ ಮಹಾಶ್ರೀಗಳವರಿಂದ ಶ್ರೀ ಜಗದ್ಗುರು ಪಂಚಾಚಾರ್ಯ ಮಹಾ ಸಮ್ಮೇಲನವು ಜರುಗಿದ ಸದ್ವಾರ್ತೆಯು ಜಗದ್ವಿಖ್ಯಾತವಾಯಿತು. ಬಹುಜನರು ಆನಂದಪೂರಿತರಾಗಿ ಈವರೆಗೆ ವೀರಶೈವ ಸಮಾಜದ ಕಾಂತಿಯು ಕುಂದುತ್ತ ಬರಲು ಈ ಗುರುವರೇಣ್ಯರ ಪ್ರಯತ್ನದಿಂದ ಪುನಃ ದಿವ್ಯ ಜ್ಯೋತಿಯು ಬೆಳಗಲಾರಂಭಿಸಿ ನವಚೈತನ್ಯ ಉಂಟಾಗಿದೆ ಹೀಗೆಂದು ಕೊಂಡಾಡುತ್ತಿದ್ದರು.

ಈ ಮಹಾಪ್ರಭುಗಳವರು ಸಂಸ್ಥಾನಮಠದಲ್ಲಿರುವಾಗ್ಗೆ ಕೆಲವು ಗುರುಭಕ್ತಿಯುತರು ಬಂದು ಸನ್ನಿಧಿಯಲ್ಲಿ ಧಾರ್ಮಿಕ ವಿಚಾರಗಳನ್ನು ವಿಮರ್ಶೆ ಮಾಡುತ್ತ

ಇರಲಾಗಿ ಒಂದು ದಿವಸ ಕೆಲವರು ಲೌಕಿಕ ವಿಷಯಗಳ ಮಾತನಾಡಿ– ಮಹಾ ಗುರುವೇ, ಸಾವಿರಾರು ವರುಷಗಳಿಂದಲೂ ಪಂಚಸಿಂಹಾಸನಾಧೀಶ್ವರರು ಪರಸ್ಪರ ದರ್ಶನ, ಸಂಭಾಷಣ, ಐಕ್ಯಮತ್ಯ, ಪ್ರೇಮಾದರಗಳಿಲ್ಲದೆ ಎಲ್ಲಿಯೋ ಒಂದೊಂದು ಕಡೆಯಲ್ಲಿದ್ದವರನ್ನು ಏಕಕಾಲಕ್ಕೆ ಒಂದೆಡೆಯಲ್ಲಿ ಸೇರಿಸಿ ಲಕ್ಷಾವಧಿ ಜನರಿಗೆ ಪೀಠಾಧಿಪರ ದರ್ಶನಲಾಭವನ್ನು ಮಾಡಿಕೊಟ್ಟು ಚಿರಸ್ಮರಣೀಯರಾದಿರಿ.

ಆದರೆ ದೇಶಮಧ್ಯದಲ್ಲಿ ಅನೇಕ ಪಟ್ಟದಸ್ವಾಮಿಗಳೂ, ಚರಮೂರ್ತಿಸ್ವಾಮಿಗಳವರೂ ಇರುವರಲ್ಲಾ! ಪೂರ್ವದಲ್ಲಿ ಇವರಿಗೆ ಯಾವ ಉದ್ದೇಶದಿಂದ ಅಧಿಕಾರ ನೆರವೇರಿಸಲಾಯಿತು? ಇವರ ಕರ್ತವ್ಯಕರ್ಮಗಳೇನು? ಇವರ ವೇಷ-ಭೂಷಣಗಳು ಹೇಗಿರಬೇಕು ಇತ್ಯಾದಿ ವಿಚಾರಗಳನ್ನು ತಿಳಿಯಬೇಕೆಂಬಾಶೆ ಇದೆ; ಅಪ್ಪಣೆಯಾಗಬೇಕೆಂದು ಬಿನ್ನವಿಸಿಕೊಂಡರು.

ಎಲೈ ಗುರುಪುತ್ರರೇ, ನೀವು ಕೇಳುವ ವಿಷಯಗಳು ಯೋಗ್ಯವಾದವು. ನಿಮ್ಮಂಥ ಭಕ್ತರು ಹೀಗೆ ವಿಮರ್ಶೆಮಾಡುತ್ತಿರಬೇಕು. ನೀವು ಸುಮ್ಮನಿರುವದರಿಂದ ಕೆಲವು ಗುರುವರ್ಗದ ಪಟ್ಟಚರಾಧಿಕಾರಿಗಳೂ ಹಾಗೂ ಮಠಾಧಿಕಾರಿಗಳೂ ವಿದ್ಯಾವಂತರಾಗದೆ ನಡೆ-ನುಡಿಯಲ್ಲಿಯೂ, ವೇಷ-ಭೂಷಣಗಳಲ್ಲಿಯೂ ವ್ಯತ್ಯಾಸಹೊಂದಿ ಸುಮ್ಮನೆ ಕಾಲಹರಣಮಾಡುತ್ತಿರುವರು. ಮತ್ತು ಭಕ್ತಾದಿಗಳಿಂದ ಕಾಣಿಕಾಧನ ವಸೂಲುಮಾಡಿಕೊಂಡು ಸಮಾಜ ಸುಧಾರಣೆಯಲ್ಲಿ ವಿನಿಯೋಗಮಾಡದೆ ತಮ್ಮ ಬಂಧು-ಬಳಗದವರ ಪೋಷಣಾದಿಗಳಲ್ಲಿರುತ್ತಿರುವರು.

ಈ ನಮ್ಮ ವೀರಶೈವ ಧರ್ಮರಾಜ್ಯವು ಕೂಡ ಬ್ರಿಟಿಶ್ ಗವ್ಹರ್ನಮೆಂಟಿನವರ ಆಡಳಿತದಂತೆ ಇರುತ್ತದೆ. ಹೇಗೆಂದರೆ– ಪ್ರತಿಯೊಂದು ಗ್ರಾಮದಲ್ಲಿರುವ ಮಠಾಧಿಕಾರಿಗಳು, ಪಾಟೀಲ (ಗೌಡ) ರಂತೆ ಶಿವಭಕ್ತರ ಆಚಾರ-ವಿಚಾರಾದಿಗಳನ್ನೂ ಹಾಗು ಲಿಂಗದ ಕಾಣಿಕಾ ವಸೂಲನ್ನು ಮಾಡತಕ್ಕವರಾಗಿದ್ದಾರೆ. ಪ್ರತಿಯೊಂದು ತಾಲೂಕಿನಲ್ಲಿರುವ ಪಟ್ಟಚರಾಧಿಕಾರಿಗಳು ಮಾಮಲೇದಾರ (ತಹಶೀಲದಾರ) ಗಳವರಂತೆ ಮೇಲಾಧಿಕಾರಿಗಳಾಗಿ ಗೌರವಿಸಲ್ಪಡತಕ್ಕವರಾಗಿದ್ದಾರೆ. ಬಳಿಕ ಇವರ ಮೇಲೆ ಜಗದ್ಗುರು ಪೀಠಾಧಿಪರು ಕಲೆಕ್ಟರ - ಗವ್ಹರ್ನರರಂತೆ ಘನವಾದ ಅಧಿಕಾರದಿಂದ ದಂಡ, ಖಂಡನ, ಪ್ರಾಯಶ್ಚಿತ್ತ, ಬಹಿಷ್ಕಾರಾದಿಗಳಿಂದ ಯೋಗ್ಯ ಶಾಸನ ಮಾಡತಕ್ಕವರಾಗಿದ್ದಾರೆ. ಈ ಪ್ರಕಾರ ಇದ್ದರೂ ನಮ್ಮಗಳ ಅಶ್ರದ್ಧೆ, ಅನೈಕ್ಯತೆಯಿಂದ ಕ್ಷೀಣದೆಶೆಗೆ ಬಂದಿದೆ. ಈ ವಿಷಯದಲ್ಲಿ ಮೊದಲು ನಮ್ಮ ಪಟ್ಟಚರಾಧಿಕಾರಿಗಳಿಗೆ ತುಸು ದಿವಸದಲ್ಲಿಯೇ ಅಪ್ಪಣೆಮಾಡುವವರಿದ್ದೇವೆ. ಹೀಗೆಂದು ನುಡಿದರು.

---

॥ ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು. ॥

# ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನ ಸದ್ಧರ್ಮ ಪರಿಷತ್

ಪ್ಯ॥ ಶ್ರೀಧರ್ಮ ಪೀಠಾಧಿಪ ದಾರುಕಾರ್ಯೋ ಜಗದ್ಗುರುರ್ವೀರ ಮತಾಬ್ಜಸೂರ್ಯಃ।
ಶ್ರೀಶಂಭು ಪಾದಾಂಬುಜಯೋಶ್ಚ ಭೃಂಗಾನ್ ಪಾಯಾಸ್ಮದಾನಿತ್ಯಧೃತೇಷ್ಟಲಿಂಗಾ ॥

## ಸೂಚನಾ —

ಜಗತ್ತಿನಲ್ಲಿ ಅತ್ಯಂತ ಪವಿತ್ರವಾದ ವೀರಶೈವ ಮತವನ್ನು ಪರಮತ ಖಂಡನ ಸ್ವಮತ ಸಿದ್ಧಾಂತ ಪೂರ್ವವಾಗಿ ಸ್ಥಾಪಿಸಿ ತಮ್ಮ ಸುಸ್ಥಿರವಾಸದಿಂದ ಉಜ್ಜಯಿನೀ ನಗರದಲ್ಲಿ ಸದ್ಧರ್ಮ ಸಿಂಹಾಸನವಂ ನೆಲೆಗೊಳಿಸಿರುವ ಮೂಲಜಗದ್ಗುರು ಮರುಳ ಸಿದ್ಧಾಚಾರ್ಯರ ಪಾದಸೇವೆಯನ್ನು ಎಲ್ಲಾ ವೀರಶೈವರು ತದನುಯಾಯಿಗಳು ಸಹ ಐಕಮತ್ಯದೊಡನೆ ನಡಿಸಿ ಜನ್ಮಸಾಫಲ್ಯಮಂ ಹೊಂದಬೇಕೆಂಬ ಸ್ಥಿರಸಂಕಲ್ಪದಿಂದ ನಮ್ಮ ಪ್ರಾಚೀನರು ಉಜ್ಜಯಿನಿಯಲ್ಲಿ ಪ್ರತಿಸಂವತ್ಸರದ ವೈಶಾಖ ಶುಕ್ಲಪಕ್ಷದಲ್ಲಿ ಯಾತ್ರೋತ್ಸವವು ನಡೆಯುವಂತೆ ಏರ್ಪಡಿಸಿದ್ದಾರೆ.

ಶ್ರೀ ಜಗದ್ಗುರು ಮರುಳಸಿದ್ಧಾಚಾರ್ಯರ ಅವತಾರಮೂರ್ತಿಗಳೆನಿಸಿ, ಹಾಲಿ ಸದ್ಧರ್ಮ ಪೀಠದಲ್ಲಿ ಶೋಭಿಸುತ್ತಿರುವ ಶ್ರೀಮಜ್ಜಗದ್ಗುರು ಸಿದ್ಧಲಿಂಗರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ಮೂಲಾಚಾರ್ಯರ ಯಾತ್ರೋತ್ಸವಕ್ಕೆ ಬಂದ ಜನಗಳಿಗೆಲ್ಲಾ ಸರ್ವ ಸೌಖ್ಯಪ್ರದಾಯಕಮಾದ ಧರ್ಮಬೋಧೆಯು ಅವಶ್ಯ ವಾಗಿ ಆಗಬೇಕೆಂದು ಪ್ರತಿ ಸಂವತ್ಸರ ಯಾತ್ರೋತ್ಸವ ಕಾಲದಲ್ಲಿ ತಪ್ಪದೆ ಸದ್ಧರ್ಮ ಪರಿಷತ್ತು ನಡೆಯುವಂತೆ ಹಿಂದಣ ಯಾತ್ರಾಕಾಲದಲ್ಲೇ ಏರ್ಪಡಿಸಿದ್ದಾರೆ.

ವೈಶಾಖ ಶು. ೪ ಯಲ್ಲಿ ಶ್ರೀ ಪರಶಿವ ಸ್ವರೂಪಿ ಮರುಳಾಚಾರ್ಯರಿಗೆ ಧರ್ಮ ರೂಪಿಯಾದ ಬಸವಾರೋಹಣೋತ್ಸವವು ವೈಶಾಖ ಶು. ೫ ಯಲ್ಲಿ ಶ್ರೀ ರಥಾರೋಹ ಣೋತ್ಸವವು; ವೈಶಾಖ ಶು. ೬ ಯಲ್ಲಿ ಶ್ರೀ ದೇವಾಲಯ ಶಿಖರಕ್ಕೆ ತೈಲಾಭಿಷೇ ಕೋತ್ಸವವು ಈವರೆಗೆ ನಡೆಯುತ್ತಾಬಂದಿರುವ ಸಾಂಪ್ರದಾಯ ಪ್ರಕಾರ ಇದೇ ಇಸ್ವಿ ಮೇ ತಿಂಗಳು ೧೪, ೧೫, ೧೬ ಈ ಮೂರು ತೇದಿಗಳಲ್ಲಿ ಡಿಟ್ಟೋ ಯಾತ್ರೋತ್ಸವಗಳು ದ್ವಿತೀಯ ಸದ್ಧರ್ಮ ಪರಿಷತ್ತು ಸಹಾ ನಡೆಯುವವು.

ಈ ದ್ವಿತೀಯ ಸದ್ಧರ್ಮ ಪರಿಷತ್ತಿನಲ್ಲಿ ಚರ್ಚಿಸತಕ್ಕ ಅಂಶಗಳು—

(೧) ಯಾತ್ರೆಯ ಅವಶ್ಯಕತೆ, ಅದರ ಪ್ರಯೋಜನ, ಪ್ರಾಚೀನರ ಮುಖ್ಯೋದ್ದೇಶ ಇವುಗಳ ವಿವೇಚನೆ.

(೨). ರಾಜಕೀಯ ಮತ್ತು ಧಾರ್ಮಿಕ ಸಂಬಂಧವಾದ ವಿದ್ಯೆಗಳನ್ನು ನಮ್ಮ ಮತದ ಬಾಲಕರು ಅಭ್ಯಾಸಮಾಡಲಿಕ್ಕೆ ಪ್ರೋತ್ಸಾಹ ಮತ್ತು ಸಹಾಯ ಈ ವಿಷಯ ಗಳ ವಿವೇಚನ.

(೩) ಧರ್ಮಬೋಧಾ ವಿಷಯದಲ್ಲಿ ಏನೇನು ಏರ್ಪಾಟುಗಳಾಗಬೇಕೆಂಬ ವಿವೇಚನ.

(೪) ಶ್ರೀ ಕಾಶೀಕ್ಷೇತ್ರದಲ್ಲಿ ನಡೆದ ಜಗದ್ಗುರು ಪಂಚಾಚಾರ್ಯ ಮಹಾಸಭೆಯಲ್ಲಿ ಆಗಿರುವ ಠರಾವುಗಳನ್ನು ಪ್ರಕಟಿಸಿ ಜಾರಿಯಲ್ಲಿ ತರುವದು.

ಈ ನಾಲ್ಕು ವಿಷಯಗಳಿಗೆ ವಿಸ್ತಾರವಾಗಿ ಉಪನ್ಯಾಸ ಕಳುಹಿಸತಕ್ಕವರು ಚೈತ್ರ ಬ. ೩೦ ವಳಗಾಗಿ ಉಜ್ಜಯಿನೀ ಪೀಠದ ಪ್ರಾಡ್ವಿವಾಕ ಬಿ. ಗುರುಸಿದ್ಧಶಾಸ್ತ್ರಿ ಬಳಿಗೆ ಕಳುಹಿಸಬೇಕು. ಸೂಕ್ಷ್ಮವಾದ ಉಪನ್ಯಾಸಗಳನ್ನು ಪರಿಷತ್ತಿನ ದಿನಗಳಲ್ಲಿಯೂ ತೆಗೆದುಕೊಳ್ಳಲ್ಪಡುವದು. ಪರೀಕ್ಷಾಪೂರ್ವಕ ಯೋಗ್ಯವೆಂದು ನಿರ್ಧರಿಸಲ್ಪಟ್ಟ ಉಪನ್ಯಾಸಗಳು ಮಾತ್ರ ಈ ಪರಿಷತ್ತಿನಲ್ಲಿ ಬಹಿರಂಗಪಡಿಸಬೇಕಲ್ಲದೆ, ಸ್ವೇಚ್ಛಾ ಪ್ರಕಾರ ಉಪನ್ಯಾಸಗಳಿಗೆ ಅವಕಾಶ ದೊರೆಯುವದಿಲ್ಲ.

ಪ್ರತಿಯೊಬ್ಬ ವೀರಶೈವರು ತದನುಯಾಯಿಗಳು ತಪ್ಪದೆ ಈ ಪರಿಷತ್ತಿಗೆ ಬಂದು ಜಗದಾಚಾರ್ಯರ ದರ್ಶನಾಶೀರ್ವಾದಗಳನ್ನೂ ಧರ್ಮ ಶ್ರವಣವನ್ನೂ ಹೊಂದಿ, ಯಾತ್ರೋತ್ಸವ ಪರಿಷತ್ಕಾರ್ಯಗಳಂ ಪೂರೈಸಿ ಜಗದಾಚಾರ್ಯರ ಕೃಪೆಗೂ, ಶ್ರೇಯೋಭಾಗಕ್ಕೂ ಪಾತ್ರರಾಗಿ ಸಫಲಜನ್ಮಿಗಳಾಗಬೇಕೆಂದು ಸರ್ವರಿಗೂ ಹಿತವಂ ಕೋರುವ-

. ಬಿ. ಗುರುಸಿದ್ಧಶಾಸ್ತ್ರಿ,
ಪ್ರಾಡ್ವಿವಾಕ- ಉಜ್ಜಯಿನೀ ಸಂಸ್ಥಾನ.

ಈ ಮುದ್ರಣ ಪತ್ರಿಕಾ ಪ್ರಕಾರ ಅನೇಕ ಜನಸಂದಣಿ ಕೂಡಿತು. ಕಾರ್ಯ ಕ್ರಮಗಳು ನಡೆದಬಳಿಕ ಮಹಾಶ್ರೀಗಳವರು ಪಟ್ಟಚರಾಧಿಕಾರಿಗಳವರಿಗೆ ಅಪ್ಪಣೆ ಕೊಡಿಸಿದರು. ಸಾರಾಂಶ—

ಪಟ್ಟ-ಚರಾಧಿಕಾರಿಗಳೇ,

ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಮಹಾನುಭಾವರು ಪರಮ ಪವಿತ್ರವಾದೀ ವೀರಶೈವ ಮಹಾಮತ ಸ್ಥಾಪನಾಮಾಡಿ, ಈ ಧರ್ಮಸಾಮ್ರಾಜ್ಯವನ್ನು ಪರಿಪಾಲನಮಾಡಲು, ನಿಮ್ಮಗಳಿಗೆ ರಕ್ಷಣ-ಶಿಕ್ಷಣಾದಿ ಗೌರವಾಧಿಕಾರವನ್ನನುಗ್ರಹಿಸಿ ರುವದು ಪ್ರಾಚೀನ ಕಾಲದಿಂದಲೂ ಪ್ರಸಿದ್ಧವೇ ಇರುತ್ತದೆ.

ಆದರೆ ಕಲಿಕಾಲ ಪ್ರಾಬಲ್ಯದಿಂದಲೊ, ಈ ಮತದ ದುರ್ದೆಶೆಯಿಂದಲೊ ಗುರು ವರ್ಗದ ಪಟ್ಟ-ಚರಾಧಿಕಾರಿಗಳು ಸಧ್ಯಃ ವೈದಿಕ ವಿದ್ಯಾವಂತರೂ, ತಪೋನಿಷ್ಠರೂ, ಶಿಷ್ಯೋದ್ಧಾರ ಸಮರ್ಥರಾಗಿರದೆ ಕೇವಲ ಲೌಕಿಕ ವೆವಹಾರಾದಿಗಳಲ್ಲಿ ನಿರತರಾಗಿರು ವದರಿಂದ ಪರಸ್ಪರ ಗುರು-ಶಿಷ್ಯರಲ್ಲಿ ಭಯ ಭಕ್ತಿ ವಿಶ್ವಾಸಗಳು ಲೋಪವಾಗುತ್ತ ವೀರಶೈವ ಸಮಾಜವು ಅತ್ಯಂತ ಹೀನ ದೀನಾವಸ್ಥೆಯಲ್ಲಿಳಿದಿರುವದು ನೋಡಿ, ತುಂಬಾ ವಿಷಾದಪಡಬೇಕಾಗಿದೆ.

ಆದುದರಿಂದ ಈ ನವನಾಗರಿಕತೆಯ ಕಾಲದಲ್ಲಿ ನೀವುಗಳೆಲ್ಲಾ ಮೌನದಿಂದ ಸ್ವಸ್ಥಾನದಲ್ಲಿ ಮಂಡಿಸಿರದೆ ನಿಮ್ಮ ನಿಮ್ಮ ಪ್ರಾಂತಗಳಲ್ಲಿ ಶ್ರೀ ಪಟ್ಟ-ಚರಾಧಿಕಾರಿಗಳ ಸಮ್ಮೇಳನಗಳನ್ನು ಆಗಾಗ್ಗೆ ನೆರವೇರಿಸಿ, ಆ ಕಾಲಕ್ಕೆ ಅನೇಕ ಪಂಡಿತರೂ, ಪದವೀಧರರೂ, ವಾಗ್ಮಿಗಳನ್ನೂ ಆವ್ಹಾನಿಸಿಕೊಂಡು ಸಮಾಜಸುಧಾರಣೆಗೆ ಅತ್ಯವಶ್ಯಕಗಳಾದ ಠರಾವುಗಳನ್ನು ನಿರ್ಣಯಿಸಿ, ಆ ಠರಾವುಗಳನ್ನು ಸರ್ವತ್ರ ಆಚರಣೆಯಲ್ಲಿ ಬರುವಂತೆ ನಿರಂತರ ಪ್ರಯತ್ನಮಾಡುತ್ತಿರಬೇಕು. ಮತ್ತು ಪ್ರತಿಯೊಂದು ಸಮ್ಮೇಳನಗಳಲ್ಲಿ ನಿರ್ಣಯಮಾಡಲ್ಪಟ್ಟ ಠರಾವುಗಳನ್ನು ಶ್ರೀ ಜಗದ್ಗುರು ಪಂಚಪೀಠಾಧೀಶ್ವರರಲ್ಲಿಗೂ ಕಳುಹಿಸಿಕೊಡತಕ್ಕದ್ದು. ಈ ವಿಷಯದಲ್ಲಿ ಆಲಸ್ಯರಾಗದೆ ಅತಿ ಶೀಘ್ರದಿಂದ ಕಾರ್ಯತತ್ಪರರಾಗಿ ಸತ್ಕೀರ್ತಿಗೆ ಪಾತ್ರರಾಗತಕ್ಕದ್ದು. ಈ ವಿಷಯದಲ್ಲಿ ಹೆಚ್ಚಾಗಿ ಅಪ್ಪಣೆಕೊಡಿಸುವದೇನದೆ. ಇತ್ಯಾದಿ.

## ಹಿಮಾಲಯದಿಂದ ಕೇದಾರ ಶ್ರೀ ಜಗದ್ಗುರುಗಳವರು ದಕ್ಷಿಣಪ್ರಾಂತಕ್ಕೆ ಆಗಮನಮಾಡಿದ್ದು.

( ೧೯೧೯ )

ಈ ಮೊದಲು ಕೇದಾರ ಸಿಂಹಾಸನದಲ್ಲಿ ವಾಸಮಾಡಿದ್ದ ವೇ|| ಗಂಗಾಧರ ಶಾಸ್ತ್ರಿಗಳವರು ಅಲ್ಲಿಯ ಸಕಲವಿಧ ಕಾರ್ಯಕಲಾಪಗಳನ್ನು ನಡೆಯಿಸುತ್ತಾಯಿದ್ದು, ಆಗಾಗ್ಗೆ ಉಜ್ಜಯಿನೀ ಮಹಾ ಶ್ರೀಗಳವರ ಸನ್ನಿಧಿಗೆ ಸಮಸ್ತ ವಿದ್ಯಮಾನಗಳನ್ನು ಪತ್ರದ್ವಾರದಿಂದ ಅರಿಕೆಮಾಡಿಕೊಳ್ಳುತ್ತಾಯಿದ್ದು, ಮುಂದೆ ತುಸು ದಿವಸಗಳಲ್ಲಿ ಕೇದಾರ ಪೀಠದ ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರನ್ನು ಕರೆದುಕೊಂಡು ಹಿಮಾಲಯದಿಂದ ದಕ್ಷಿಣ ಪ್ರಾಂತಕ್ಕೆ ಆಗಮಿಸಿದರು.

ಕರ್ನಾಟಕ ಪ್ರದೇಶಕ್ಕೆ ಆಗಮಿಸಿದ ವಾರ್ತೆಯನ್ನು ಕೇಳಿ, ಉಜ್ಜಯಿನೀ ಮಹಾ ಶ್ರೀಗಳವರು ಪರಮ ಹರ್ಷಿತರಾಗಿ, ಆ ಕೇದಾರ ಸಂಸ್ಥಾನ ಮುಕ್ಕಾಮು ಮಾಡಿರುವಲ್ಲಿಗೆ ತಮ್ಮ ಸಂಸ್ಥಾನದಲ್ಲಿದ್ದ ಮುಖ್ಯಾಮಾತ್ಯರಾದ ಶಿರಪಿ ಶ್ರೀ ಸಿದ್ಧರಾಮಾಖ್ಯ ಚರಮೂರ್ತಿಗಳನ್ನೂ ಮತ್ತು ಆನೆ, ಕುದರೆ, ಗಾಡಿ, ಮೇನಾ ಕಾರಭಾರಿ, ಛಡಿಯವರು, ಜವಾನರು, ಮುಂತಾದ ಸಕಲ ಸಿಬ್ಬಂದಿಯನ್ನೂ ಹಾಗು ಇನ್ನುಳಿದ ಉಪಯುಕ್ತ ಸಾಮಾನುಗಳನ್ನೂ ನಿರ್ವಂಚನೆಯಿಂದ ಕಳುಹಿಸಿಕೊಟ್ಟು, ಮುಂದೆ ಯಾವ ಯಾವ ಪ್ರದೇಶಗಳಲ್ಲಿ ಸಂಚಾರಮಾಡಬೇಕೆಂಬುವದನ್ನು ಬಹು ಪ್ರೇಮದಿಂದ ತಿಳುಹಿಸಿದರು. ಹಿಂದೆ ಯಾವ ಕಾಲದಿಂದಲೂ ದರ್ಶನವಾಗದೆಯಿದ್ದ "ಅಶ್ರುತ ದೃಷ್ಟ ಪೂರ್ವ" ಕೇದಾರ ಪೀಠದ ಜಗದ್ಗುರುಗಳವರ ಸವಾರಿ ಆಗಮನದಿಂದ ಕನ್ನಡನಾಡಿನ ಭಕ್ತರು ಬಹುಪ್ರೇಮದಿಂದ ಸೇವಾಮಾಡುತ್ತಿದ್ದರು.

ಮಹಾ ಶ್ರೀಗಳವರು ಕೇದಾರ ಜಗದ್ಗುರುಗಳವರ ಸರ್ಕೀಟಿನ ವೃತ್ತಾಂತವನ್ನು ಆಗಾಗ್ಗೆ ತಿಳಿದುಕೊಳ್ಳುತ್ತ, ಆಹಾ ನಾವು ಸಂಕಲ್ಪಮಾಡಿದಂತೆ ಕೇದಾರ ಪೀಠವು ನಮ್ಮ ಪ್ರಾಂತಕ್ಕೆ ದಯಮಾಡಿಸುವದಾಯಿತು. ಮುಂದಾದರೂ ಇನ್ನೂ ಹೆಚ್ಚಿನ ವಿಷಯಗಳನ್ನು ಏರ್ಪಾಡಮಾಡಬೇಕೆಂದು ಅಪಾರವಾದ ಹರ್ಷಾಂಬುಧಿಯಲ್ಲಿ ಲೋಲಾಡುತ್ತ ತಮ್ಮ ಸರ್ಕೀಟನ್ನು ಸಂಕ್ಷಿಪ್ತ ಮಾಡಿಕೊಂಡು ಉಜ್ಜಯಿನೀ ಮಹಾ ಸಂಸ್ಥಾನ ಮಠದಲ್ಲಿ ಶಿವಯೋಗಾನಂದಭರಿತರಾಗಿದ್ದರು.

---

## ೧ ನೇ ಪಟ್ಟ ಚರಾಧಿಕಾರಿಗಳ ಸಮ್ಮೇಳನ.

### ( ತಾ. ೨೪—೧೨—೧೯೧೯ )

ಧಾರವಾಡ ಜಿಲ್ಹಾ ಜಮಖಂಡಿ ಸಂಸ್ಥಾನಕ್ಕೆ ಸೇರಿದ ಕುಂದಗೋಳ ಗ್ರಾಮದ ಪಂಚಗೃಹ ಹಿರೇಮಠದ ಶ್ರೀ. ಷ. ಬ್ರ. ಗುರುಪಾದ ಸ್ವಾಮಿಗಳವರ ಪ್ರಯತ್ನ ವಿಶೇಷದಿಂದ ಸಮ್ಮೇಲನದ ಸರ್ವಸಿದ್ಧತೆಗೊಳಿಸಲ್ಪಟ್ಟು, ಅಬ್ಬಿಗೇರಿ ಹಿರೇಮಠದ ಶ್ರೀ. ಷ. ಬ್ರ. ವೀರಭದ್ರ ಶಿವಾಚಾರ್ಯ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಭಾಕಾರ್ಯವು ನೆರವೇರುವಂತೆ ನಿಶ್ಚಯಿಸಲ್ಪಟ್ಟಿರಲಾಗಿ, ಅದೇಸಮಯಕ್ಕೆ ಹಿಮವತ್ಕೇದಾರದಿಂದ ಹೊರಟು ಸಂಚರಿಸುತ್ತ ಬಂದ ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯ ಮಹಾ ಸ್ವಾಮಿಗಳವರ ಸವಾರಿಯು ಇಲ್ಲಿಗೆ ದಯಮಾಡಿಸಲಾಗಿತ್ತು. ಇದರಿಂದ ಸಮ್ಮೇಲನಕ್ಕೆ ವಿಶೇಷ ಶೋಭೆಯುಂಟಾಯಿತು.

ಬಳಿಕ ತಾರೀಖು ೨೪—೧೨—೧೯೧೯ ನೇ ಇಸ್ವಿ ದಿವಸ ಸಮ್ಮೇಲನದ ಕಾರ್ಯಕ್ರಮಗಳು ಯಶಸ್ವಿಯಾಗಿ ಜರಗಿದವು. ಬಳಿಕ ಸರ್ವಾನುಮತದಿಂದ ಕೆಳಗೆ ಬರೆದ ಠರಾವುಗಳು ಪಾಸಾದವು.

೧. ಗುರುವರ್ಗದ ಪಟ್ಟಚರಮೂರ್ತಿಗಳು ಸರ್ವರೂ ಭಿನ್ನಭಾವಗಳನ್ನು ಬಿಟ್ಟು ಪರಸ್ಪರ ಐಕ್ಯಮತ್ಯದಿಂದ ಇರತಕ್ಕದ್ದು.

೨. ಧರ್ಮಾನುಸಾರವಾಗಿ ಅನುಗ್ರಹ ( ಬ್ರಹ್ಮೋಪದೇಶ ) ವನ್ನು ಮಾಡಲಿಕ್ಕೆ ಅನಧಿಕಾರಿಗಳಾದ ವಿರಕ್ತರಕಡೆಯಿಂದ ಉಪದೇಶವ ಪಡೆದುಕೊಳ್ಳುವದನ್ನು ಬಿಟ್ಟು ತಮ್ಮ ತಮ್ಮ ಸೂತ್ರಗಳನುಸಾರವಾಗಿ ಮೂಲಪೀಠಾಚಾರ್ಯರಿಂದ ಉಪದೇಶ ( ಅನುಗ್ರಹ ) ವನ್ನು ಪಡೆದು ಮುಕ್ತರಾಗತಕ್ಕದ್ದು.

೩. ತಮ್ಮ ತಮ್ಮ ಅಧಿಕಾರವನ್ನು ಸದ್ವಂಶಸಂಜಾತನೂ ಧರ್ಮಶಾಸ್ತ್ರಜ್ಞನೂ ಹಾಗು ಜಿತೇಂದ್ರಿಯನೂ ಆದ ವಟುವಿಗೆ ಕೊಡಬೇಕಲ್ಲದೆ, ಭಕ್ತವರ್ಗದ ಮಕ್ಕಳಿಗೆ ಕೊಡುವದನ್ನು ಅತ್ಯಂತವಾಗಿ ದೂರೀಕರಿಸತಕ್ಕದ್ದು.

೪. ವೀರಶೈವ ಧರ್ಮಶಾಸ್ತ್ರಾನುಸಾರವಾಗಿ ಪಂಚಪೀಠಾಧೀಶರೂ ದೀಕ್ಷಾ-ಶಿಕ್ಷಾ-ಮೋಕ್ಷ ಗುರುಗಳಾಗಿದ್ದಾಗ್ಯೂ ಇದರ ತತ್ವವನ್ನು ತಿಳಿಯದೆ, ವಿರಕ್ತರಲ್ಲಿ ಗುರುತ್ವವನ್ನು ಕಲ್ಪಿಸಿ ಭಕ್ತಿಯಿಂದ ನಡೆಯುತ್ತಿರುವದನ್ನು ನಿಷೇಧಿಸತಕ್ಕದ್ದು.

೫. ಯಾವತ್ತೂ ವೀರಶೈವ ಮಂಡಳಿಯಲ್ಲಿ ವಿರಕ್ತರು ಮಹಾಗುರುಗಳೆಂದು ಪ್ರಬಲವಾಗಿ ಸ್ಥಿರಪಟ್ಟಿರುವ ಅಭಿಪ್ರಾಯವನ್ನು ದೂರಮಾಡುತ್ತ ವೀರಶೈವ ಧರ್ಮ ಶಾಸ್ತ್ರಾನುಸಾರವಾಗಿ ಸರ್ವತರದ ವೀರಶೈವರಿಗೆ ಮತಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ಪಂಚಾಚಾರ್ಯರೇ ಮುಖ್ಯ ಗುರುಗಳೆಂದು ತಿಳುಹಿಸಿಕೊಡತಕ್ಕದ್ದು.

೬. ಗುರುವರ್ಗದವರು ತಮ್ಮ ಪೂರ್ವಾಚಾರ್ಯರಂತೆ ಸಂಸ್ಕೃತ ವಿದ್ಯೆಯಲ್ಲಿ ಪೂರ್ಣ ಪ್ರೇಮವನ್ನಿಟ್ಟು, ಅದನ್ನು ಸಂಪಾದಿಸಿಕೊಳ್ಳುವ ಯತ್ನವನ್ನು ಸರ್ವರೀತಿಯಿಂದ ಮಾಡತಕ್ಕದ್ದು.

೭. ಶ್ರೀಮಜ್ಜಗದ್ಗುರು ಪಂಚಾಚಾರ್ಯರ ವಿಷಯವಾಗಿ ಪ್ರಾಚೀನ ಪಂಡಿತರಿಂದ ಬರೆಯಲ್ಪಟ್ಟ ಸಂಸ್ಕೃತ ಚರಿತ್ರೆಗಳನ್ನು ತಾವು ಹೋದ ಹೋದಲ್ಲಿ ವಿಚಾರಿಸಿ ಸಂಗ್ರಹಮಾಡುವ ಯತ್ನವನ್ನು ಮಾಡತಕ್ಕದ್ದು.

೮. ಈ ಸಮ್ಮೇಲನವು ಪ್ರತಿವರುಷ ಅವಿಚ್ಛಿನ್ನವಾಗಿ ನಡೆಯುವಂತೆ ಸುವ್ಯವಸ್ಥೆಯನ್ನು ಮೊದಲುಮಾಡತಕ್ಕದ್ದು.

೯. ಆಯಾಯ ಪ್ರಾಂತಗಳಲ್ಲಿರುವ ಗುರುವರ್ಗದವರ ಸುಧಾರಣೆಗೋಸ್ಕರ ಅಲ್ಲಲ್ಲಿಗೆ ಸಣ್ಣ ಸಭೆಗಳನ್ನು ಕೂಡಿಸಿ, ಆ ಸಭೆಗಳಲ್ಲಿ ಸನ್ಯಾಸಾಶ್ರಮ ವಿಮರ್ಶ ತತ್ವಸ್ಥಿರೀಕರಣ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟ ವೇದಾಗಮಮಾನ್ಯವಾದ ಯಥಾರ್ಥ ಪ್ರಾಚೀನ ಸಿದ್ಧಾಂತವನ್ನು ವೀರಶೈವ ಮಂಡಳಿಗೆ ಉಪದೇಶಿಸತಕ್ಕದ್ದು.

೧೦. ವಿರಕ್ತರು-ಗುರುಸ್ಥಲದವರು ನೆರವೇರಿಸುವ ಕಾರ್ಯಗಳಲ್ಲಿ ವಿಶೇಷವಾಗಿ ಕೈಹಾಕುವದರಿಂದ ಈ ಶಾಸ್ತ್ರವಿರುದ್ಧವಾದ ಪದ್ಧತಿಯನ್ನು ಅತ್ಯಂತವಾಗಿ ನಿಷೇಧಿಸತಕ್ಕದ್ದು.

ಈಪ್ರಕಾರ ನಿರ್ಣಯಗಳು ಪಾಸಾದವು. ಇವುಗಳನ್ನು ಶ್ರೀ ಜ. ಪಂಚಸಿಂಹಾಸನಾಧೀಶರಲ್ಲಿಗೂ, ವರ್ತಮಾನ-ಮಾಸಿಕಪತ್ರಗಳಲ್ಲಿಯೂ ಪ್ರಸಿದ್ಧಮಾಡಲ್ಪಡಬೇಕೆಂದು ನಿರ್ಣಯಮಾಡಿ ಸಭಾಕಾರ್ಯವು ಪರಿಪೂರ್ಣವಾಯಿತು.

---

ಇತ್ತ ಉಜ್ಜಯಿನೀ ಸಂಸ್ಥಾನದಲ್ಲಿ ಮಹಾಶ್ರೀಗಳವರು ಕುಂದಗೋಳದಲ್ಲಿ ಜರುಗಿದ ೧ನೇ ಪಟ್ಟ ಚರಾಧಿಕಾರಿಗಳ ಸಮ್ಮೇಳನದ ರಿಪೋರ್ಟು ಸನ್ನಿಧಿಗೆ ಬರಲು ನೋಡಿ ತುಂಬಾ ಹರ್ಷಿತರಾದರು. ಹಾಗೂ ಈ ಮೊದಲು ನಡೆದಿರುವ ವ್ಯಾಜ್ಯಗಳನ್ನು ಮದ್ರಾಸ ಹೈಕೋರ್ಟುಗಳಲ್ಲಿ ಜರುಗಿಸುತ್ತಲೂ, ಕಾಶಿ, ಕಲಕತ್ತಾ, ಸೊಲ್ಲಾಪುರ, ಬೆಂಗಳೂರು, ಮೈಸೂರು, ಚಿತ್ರದುರ್ಗ ಮುಂತಾದ ಕಡೆ ಕಾಲೇಜು-ಹೈಸ್ಕೂಲು

ಗಳಲ್ಲಿ ಇಂಗ್ಲೀಷ, ಕನ್ನಡ, ಸಂಸ್ಕೃತ ಅಭ್ಯಾಸಮಾಡುತ್ತಿರುವ ಕೆಲವು ಪ್ರೌಢ ವಿದ್ಯಾರ್ಥಿಗಳಿಗೆ ಪ್ರತಿತಿಂಗಳಿಗೂ ವೇತನಗಳನ್ನು ದಯಪಾಲಿಸುತ್ತಿದ್ದರು.

ಇಂತಹ ಮಹತ್ಕಾರ್ಯಗಳೆಲ್ಲಾ ಕೇವಲ ಸರ್ಕೀಟು-ಸಂಚಾರದಿಂದಲೇ ಜರುಗಿಸುತ್ತಾ ಉಜ್ಜಯಿನೀ ಮಹಾಪೀಠಕ್ಕೆ ತುಂಬಾ ಗೌರವವನ್ನು ತಂದರೆಂದು ದೇಶದಲ್ಲಿ ಸರ್ವರೂ ಕೊಂಡಾಡುತ್ತಿದ್ದರು. ಈರೀತಿಯಿಂದ ಸಂಸ್ಥಾನದ ಸಕಲವಿಧ ಕಾರ್ಯಗಳನ್ನು ಚತುರೋಪಾಯಗಳಿಂದ ನಡೆಸುತ್ತ ಸಂಸ್ಥಾನಕ್ಕೆ ಆಗಿರುವ ಸಾಲದ ಭಾರವನ್ನು ಇಳುಹಲು ಯೋಚನೆಮಾಡಿ ಪುನಃ ಸರಕೀಟನ್ನು ಹೊರಡಿಸಿ ಬಳ್ಳಾರಿಕಡೆಗೆ ದಯಮಾಡಿಸಿದರು.

## ಬೀರೂರು. ವೀರಶೈವ ಮಹಾಸಭೆಗೆ ಪ್ರಯಾಣ

ಮೈಸೂರು ರಾಜ್ಯದಲ್ಲಿ ಪ್ರಸಿದ್ಧ ಅಡಿಕೆಯ ವ್ಯಾಪಾರಸ್ಥಲವಾದ ಬೀರೂರು ಗ್ರಾಮದ ವೀರಶೈವ ಪ್ರಮುಖರು ಸೇರಿ ಅಖಿಲ ಭಾರತೀಯ ವೀರಶೈವ ೯ನೇ ಮಹಾಸಭೆಯನ್ನು ತಮ್ಮಲ್ಲಿ ಜರುಗಿಸಬೇಕೆಂದೂ ಮತ್ತು ಮಹಾಸಭೆಗೆ ಶ್ರೀ ಜ. ಪಂಚಪೀಠಾಧೀಶ ಮಹಾಸ್ವಾಮಿಗಳವರನ್ನು ಆಹ್ವಾನಿಸಿಕೊಳ್ಳಬೇಕೆಂದೂ ನಿಶ್ಚಯಮಾಡಿಕೊಂಡು ಪಂಚಪೀಠಾಧೀಶ್ವರರ ಸನ್ನಿಧಿಗೆ ಬಿನ್ನೈಸಿಕೊಂಡರು.

ಬೀರೂರು ಮಹಾಜನಗಳು ಬಿನ್ನೈಸಿಕೊಂಡದ್ದಕ್ಕೆ ಮಹಾ ಶ್ರೀಗಳವರು ತುಂಬಾ ಸಂತೋಷಚಿತ್ತರಾಗಿ ನಿಮ್ಮ ಅಪೇಕ್ಷೆಯಂತೆ ಮಹಾಸಭೆಗೆ ದಯಮಾಡಿಸೋಣಾಗುತ್ತದೆ. ಎಂದು ಶುಭಾಶೀರ್ವಾದ ಪತ್ರಿಕೆಯನ್ನು ದಯಪಾಲಿಸಿದರು. ಮಹಾಸಭೆಗೆ ಪಂಚಾಚಾರ್ಯ ಮಹಾಸ್ವಾಮಿಳವರು ಆಗಮನಮಾಡುವರೆಂಬ ಸದ್ವಾರ್ತೆಯು ವರ್ತಮಾನಪತ್ರಿಕೆಗಳಲ್ಲಿಯೂ, ಹಸ್ತಪತ್ರಿಕೆಗಳಲ್ಲಿಯೂ ದೇಶದ ತುಂಬಾ ಪ್ರಸಿದ್ಧಮಾಡಲ್ಪಟ್ಟದ್ದರಿಂದ ಅನೇಕ ಸಹಸ್ರಾವಧಿ ಜನರು ಬೀರೂರು ಮಹಾಸಭೆಗೆ ಹೋಗಬೇಕು. ಜಗದ್ಗುರುಗಳವರ ದರ್ಶನ ಒಂದೇ ಕಾಲಕ್ಕೆ ಆಗುವದೆಂದು ಅತ್ಯಂತ ಉತ್ಸುಕತೆಯಿಂದ ತಯ್ಯಾರಾದರು.

ಉಜ್ಜಯಿನೀ ಮಹಾ ಶ್ರೀಗಳವರು ಬಳ್ಳಾರಿ ಪ್ರಾಂತದಲ್ಲಿದ್ದುದರಿಂದ ಮುಂಚಿತವಾಗಿಯೇ ಬೀರೂರು ಪ್ರಯಾಣ ನಿಶ್ಚಯಿಸಿ, "ಧರ್ಮತರಂಗಿಣಿ" ಮಾಸಪತ್ರಿಕೆಯಲ್ಲಿ ತಮ್ಮ ಪ್ರೋಗ್ರಾಂ- ಮುಕ್ಕಾಮುಗಳನ್ನು ಪ್ರಕಟನೆಗೊಳಿಸಿ, ತಮ್ಮ ಸರಕೀಟು ಸಿಬ್ಬಂದಿ ಸಮೇತವಾಗಿ ಹೊರಟು, ತಾ. ೨೪-೧೨-೧೯೧೯ ದಿವಸಕ್ಕೆ ಬೀರೂರಿಗೆ ಆಗಮಿಸಲು, ಪುರಪ್ರಮುಖರು ಅತಿವೈಭವದೊಡನೆ ಉತ್ಸವಪೂರ್ವಕ ಕರತಂದು, ಬಳ್ಳಾರಿ ಗಡಿಗಿ ವೀರಭದ್ರಪ್ಪನವರ ಉದ್ಯಾವನದಲ್ಲಿರುವ ಭವ್ಯವಾದ ಬಂಗ್ಲೆಯಲ್ಲಿ ಮುಕ್ಕಾಮು ಮಾಡಿಸಿದರು.

ಇದೇ ಸಮಯಕ್ಕೆ ರಂಭಾಪುರೀ ಜಗದ್ಗುರು ಶ್ರೀ ಪಂಚಾಕ್ಷರ ಮಹಾಸ್ವಾಮಿಗಳವರೂ, ಕೇದಾರ ಪೀಠದ ಜಗದ್ಗುರು ಶ್ರೀ ವಿಶ್ವಲಿಂಗ ಶಿವಾಚಾರ್ಯ ಮಹಾ

ಸ್ವಾಮಿಗಳವರೂ ಆಗಮಿಸಿದ್ದರು. ಇನ್ನುಳಿದ ಶ್ರೀಶೈಲ, ಕಾಶೀ ಪೀಠಗಳ ಜಗದ್ಗುರುಗಳವರು ಮಹಾಸಭೆಗೆ ಆಗಮಿಸಲು ಸಾಧ್ಯವಾಗಲಿಲ್ಲ. ಮಹಾಸಭಾಕಾರ್ಯವು ನಿರ್ವಿಘ್ನವಾಗಿ ನೆರವೇರಲಿ. ಎಂದು ಶುಭಸಂದೇಶವನ್ನು ಪತ್ರಿಕಾ ಮೂಲಕ ಬೀರೂರು ಪ್ರಮುಖರಿಗೆ ಶೃತಪಡಿಸಿದ್ದರು.

## ೯ ನೇ ವೀರಶೈವ ಮಹಾಸಭಾ ಕಾರ್ಯ ಪ್ರಾರಂಭಃ

### ( ತಾ. ೨೭-೦೨-೧೯೧೯ )

ಈ ವೀರಶೈವ ಮಹಾಸಭಾ ಕಾರ್ಯಕ್ಕೆ ದೂರ ದೂರ ಪ್ರದೇಶಗಳಿಂದ ಅಸಂಖ್ಯಾತ ಜನಸಮೂಹವೂ, ಪಟ್ಟ-ಚರಾಧಿಕಾರಿಗಳೂ, ಪಂಡಿತರೂ, ಶಾಸ್ತ್ರಿಗಳೂ, ವಕೀಲರೂ, ಪದವೀಧರರೂ, ಶ್ರೀಮಂತರೂ, ಧೀಮಂತರೂ ಬಹಳ ಉತ್ಸುಕತೆಯಿಂದ ಸೇರಿದ್ದರು. ತಾ. ೨೭ ನೇ ದಿವಸ ಶ್ರೀ ದಿವಾನಬಹಾದ್ದೂರ ಪುಟ್ಟಣ್ಣ ಶೆಟ್ಟರವರು ಇಳಿದುಕೊಂಡ ಸ್ಥಲದಲ್ಲಿ ಕೆಲವು ಸಮಾಜ ಪ್ರಮುಖರು ಕೂಡಿದ್ದರು. ಆಗ ಪಂಚಪೀಠಾಚಾರ್ಯರ ಉನ್ನತಾಸನದಬಗ್ಗೆ ಚರ್ಚೆನಡೆಯುವದಾಗಿತ್ತು. ವಿಚಾರ ಮಾಡಿ ನೋಡಿದರೆ ಆಸನಗಳಬಗ್ಗೆ ಚರ್ಚೆಯು ನಡೆಯುವ ಕಾರಣವೇ ಇದ್ದಿಲ್ಲ. ಯಾಕಂದರೆ ಸಿಂಹಾಸನಾಧಿಪತಿಗಳ ಹೊರ್ತು ಬೇರೆ ಯಾರೂ ಶ್ರೇಷ್ಠರು ಬಂದಿದ್ದಿಲ್ಲ. ಸಿಂಹಾಸನಾಧಿಪತಿಗಳಲ್ಲಂತೂ ಪರಸ್ಪರ ಐಕ್ಯಮತ್ಯವಿದ್ದಿತು. ಹೀಗಿರಲು ದಾವಣಗೆರೆ ಮೊದಲಾದ ಕೆಲವರು ಸಭಾಮಂಟಪದ ಮೇಲ್ಭಾಗದಲ್ಲಿ ಚಿತ್ರದುರ್ಗದ ಶ್ರೀಗಳವರ ಭಾವಪಟ (ಫೋಟೊ) ಇಡಬೇಕೆಂಬ ಪ್ರಶ್ನೆಯನ್ನು ತೆಗೆದರು. ಮತ್ತೊಬ್ಬರು ತಮಗೆ ಬೇಕಾದ ಶ್ರೀಗಳವರ ಫೋಟೊ ಇಡಬೇಕೆಂದರು. ಕೆಲವರು ಈಗ ಬಂದಿರುವ ಪೀಠಾಚಾರ್ಯರೇ ಸಭೆಗೆ ದಯಮಾಡಿಸದಂತೆ ಅವರಿಗೆ ಹೇಳಿಕೊಳ್ಳಬೇಕೆಂದು ವಿಧವಿಧವಾಗಿ ಮಾತಾಡಿದರು.

ಆಗ ಬೇರೊಬ್ಬ ಸದ್ಗೃಹಸ್ಥರು ಬೀರೂರವರು ತ್ರಿಪೀಠದ ಸ್ವಾಮಿಗಳವರನ್ನು ಬಿನ್ನೈಸಿ ಕರೆಯಿಸಿಕೊಂಡಿರುವದರಿಂದ ಅವರನ್ನು ಸಭೆಗೆ ಬರಮಾಡಿಕೊಳ್ಳದಿರುವದು ಬಹಳ ತಪ್ಪಾಗುವದೆಂದು ವಿಹಿತವಾದ ಮಾತಾಡಿದರು. ಆದಕ್ಕೆ ಮೈಸೂರವರು ಸಿಂಹಾಸನಾಧಿಪತಿಗಳನ್ನು ಕರೆಯಿಸಿಕೊಳ್ಳುವದಕ್ಕೆ ಬೀರೂರವರಿಗೆ ಯಾವ ಅಧಿಕಾರವಿತ್ತೆಂದು ವಾದಿಸಿದರು. ಇದಕ್ಕೆ ಮತ್ತೊಬ್ಬರು ಕೋಪದಿಂದ- ಹಾಗಾದರೆ ಈ ಮೊದಲು ದಾವಣಗೆರೆಯಲ್ಲಿ ನಡೆದ ೮ ನೇ ಮಹಾಸಭೆಗೆ ಚಿತ್ರದುರ್ಗದ ಶ್ರೀಗಳವರನ್ನು ಕರೆಯಿಸಿಕೊಳ್ಳಲಿಕ್ಕೆ ದಾವಣಗೇರಿಯವರಿಗೆ ಯಾವ ಅಧಿಕಾರವಿತ್ತೆಂದು ವಾದಿಸಿದರು. ಈ ಪ್ರಕಾರ ಪರಸ್ಪರ ವಾಗ್ವಾದಗಳು ಜರಗುತ್ತ ಸ್ವೇಚ್ಛಾರೀತಿಯಿಂದ ಮಾತಾಡಿ, ಗೊಂದಲವೆಬ್ಬಿಸಿ ಹೊರಟುಹೋದರು.

ಈ ಸಮಯದಲ್ಲಿ ದಿ. ಬ. ಪುಟ್ಟಣ್ಣ ಶೆಟ್ಟರೂ ಮತ್ತು ಈ ಮಹಾಸಭಾಧ್ಯಕ್ಷರಾಗಿ ಆರಿಸಿದ್ದ ಧಾರವಾಡದ ಶ್ರೀಯುತ ಮೆಣಶಿನಕಾಯಿ ಶಾಂತವೀರಪ್ಪನವರೂ,



ಜೀರೂರು ವೀರಪ್ಪನ ]  ಉ. ಸಿದ್ಧಲಿಂಗಸ್ವಾಮಿಗಳು  ಕೆ. ವಿಶ್ವಲಿಂಗಸ್ವಾಮಿಗಳು  ಜಾ. ಪಂಚಾಕ್ಷರಸ್ವಾಮಿಗಳು  [ ಮಹಾ ಸಭೆಯಲ್ಲಿ

ಪಿ. ಮಹದೇವಯ್ಯನವರೂ ಬಹುಪರಿಯಿಂದ ಸಮಾಧಾನೋಕ್ತಿಗಳನ್ನು ಹೇಳಿವರೂ ಸ್ವಾರ್ಥಪರರೂ, ಪಕ್ಷಾಂಧರೂ ಆದ ಕೆಲಜನರು ಮಹಾಸಭೆಯು ಕೆಟ್ಟು, ಲೋಕಾಪವಾದ ಉಂಟಾಗುವದೆಂಬುವಬಗ್ಗೆ ತಿಲಾಂಶವಾದರೂ ಲಕ್ಷವಿಡದೆ, ಭಯಪಡದೆ ತಮ್ಮ ಹುಂಬತನವನ್ನೂ, ಅಸೂಯಾಬುದ್ಧಿಯನ್ನೂ ಸಾಧಿಸಿ ಎದ್ದುಹೋದರು.

ಇತ್ಯಾದಿ ಕಲಹಗಳಿಂದಲೇ ಆ ದಿವಸವು ಕಳೆದು ಹೋಯಿತು. ಇಂತಹ ಸಮಯದಲ್ಲಿ ಆಗ ನಡೆದ ವಿಷಯಗಳನ್ನು ನಮ್ಮ ಉಜ್ಜಯಿನೀ ಮಹಾಶ್ರೀಗಳವರು ಕೇಳಿ, ತಮ್ಮ ಹಟವನ್ನು ಸಾಧಿಸಿ, ನಾವೇ ಸಭೆಗೆ ದಯಮಾಡಿಸುತ್ತೇವೆಂದು ಹೊರಟಿದ್ದರೆ ಏನಾಗುತ್ತಿತ್ತು? ಕೆಲವರು ಹೊರಟುಹೋಗುತ್ತಿದ್ದರು. ಉಳಿದವರೇ ಸೇರಿ ಮಹಾಸಭಾ ಕಾರ್ಯವನ್ನು ಪೂರೈಸಿಬಿಡುತ್ತಿದ್ದರು.

ವಾಚಕರೇ, ಪರಮ ಶಾಂತಮೂರ್ತಿಗಳೂ, ಶಿವಯೋಗಿ ಪುಂಗವರೂ ಆದ ಸಿದ್ಧಲಿಂಗ ಮಹಾಸ್ವಾಮಿಗಳವರು ಆ ರೀತಿ ಮಾಡುವದರಿಂದ ಸಮಾಜದಲ್ಲಿ ಅಶಾಂತತೆ, ದ್ವೇಷಾಸೂಯಾದಿಗಳು ಬೆಳೆದು ದೇಶದಲ್ಲಿ ನಾನಾವಿಧವಾಗಿ ಗೊಂದಲ ವೇಳುವದೆಂದು ಪೂರ್ವಾಪರ ದೀರ್ಘಾಲೋಚನೆಯಂ ಮಾಡಿ, ಇನ್ನುಳಿದ ಪೀಠಾಚಾರ್ಯರೊಡನೆ ಆಲೋಚನೆಗೈದು, ಆಗ ಪ್ರಮುಖರನ್ನು ಸನ್ನಿಧಿಗೆ ಕರೆಯಿಸಿಕೊಂಡು, "ಮಹಾಶಯರೇ, ಯಾಕೆ ಗೊಂದಲ ಮಾಡುವಿರಿ. ನಾವೇ ಸಭೆಗೆ ದಯಮಾಡಿಸುವದನ್ನು ಬಿಡುತ್ತೇವೆ. ಮಹಾಸಭಾ ಕಾರ್ಯವನ್ನು ಮಾತ್ರ ಸಾಂಗವಾಗಿ ಪೂರೈಸಿಕೊಳ್ಳಿರಿ." ಎಂದು ಅಪ್ಪಣೆಕೊಡಿಸಿದರು.

ಈ ರೀತಿ ಆ ಮಹಾನುಭಾವರು ಅಪ್ಪಣೆಕೊಡಿಸಿದ್ದನ್ನು ಕೇಳಿ, ಸಮಸ್ತ ಜನರಿಗೂ ಬಹುಸಂತೋಷ ಉಂಟಾಯಿತು. ಮಹಾ ಶ್ರೀಗಳವರ ಶಾಂತತೆ, ಸಹಾನುಭೂತಿಯನ್ನೂ, ಸಮಾಜ ಪ್ರೇಮವನ್ನೂ ಕೊಂಡಾಡಿ, ಅವರಿಗೆ ವಂದನಪೂರ್ವಕ ಕೃತಜ್ಞತೆಯನ್ನರ್ಪಿಸಿದರು. ಮಹಾಸಭಾ ಕಾರ್ಯವು ಸರಿಯಾಗಿ ಜರುಗದ ಕಾರಣ ಎಷ್ಟೋ ಜನರು ತಿರುಗಿ ಹೊರಟುಹೋದರು. ಕೆಲವರು ತ್ರಿಪೀಠಾಧಿಪತಿಗಳಾದ ಜಗದ್ಗುರುಗಳವರ ಸನ್ನಿಧಿಯಲ್ಲೇ ಸಭಾಕಾರ್ಯ ನಡೆಯಿಸಬೇಕೆಂದು ನಿರ್ಧರಿಸಿ, ತಾ. ೩೦-೧೨-೧೯೧೯ ಇಸ್ವಿ ದಿವಸ ತ್ರಿಪೀಠದ ಜಗದ್ಗುರುಗಳವರ ಸನ್ನಿಧಿಯಲ್ಲೇ ಪ್ರಚಂಡ ಸಭೆ ಸೇರಿತು. (ಧಾರವಾಡ ಧರ್ಮತರಂಗಿಣಿ ಡಿಶಂಬರ ಸಂಚಿಕೆಯಿಂದ)

ಶ್ರೀಗುರು ಭಕ್ತಿಪರಾಯಣರಾದ ಅನೇಕ ಭಕ್ತಮಂಡಳಿಯೂ, ಪಂಡಿತರೂ, ಶಾಸ್ತ್ರಿಗಳವರೂ ಅತ್ಯಂತ ಉಪಯುಕ್ತವಾದ ಸರಸ ಭಾಷಣಗಳನ್ನು ಮಾಡಿದರು. ಬಳಿಕ ಶ್ರೀ ರಂಭಾಪುರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮ ಗಂಭೀರವಾಣಿಯಿಂದ ಅತಿ ಮಹತ್ವವಾದ ಭಾಷಣ ಗೈದರು. ಕೇದಾರ ಪೀಠದ ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯರು ಹಿಂದೀಭಾಷೆಯಲ್ಲಿ ಸಾರವತ್ತಾದ ಅಲ್ಪ ಭಾಷಣ ಮಾಡಿದರು. ತರುವಾಯ ಉಜ್ಜಯಿನೀ ಜ। ಶ್ರೀಗಳವರು

ಎಲ್ಲಾ ವಿಷಯಗಳ ಕ್ರೂಡೀಕರಿಸಿ ಅಪ್ಪಣೆಕೊಡಿಸಿದ್ದಲ್ಲದೆ ಅದೇ ಸಮಯಕ್ಕೆ ಬಹು ಕಡೆಯಿಂದ ಆಗಮಿಸಿದ ಶ್ರೀ ಪಟ್ಟ-ಚರಾಧಿಕಾರಿಗಳವರನ್ನು ಉದ್ದೇಶಿಸಿ ಬಹುಕಳಕಳಿಯಿಂದ- ಭೋ ಗುರುವರ್ಗಮೂರ್ತಿಗಳೇ, ನೀವು ಸಮಾಜೋದ್ಧಾರಕ್ಕಾಗಿ ಅಧಿಕಾರಕ್ಕೆ ಬಂದಿರುತ್ತೀರಿ. ಮುಂದೆ ನೀವೆಲ್ಲರೂ ಐಕ್ಯಮತ್ಯದಿಂದ ಬಹು ಜಾಗರೂಕರಾಗಿರಿ. ಮತ್ತು ನಿಮ್ಮ ನಿಮ್ಮ ಪ್ರದೇಶಗಳಲ್ಲಿ ಪಟ್ಟ-ಚರಾಧಿಕಾರಿಗಳ ಸಮ್ಮೇಲನಗಳನ್ನು ನಡೆಯಿಸಿ, ಧರ್ಮಶಾಸ್ತ್ರಾಭ್ಯಾಸ ಮಾಡಿ, ಜಿತೇಂದ್ರಿಯರಾಗಿ ಸದಾಚಾರ ಸಂಪನ್ನರಾಗಿರಿ. ನಿಮ್ಮ ವೇಷ-ಭೂಷಣಗಳನ್ನು ಧರ್ಮಶಾಸ್ತ್ರ ಪದ್ಧತಿಯಂತೆ ಇಟ್ಟುಕೊಂಡು ಭಕ್ತರಿಗೆ ಸದ್ಬೋಧಮಾಡುತ್ತ ಸಮಾಜ ಕಾರ್ಯದಲ್ಲಿ ದುಡಿದು ಕೀರ್ತಿಗೂ ಮುಕ್ತಿಗೂ ಪಾತ್ರರಾಗಿರಿ. ಇತ್ಯಾದಿ ಸರಸವಾದ ಸಂದೇಶವನ್ನು ಅಪ್ಪಣೆಕೊಡಿಸಲು ಸರ್ವರೂ ಪರಮ ಸಂತೋಷಭರಿತರಾಗಿ ಫಲಾಶೀರ್ವಾದಗಳನ್ನು ಪಡೆದು, ಸ್ವಗ್ರಾಮಗಳಿಗೆ ತೆರಳಿದರು.

ಬೀರೂರಿಂದ ರಂಭಾಪುರೀ-ಉಜ್ಜಯಿನೀ ಜಗದ್ಗುರುಗಳವರು ಹೊರಟು ತಮ್ಮ ಪೀಠಗಳಿಗೆ ಆಗಮಿಸಿದರು. ಈ ಪೈಕಿ ಕೇದಾರ ಜಗದ್ಗುರುಗಳವರು ಗ್ರಾಮಾನುಗ್ರಾಮಗಳಲ್ಲಿ ಸಂಚರಿಸುತ್ತ ಉಜ್ಜಯಿನೀ ಮಹಾಪೀಠಕ್ಕೆ ಮುಕ್ಕಾಂ ಮಾಡಬೇಕೆಂದು ಪ್ರಯಾಣಸ್ಥರಾಗಿದ್ದರು.

## ಶ್ರೀ ಮರುಳಸಿದ್ಧೇಶ್ವರ ಜಾತ್ರೆಯೂ, ಸದ್ಧರ್ಮ ಪರಿಷತ್ತೂ

ಉಜ್ಜಯಿನೀ ಮಹಾ ಶ್ರೀಗಳವರು ಬೀರೂರಿಂದ ಸಿಬ್ಬಂದಿಯೊಡಗೂಡಿ ಪ್ರಯಾಣಮಾಡುತ್ತ ಮಹಾಸಂಸ್ಥಾನಮಠಕ್ಕೆ ಆಗಮಿಸುವಷ್ಟರಲ್ಲಿ ಪ್ರಾಚೀನಕಾಲದಿಂದಲೂ ನಡೆಯುತ್ತ ಬಂದ ಪದ್ಧತಿಪ್ರಕಾರ ಉಜ್ಜಯಿನೀ ಶ್ರೀ ಮರುಳಸಿದ್ಧೇಶ್ವರನ ಜಾತ್ರೆಯ ಮಿತಿಯು ಪ್ರಾಪ್ತವಾಯಿತು. ಇದೇ ಸುಸಮಯದಲ್ಲಿ ಯಾತ್ರಾರ್ಥಿಗಳಾಗಿ ಬಹುಜನರು ಅನಾಯಾಸದಿಂದ ಇಲ್ಲಿಗೆ ಸೇರುವರು. ಆಗ ಸದ್ಧರ್ಮ ಪರಿಷತ್ತು ನೆರೆಯಿಸಬೇಕೆಂದು ೧ ತಿಂಗಳು ಮುಂಚಿತವಾಗಿಯೇ ಪರಿಷತ್ತಿನ ಆಹ್ವಾನ ಪತ್ರಿಕೆಗಳನ್ನು ಈ ಕೆಳಗಿನಂತೆ ಮುದ್ರಿಸಿ ಸರ್ವತ್ರ ಪ್ರಸಿದ್ಧಪಡಿಸಿದರು.

॥ ಶ್ರೀ ಜಗದ್ಗುರು ಮರುಳಾರಾಧ್ಯಾಯ ನಮಃ ॥

ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರು ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ಸರ್ವಾಧಿಕಾರಸ್ಥಾನದಿಂದ-

ಮದ್ರಾಸ, ಮುಂಬಯಿ, ಮೈಸೂರು, ಹೈದರಾಬಾದ ಮೊದಲಾದ ಪ್ರಾಂತಗಳಲ್ಲಿರತಕ್ಕ ಯಾವತ್ತು ವೀರಶೈವ ಶಿಷ್ಯಮಂಡಳಿಗೆ ಅಪ್ಪಣೆಕೊಡುವದೇನಂದರೆ:— ಯುಗಯುಗಾಂತರಗಳಿಂದ ಪರಮ ಪವಿತ್ರವಾದ ವೀರಶೈವ ಮತವನ್ನು ಸ್ಥಾಪಿಸಿ ಜಗದ್ವಿಖ್ಯಾತರೂ, ಜಗತ್ಪೂಜ್ಯರೂ ಆದ ಜಗದ್ಗುರು ದಾರುಕಾಚಾರ್ಯರಿಂದ ವೀರ

ಶೈವಮತದ ರಕ್ಷಣಾದಿಗಳಿಗೋಸ್ಕರ ಉಜ್ಜಯಿನಿಯಲ್ಲಿ ಧರ್ಮಪೀಠವು ಸ್ಥಾಪಿಸಲ್ಪಟ್ಟ ಸಂಗತಿಯು ಲೋಕವಿಖ್ಯಾತವಷ್ಟೇ! ಆದರೆ ಇಂಥ ಜಗತ್ಪೂಜ್ಯವಾದ ಉಜ್ಜಯಿನೀ ಪೀಠದಲ್ಲಿ ಅನಾದಿಕಾಲದಿಂದ ಪ್ರತಿವರುಷ ವೈಶಾಖ ಶು. ೫ ತಿಥಿಯಲ್ಲಿ ಶ್ರೀಮನ್ಮರುಲಸಿದ್ಧೇಶ್ವರ ರಥೋತ್ಸವವಾಗುವದಾದರೂ ಜಗತ್ಪ್ರಸಿದ್ಧವೇ ಅದೆ. ಆದರೆ ಈ ವರ್ಷದ ರಥೋತ್ಸವಕ್ಕೆ **ಹಿಮಾಲಯ ಸಿಂಹಾಸನದ ಜಗದ್ಗುರುಗಳೂ, ಸದ್ಯಃ ಪೀಠಾಧಿರೂಢರಾದ ಜಗದ್ಗುರುಗಳೂ** ದಯಮಾಡಿಸೋಣದರಿಂದ ವಿಶೇಷ ಶೋಭೆಯುಂಟಾಗುತ್ತದೆ. ಇದೇ ರೌದ್ರಿ ಸಂವತ್ಸರ ವೈಶಾಖ ಶು. ೪-೫-೬ ತಿಥಿಗಳಲ್ಲಿ **ಜನೆಯ ಸದ್ಧರ್ಮ ಪರಿಷತ್ತು** ಕೂಡುವದು. ಕೆಳಗೆ ನಿಯಮಿಸಿದ ವಿಷಯಗಳ ಮೇಲೆ ಭಾಷಣಗಳು ಜರಗುವವಲ್ಲದೆ ಈ ವರ್ಷ ಹೊಸದಾಗಿ ಒಂದು ಪಂಡಿತ ಸಭೆಯನ್ನು ಏರ್ಪಡಿಸಿದೆ. ಪಂಡಿತರಿಗೆ ಅವರ ವಿದ್ವತ್ತಿಗೆ ಅನುಗುಣವಾಗಿ ವರ್ಷಾಶನವು ಪ್ರತಿವರ್ಷ ಕೊಡಲ್ಪಡುವದು. ಸಂಸ್ಕೃತದ ಯಾವ ಧರ್ಮಗ್ರಂಥಗಳನ್ನೇ ಆಗಲಿ, ವಿದ್ಯಾರ್ಥಿಗಳು ಅಭ್ಯಾಸ ಮಾಡಿಕೊಂಡು ಬಂದರೆ ಪರೀಕ್ಷೆಮಾಡಿ ಯೋಗ್ಯ ಸಂಭಾವನೆಯನ್ನು ಕೊಡುವದರಲ್ಲಿ ಬರುವದು. ಶ್ರೀಮಜ್ಜಗದ್ಗುರು ಪಂಚಾಚಾರ್ಯರ ಮೇಲೆ ಆಗಲಿ ಅಥವಾ ಒಬ್ಬೊಬ್ಬ ಆಚಾರ್ಯರ ಮೇಲೆಯಾಗಲಿ ಯಾರಾದರೂ ಶಿವಕೀರ್ತನಕಾರರು ಕೀರ್ತನಗಳನ್ನು ಮಾಡಿದರೆ ಅವರಿಗೆ ಸುವರ್ಣ ಪದಕವೂ ಹಾಗೂ ವರ್ಷಾಶನವೂ ದೊರೆಯುವದು. ಈ ತರದ ಸುಯೋಗವನ್ನು ಪ್ರತಿಯೊಬ್ಬ ವೀರಶೈವರು ಕಳೆದುಕೊಳ್ಳದೆ ಗುರುಪೀಠಕ್ಕೆ ಬಂದು ಜಗದ್ಗುರುಗಳವರ ಆಶೀರ್ವಾದವನ್ನು ಪಡೆದು ಧನ್ಯರಾಗಬೇಕೆಂದು ಕೋರಿಕೆಯು.

**ವಿಷಯಗಳು—**

೧. ವೀರಶೈವ ಮತಾಧಿಕ್ಯ ಹಾಗೂ ಪ್ರಾಚೀನತ್ವವು.
೨. ಗುರುವರ್ಗದವರ ಸುಧಾರಣೆಯು.
೩. ಧಾರ್ಮಿಕಾಚಾರ.
೪. ಸದ್ಯಃ ಪೀಠದಲ್ಲಿರತಕ್ಕ ಸಂಸ್ಕೃತ ಪಾಠಶಾಲೆಯ ವಿಚಾರವು.

ಉಜ್ಜಯಿನೀ
೧೦-೩-೧೯೨೦ } **ಮಹಾಸಂಸ್ಥಾನದ ಸರ್ವಾಧಿಕಾರಿಗಳು.**

ಈರೀತಿ ಪ್ರಸಿದ್ಧಮಾಡಿದ ಪ್ರಕಾರ ರೌದ್ರಿನಾಮ ಸಂವತ್ಸರದ ವೈಶಾಖ ಶು. ೫ (ತಾ. ೨೩-೫-೧೯೨೦) ದಿವಸ ಉಜ್ಜಯಿನೀ ಮಹಾಕ್ಷೇತ್ರಕ್ಕೆ ನಾನಾದೇಶಗಳಿಂದ ಭಕ್ತ-ಮಾಹೇಶ್ವರಾದಿ ಮಂಡಳಿಯೂ, ಪಟ್ಟಚರಾಧಿಕಾರಿಗಳೂ, ಪಂಡಿತರೂ, ಶಾಸ್ತ್ರಿಗಳೂ, ಶಾಲಾಮಾಸ್ತರರೂ ಮುಂತಾದ ಜನಸಮೂಹವು ಬಂದುಸೇರಿತು. ಆದಿವಸ

ಶ್ರೀ ಮರುಳಸಿದ್ಧೇಶ್ವರ ಮೂರ್ತಿಯ ಮಹಾರಥೋತ್ಸವವು; ಮೂರನೇ ದಿವಸ ಶ್ರೀ ಶಿಖರಕ್ಕೆ ಮಹಾತೈಲಾಭಿಷೇಕವೂ ಇತ್ಯಾದಿ ಮಹೋತ್ಸವಗಳು ಅತಿ ವೈಭವದಿಂದ ನೆರವೇರಿದವು. ಇದೇ ಸಮಯಕ್ಕೆ ಬೀರೂರಿಂದ ಕೇದಾರ ಜಗದ್ಗುರು ಮಹಾಸ್ವಾಮಿಗಳವರ ಸವಾರಿಯೂ ಆಗಮಿಸಿದ್ದರಿಂದ ಯಾತ್ರಾ ಸಮಾರಂಭವು ಬಹು ವಿಜೃಂಭಣೆಯಿಂದ ಸಾಗಿರಲು ೫ ನೇ ಸದ್ಧರ್ಮ ಪರಿಷತ್ ಸಭಾಮಂಟಪದಲ್ಲಿ ಉಭಯ ಜಗದ್ಗುರುಗಳವರ ಸನ್ನಿಧಿಯೊಳು ಪಂಡಿತರು ಮುಂತಾದವರ ಭಾಷಣಗಳಾದವು.

---

## ೨ ನೇ ಪಟ್ಟ-ಚರಾಧಿಕಾರಿಗಳ ಸಮ್ಮೇಲನವು

ಧಾರವಾಡ ಜಿಲ್ಹಾ ನವಲಗುಂದ ಗ್ರಾಮದಲ್ಲಿ ತಾ. ೨೬-೫-೧೯೨೦ ನೇ ದಿವಸ ಪಂಚಗೃಹ ಹಿರೇಮಠದ ಶ್ರೀ। ಷ। ಬ್ರ। **ವೃಷಭಲಿಂಗ ಶಿವಾಚಾರ್ಯ** ಸ್ವಾಮಿಗಳವರ ಪ್ರಯತ್ನದಿಂದ ಸರ್ವಸಿದ್ಧತೆ ಮಾಡಲ್ಪಟ್ಟು, ಹೂಲಿ ಬೃಹನ್ಮಠದ ಶ್ರೀ। ಷ। ಬ್ರ। ಪಂಡಿತ **ನೀಲಕಂಠ ಶಿವಾಚಾರ್ಯ** ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಮ್ಮೇಲನದ ಕಾರ್ಯಕ್ರಮಗಳು ಪ್ರಾರಂಭವಾಗಿ, ಪ್ರಥಮದಲ್ಲಿ ವೀರಶೈವ ಮತೋದ್ಧಾರಕರೂ, ತಪೋನಿಧಿಗಳೂ, ಶಿವಯೋಗಿಪುಂಗವರೂ ಆದ ಶ್ರೀಮದುಜ್ಜಯಿನೀ ಜಗದ್ಗುರು **ಸಿದ್ಧಲಿಂಗ ಶಿವಾಚಾರ್ಯ** ಮಹಾಸ್ವಾಮಿಗಳವರ ಧ್ಯಾನ, ಧನ್ಯವಾದಗಳು ನಡೆದವು.

ಅನೇಕ ವಿದ್ವಾಂಸರ ಭಾಷಣಗಳು ಜರಗಿದಮೇಲೆ ಸರ್ವಾನುಮತದಿಂದ ಠರಾವುಗಳು ಪಾಸಾದವು. ವಿವರ—

(೧) ಭರತಖಂಡದಲ್ಲಿರತಕ್ಕ ಯಾವತ್ತು ಗುರುಸ್ಥಲದವರು ಭೇದಭಾವವನ್ನು ಬಿಟ್ಟು ಮತೋರ್ಜಿತ ಕಾರಣವಾದ ಐಕ್ಯದಿಂದ ಇರತಕ್ಕದ್ದು.

(೨) ವೀರಶೈವ ಮತಸ್ಥಾಪಕರಾದ ಶ್ರೀ ರೇಣುಕಾದಿ ಪೂರ್ವಾಚಾರ್ಯರು ಶಕ್ತಿವಿಸಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪಿಸಿ, ಬ್ರಹ್ಮಸೂತ್ರಗಳ ಮೇಲೆಯೂ, ಶಿವಸೂತ್ರಗಳ ಮೇಲೆಯೂ ಭಾಷ್ಯಗಳನ್ನು ಬರೆದರು. ಈ ಸಿದ್ಧಾಂತ ಬೋಧಕಗಳಾದ ಗ್ರಂಥಗಳನ್ನು ಪ್ರಚಾರಪಡಿಸುವ ಯತ್ನವನ್ನು ಮಾಡತಕ್ಕದ್ದು.

(೩) ವೀರಶೈವ ಧರ್ಮಶಾಸ್ತ್ರಾನುಸಾರವಾಗಿಯೂ, ಐತಿಹಾಸಿಕ ದೃಷ್ಟಿಯಿಂದಲೂ ಮತಸ್ಥಾಪಕರಾದ ಶ್ರೀ ಪಂಚಾಚಾರ್ಯರೇ ಜಗದ್ಗುರುಗಳಿರುತ್ತಾರೆಂಬ ವಿಷಯವನ್ನು ಶಿಷ್ಯಮಂಡಳಿಗೆ ಬೋಧಿಸತಕ್ಕದ್ದು.

(೪) ಸರ್ವ ವೀರಶೈವರೂ ವಿಧ್ಯುಕ್ತವಾಗಿ ಶಿವದೀಕ್ಷಾ ಸಂಸ್ಕಾರ ಹೊಂದಬೇಕು. ಲಿಂಗಾಂಗಿಗಳೆಲ್ಲರೂ ಲಿಂಗವನ್ನು ಧರಿಸಿರಬೇಕು. ಲಿಂಗಾರ್ಚನೆಯಿಲ್ಲದೆ

ಭುಂಜಿಸಕೂಡದು. ವಿವಾಹ ಮುಂತಾದ ಕಾರ್ಯಗಳನ್ನು ತಮ್ಮ ಗುರುಸ್ಥಲದ ಮಠಾಧಿಕಾರಿಗಳಿಂದಲೇ ಮಾಡಿಸಬೇಕೆಂತಲೂ, ಇದಕ್ಕೆ ವಿರುದ್ಧವಾಗಿ ಆಚರಿಸಿದವರನ್ನು ಸಮಾಜದವರು ಬಹಿಷ್ಕರಿಸಬೇಕೆಂತಲೂ ಈ ಮಹಾಸಭೆಯವರು ಅಭಿಪ್ರಾಯಪಡುತ್ತಾರೆ. ಮತ್ತು ಹಿರೇಮಠದವರೇ ಮೊದಲಾದ ಗುರುಸ್ಥಲದವರು ಶಿಷ್ಯರಿಗೆ ದೀಕ್ಷಾ, ಲಿಂಗಧಾರಣ, ವಿವಾಹ ಮುಂತಾದವುಗಳನ್ನು ವಿಧ್ಯುಕ್ತವಾಗಿ ಮಾಡಿಸಿ, ತಾವು ಸ್ವಧರ್ಮಾಚರಣೆಯಲ್ಲಿ ನಿರತರಾಗಿ ಶಿಷ್ಯರಿಗೆ ಧರ್ಮಾಚರಣೆಗಳನ್ನು ಬೋಧಿಸಿ ಅವುಗಳಲ್ಲಿ ಅವರನ್ನು ಪ್ರವರ್ತರನ್ನುಮಾಡಿ ದುರಾಚರಣೆಗಳನ್ನು ನಿಲ್ಲಿಸಬೇಕೆಂತಲೂ ಹೀಗೆ ಮಾಡದವರಿಗೆ ಶಿಷ್ಯರು ಹಕ್ಕು, ಬಾಬು ಕೊಡಕೂಡದೆಂತಲೂ, ಗುರುಸ್ಥಲದವರ ಆಜ್ಞೆಗೆ ಮೀರಿದವರನ್ನು ತಮ್ಮೊಳಗೆ ತೆಗೆದುಕೊಳ್ಳದಂತೆ ಸಮಾಜದವರು ನಿರ್ಬಂಧಿಸಬೇಕೆಂತಲೂ ಈ ಸಭೆಯವರು ಅಭಿಪ್ರಾಯಪಡುತ್ತಾರೆ. ಈ ಪ್ರಕಾರ ಯಥಾರ್ಥ ಧರ್ಮರೀತಿಗನುಸರಿಸಿ, ಉದಾತ್ತ ವಿಚಾರಗಳಿಂದೊಡಗೂಡಿ, ಧಾರವಾಡದಲ್ಲಿ ನೆರವೇರಿದ (೧೯೦೪) ಒಂದನೇ ವೀರಶೈವ ಮಹಾಸಭೆಯಲ್ಲಿ ಪಾಸಾದ ೨ ನೇ ಹಾಗು ೪ ನೇ ಠರಾವುಗಳನ್ನು ಸರ್ವ ಭಕ್ತ-ಮಾಹೇಶ್ವರರೂ ಪ್ರಚಾರದಲ್ಲಿ ತರಬೇಕೆಂದು ಈ ಸಮ್ಮೇಲನದವರು ಅಪ್ಪಣೆಕೊಡಿಸುತ್ತಾರೆ.

(೫) ಪಟ್ಟ-ಚರಾಧಿಕಾರಿಗಳು ತಮ್ಮ ತಮ್ಮ ಅಧಿಕಾರಗಳನ್ನು ಧರ್ಮಶಾಸ್ತ್ರಾನುಸಾರವಾಗಿ ಸದ್ವಂಶಜರಾದ ಗುರುಸ್ಥಲದ ವಟುಗಳಿಗೆ ಕೊಡಬೇಕಲ್ಲದೆ ತಪ್ಪುತಿಳುವಳಿಕೆಯಿಂದ ಅಕಸ್ಮಾತ್ ಯಾರಾದರೂ ಭಕ್ತವರ್ಗದವರಿಗೆ ಕೊಡುವದಾದರೆ, ಈ ಶಾಸ್ತ್ರ ವಿರುದ್ಧಪದ್ಧತಿಯನ್ನು ಅತ್ಯಂತ ಜೋರಾಗಿ ದೂರೀಕರಿಸತಕ್ಕದ್ದು.

(೬) ಸಮಸ್ತ ಭಕ್ತ-ಮಾಹೇಶ್ವರರು ತಮ್ಮ ತಮ್ಮ ಗೋತ್ರಗಳಿಗನುಸಾರವಾಗಿ ಗುರುವರ್ಗದವರ ಕಡೆಯಿಂದ ಉಪದೇಶವನ್ನು ಪಡೆದುಕೊಳ್ಳಬೇಕಲ್ಲದೆ, ಅನ್ಯಾಶ್ರಮಿಗಳಿಂದ ( ವಿರಕ್ತರಿಂದ ) ಶಾಸ್ತ್ರವಿರುದ್ಧವಾಗಿ ಉಪದೇಶವನ್ನು ತೆಗೆದುಕೊಳ್ಳಕೂಡದೆಂದು ಸಮಸ್ತ ಶಿಷ್ಯಮಂಡಳಿಗೆ ಬೋಧಿಸತಕ್ಕದ್ದು.

(೭) ವೀರಶೈವ ಧರ್ಮಶಾಸ್ತ್ರದ ಉದಾತ್ತ ತತ್ವಗಳನ್ನು ಸಮಸ್ತ ಶಿಷ್ಯಮಂಡಳಿಗೆ ತಿಳುಹಿಸಿಕೊಡುವದಕ್ಕೂ ಹಾಗು ಅವುಗಳನ್ನು ಪ್ರಚಾರದಲ್ಲಿ ತರುವದಕ್ಕೂ "ಪಂಚಾಚಾರ್ಯ ಪತಾಕಾ" ಎಂಬ ಹೆಸರಿನ ವಾರಪತ್ರಿಕೆಯನ್ನು ಶೀಘ್ರವಾಗಿ ಹೊರಡಿಸಬೇಕೆಂದು ಈ ಸಮ್ಮೇಲನದವರು ನಿಶ್ಚಯಿಸಿರುತ್ತಾರೆ.

(೮) . ಸರ್ವ ಮತದವರೂ ತಮ್ಮ ತಮ್ಮ ಮತಸ್ಥಾಪನಾಚಾರ್ಯರ ಜಯಂತ್ಯುತ್ಸವಗಳನ್ನು ಬಹು ಭಕ್ತಿಯಿಂದ ಮಾಡುವಂತೆ ವೀರಶೈವ ಮತದವರಾದರೂ ತಮ್ಮ ಪವಿತ್ರಮತ ಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ಪಂಚಾಚಾರ್ಯರ ಜಯಂತ್ಯುತ್ಸವಗಳನ್ನು ಅವಶ್ಯವಾಗಿ ಮಾಡಬೇಕಾದ್ದರಿಂದಲೂ, ಪಂಚಪೀಠಾದಿಗಳಲ್ಲಿ ಅನಾದಿಕಾಲದಿಂದಲೂ ಒಂದೊಂದು ತಿಥಿಗನುಸರಿಸಿ, ತಮ್ಮ ತಮ್ಮ ಜಯಂತಿಗಳು ಪ್ರತಿ ವರುಷ

ಫಾಲ್ಗುಣ ಶು. ೧೩ ತಿಥಿಯಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಜಯಂತಿ (ರಥ) ಉತ್ಸವವನ್ನೂ, ಮಾಘ ಬ. ೧೪ ಮಹಾಶಿವರಾತ್ರಿಯಲ್ಲಿ ಶ್ರೀ ಜ| ಪಂಡಿತಾರಾಧ್ಯರ ಹಾಗು ವಿಶ್ವಾರಾಧ್ಯರ ಜಯಂತ್ಯೋತ್ಸವಗಳನ್ನೂ, ವೈಶಾಖ ಶು. ೩ ಶ್ರೀ ಜ| ಏಕೋರಾಮಾರಾಧ್ಯರ ಹಾಗು ವೈ. ಶು. ೫ ಶ್ರೀ ಜ| ದಾರುಕಾಚಾರ್ಯರ ಜಯಂತ್ಯುತ್ಸವಗಳನ್ನೂ ಭರತಖಂಡದೊಳಗಿರುವ ಯಾವತ್ತೂ ವೀರಶೈವರು ಬಹು ಭಕ್ತಿಯಿಂದ ಮಾಡತಕ್ಕದ್ದೆಂದು ಈ ಸಮ್ಮೇಲನದವರು ನಿರ್ಧರಿಸಿರುತ್ತಾರೆ.

(೯) ಧರ್ಮಶಾಸ್ತ್ರದ ತಿಳುವಳಿಕೆಯಿಲ್ಲದೆ ಧೂರ್ತತನದಿಂದ ಶಾಸ್ತ್ರವಿರುದ್ಧವಾಗಿ ವರ್ತಮಾನಪತ್ರಗಳಲ್ಲಿ ಲೇಖವನ್ನು ಬರೆದು ಪ್ರಕಟನೆ ಮಾಡಿರುವ ಪಾವಟೆ ಇವರ ವಿಷಯವನ್ನು ಸಪ್ರಮಾಣವಾಗಿ ಖಂಡಿಸಿ, ಅತ್ಯಂತವಾಗಿ ನಿಷೇಧಿಸಿದ್ದನ್ನು ಸರ್ವ ಗುರುವರ್ಗದವರು ತಮ್ಮ ಶಿಷ್ಯಮಂಡಳಿಗೆ ಬೋಧಿಸತಕ್ಕದ್ದು.

ಮೇಲಿನ ಠರಾವುಗಳು ಶ್ರೀ ಜ| ಪಂಚಪೀಠಾಧೀಶ್ವರರಲ್ಲಿಗೆ ಕಳುಹಿಸಲ್ಪಟ್ಟವು.

---

## ಶ್ರೀ ಕೇದಾರ ಪೀಠದ ಜಗದ್ಗುರುಗಳು ಶಿವೈಕ್ಯರಾದದ್ದು.

ಈ ಮೊದಲು ಬೀರೂರು ವೀರಶೈವ ಮಹಾ ಸಭಾಕಾರ್ಯ ತೀರಿಸಿಕೊಂಡು ಇತ್ತ ಕಡೆಗೆ ದಯಮಾಡಿಸಿದ ಹಿಮವತ್ಕೇದಾರ ಯೇಕೋರಾಮ ಪೀಠದ ಶ್ರೀ ಜ. ವಿಶ್ವಲಿಂಗಶಿವಾಚಾರ್ಯ ಮಹಾಸ್ವಾಮಿಗಳವರು ಬಳ್ಳಾರಿ ಜಿಲ್ಹೆಯೊಳಗೆ ಸಂಚಾರ ನಡೆಯಿಸಿರಲು, ದಕ್ಷಿಣ ದೇಶದಲ್ಲಿ ಇವರು ಎಂದೂ ದಯಮಾಡಿಸದೇ ಇದ್ದುದರಿಂದಲೂ, ಈ ದೇಶದ ಹವೆಯು ಇವರಿಗೆ ತಡೆಯದೆ ಹೋದುದರಿಂದಲೂ ದೇಹದಲ್ಲಿ ಜಾಡ್ಯವುಂಟಾಯಿತು. ಔಷಧೋಪಚಾರವನ್ನು ಅನೇಕ ವಿಧದಿಂದ ನಡೆಯಿಸುತ್ತ ಉಜ್ಜಯಿನೀ ಮಹಾ ಸಂಸ್ಥಾನ ಮಠಕ್ಕೆ ಜಾಡ್ಯದ ಸಂಗತಿ ತಿಳುಹಿಸಿದರು.

ಬಹು ಚಿಂತಾಜನಕವಾದ ಈ ವಾರ್ತೆಯನ್ನು ಕೇಳಿ ಉಜ್ಜಯಿನೀ ಮಹಾ ಶ್ರೀಗಳವರು ಆಗಿಂದಾಗ್ಗೆ ನಮ್ಮ ಮಠಕ್ಕೆ ಶೀಘ್ರವಾಗಿ ದಯಮಾಡಿಸಬೇಕೆಂದು ಬಹು ಪ್ರೇಮದಿಂದಲೂ ಗುರುಭಾವನೆಯಿಂದಲೂ ಬಿನ್ನೈಸಿಕೊಳ್ಳುತ್ತಿದ್ದರು. ಇವರ ಕೋರಿಕೆಯಂತೆ ಮಹಾ ಸಂಸ್ಥಾನಕ್ಕೆ ಆಗಮಿಸಿದಮೇಲೆ ಬಹು ಪರಿಯಿಂದ ಸೇವಾ ಶುಶ್ರೂಷೆ, ಔಷಧೋಪಚಾರಗಳನ್ನು ನಡೆಯಿಸಿದರೂ ಗುಣಮುಖ ತೋರದೆ ದಿನೇ ದಿನೇ ವ್ಯಾಧಿಯು ಪ್ರಬಲವಾಗುತ್ತ ನಡೆಯಿತು. ಕೇದಾರ ಜಗದ್ಗುರುಗಳವರು ಮನದಲ್ಲಿ ವ್ಯಾಕುಲಹೊಂದಿ, ಉಜ್ಜಯಿನೀ ಜಗದ್ಗುರುಗಳವರ ಸಮಕ್ಷಮ "ನಮ್ಮ ಮುಂದಿನ ವ್ಯವಸ್ಥೆಯನ್ನು ಆಲೋಚನೆ ಮಾಡಿರಿ" ಎಂದಪ್ಪಣೆ ಮಾಡುತ್ತ ನಮ್ಮ ಉತ್ತರಾಧಿಕಾರಕ್ಕೆ ಯೋಗ್ಯರಾದ ಬೇರೆ ವಟುಗಳು ಯಾರೂ ಇಲ್ಲ; ಆದಕಾರಣ

ನಮ್ಮ ಆಶ್ರಯದಲ್ಲಿಯೇ ಇರುವ ಕುಲ, ಶೀಲ, ವಿದ್ಯಾ, ವಯಸ್ಸುಗಳಿಂದ ಪೂರ್ಣರಾದ ವೇ|| ಗಂಗಾಧರ ಶಾಸ್ತ್ರಿಗಳವರಿಗೆ (ಅಂದರೆ ಸದ್ಯಃ ಪೀಠಾಧೀಶರಾಗಿರುವ ನೀಲಕಂಠ ಶ್ರೀಗಳವರಿಗೆ) ಉತ್ತರಾಧಿಕಾರವನ್ನು ಕೊಡಲೊಪ್ಪಿದ್ದೇವೆಂದು ಅವರ ಹೆಸರಿಗೆ ಮೃತ್ಯುಪತ್ರವನ್ನು ಬರೆದು ರಜಿಸ್ಟರು ಮಾಡಿಸಿದರು.

ಇಷ್ಟಾದ ಸ್ವಲ್ಪ ದಿವಸಗಳಲ್ಲಿಯೇ ಜಾಡ್ಯವು ಅತ್ಯಧಿಕವಾಯಿತು. ಎಷ್ಟು ಪರಿಯಿಂದ ಚಿಕಿತ್ಸಾದಿಗಳನ್ನು ಮಾಡಿದರೂ ಗುಣಮುಖವಾಗದೆ ರೌದ್ರಿನಾಮ ಸಂವತ್ಸರದ ಆಷಾಢ ಬ. ೪ (ತಾರೀಖು ೧೫-೭-೧೯೨೦) ಚಂದ್ರವಾರ ದಿವಸ ಶಿವಸಾಯುಜ್ಯವನ್ನು ಹೊಂದಿದರು. ಆಗ ಬಹುಜನರಿಗೆ ಸಂತಾಪವಾಗಿ ದುಃಖೋದ್ಗಾರಗಳನ್ನು ತೆಗೆದರು. ಅಂತ್ಯೇಷ್ಟಿವಿಧಿಗಳನ್ನು ಸಕ್ರಮವಾಗಿ ಜರುಗಿಸಿ, ಉತ್ಸವ ಪೂರ್ವಕ ಮೆರೆಯಿಸುತ್ತ ಉಜ್ಜಯಿನೀ ಗ್ರಾಮದ ಬಹಿರ್ಭಾಗದಲ್ಲಿ ದಕ್ಷಿಣ ದಿಕ್ಕಿನೊಳಿರುವ ಪೂರ್ವದ ಉಜ್ಜಯಿನೀ ಪೀಠದ ಶ್ರೀ || || ಗಳವರ ಗದ್ದುಗೆಯ ಹತ್ತರ ಸಮಾಧಿಯಲ್ಲಿ ಮುಹೂರ್ತಗೊಳಿಸಿ ಮಂಗಲಮಾಡಿ ಸಮಾಪ್ತಿಗೊಳಿಸಿದರು.

---

## ಕಲಾದಗಿ ಗ್ರಾಮದಲ್ಲಿ ಗುರುವರ್ಗದವರ ೧ ನೇ ಪ್ರಾಂತಿಕ ಪರಿಷತ್ತು.

ವಿಜಾಪುರ ಜಿಲ್ಲಾ ಕಲಾದಗಿ ಗ್ರಾಮದ ಹಿರೇಮಠದ ಶ್ರೀ|| ಷ|| ಬ್ರ|| ಪಟ್ಟದ ಸ್ವಾಮಿಗಳವರು ಉಜ್ಜಯಿನೀ ಜಗದ್ಗುರು ಮಹಾ ಶ್ರೀಗಳವರ ಅಪ್ಪಣೆಯನ್ನು ಮನದಲ್ಲಿರಿಸಿಕೊಂಡು ತಮ್ಮ ಸ್ಥಲದಲ್ಲಿ ಒಂದು ಗುರುವರ್ಗ ಸುಧಾರಣ ಸಭೆಯನ್ನು ನೆರೆಯಿಸಬೇಕೆಂದಾಲೋಚಿಸಿ ಅದಕ್ಕೆ ಸಹಾಯಕರಾಗಿ ಕೆಲವು ಭಕ್ತ ಮಾಹೇಶ್ವರರನ್ನೊಡಗೂಡಿ ಬೇಕಾಗುವ ಸಾಹಿತ್ಯಗಳನ್ನು ಸಂಗ್ರಹ ಮಾಡಿಕೊಂಡು ಪ್ರಸಿದ್ಧ ಪತ್ರಿಕೆಗಳನ್ನು ಎಲ್ಲ ಕಡೆಗೂ ಹಂಚಿದರು.

ಆಪ್ರಕಾರ ಅನೇಕ ಜನ ಪಟ್ಟಚರಾಧಿಕಾರಿಗಳೂ ಮಠಾಧಿಕಾರಿಗಳೂ ಸಮಾಜ ಪ್ರಮುಖರೂ ಬಂದು ಸೇರಿದರು. ತಾರೀಖು ೧೪-೭-೧೯೨೦ ನೇ ಇಸ್ವಿ ದಿವಸ ಗುರುವರ್ಗದವರ ೧ ನೇ ಪ್ರಾಂತಿಕ ಪರಿಷತ್ತು ಪ್ರಾರಂಭವಾಯಿತು. ಆ ಸಭೆಯ ಅಧ್ಯಕ್ಷಸ್ಥಾನವನ್ನು ಶಿವಮೊಗ್ಗಾ ಡಿ. ಹೊಳೆಹೊನ್ನೂರು ಪುರಾಣಮಠದ ಶ್ರೀ ಪಟ್ಟಾಧ್ಯಕ್ಷ ಸ್ವಾಮಿಗಳವರು ವಹಿಸಿದರು. ಅನಂತರ ಅನೇಕ ಪಂಡಿತರೂ ಶಾಸ್ತ್ರಿಗಳೂ ಇನ್ನುಳಿದ ವಿದ್ಯಾವಂತರ ಉತ್ತಮವಾದ ಭಾಷಣಗಳು ನಡೆದವು. ತರುವಾಯ ಮುಂದೆ ಬರೆದ ಠರಾವುಗಳು ಸರ್ವಾನುಮತದಿಂದ ಪಾಸಾದವು.

## ಠರಾವುಗಳು :

೧ ಸಮಸ್ತ ಸಂಪ್ರದಾಯ ಶುದ್ಧ ವೀರಶೈವರು ತಮ್ಮ ಧರ್ಮಶಾಸ್ತ್ರದ ನಿಯಮದಂತೆ ಮುಕ್ತಿಗೆ ಮೂಲಭೂತವಾದ ಶಿವದೀಕ್ಷೆಯನ್ನು ತಮ್ಮ ತಮ್ಮ ಸಂಪ್ರದಾಯಕ ಗುರುಗಳಿಂದ ಪಡೆದುಕೊಂಡು ಲಿಂಗಪೂಜಾಲೋಲರಾಗಿ ಮುಕ್ತರಾಗತಕ್ಕದ್ದು.

೨ ಗುರುವರ್ಗದವರು ತಮ್ಮ ತಮ್ಮ ವಟುಗಳಿಗೆ ಮೊದಲು ದೇಶಭಾಷೆಯನ್ನು ಅಭ್ಯಾಸ ಮಾಡಿಸಿ ಆಮೇಲೆ ವೈದಿಕ ವಿದ್ಯೆಯನ್ನು ಕಲಿಯುವದಕ್ಕೋಸ್ಕರ ಸಂಸ್ಕೃತ ಪಾಠಶಾಲೆಗಳಿಗೆ ಕಳುಹಿಸಿ ಅಸಾಧಾರಣ ಪಾಂಡಿತ್ಯವನ್ನು ಸಂಪಾದಿಸಿಕೊಂಡು ಸುಧಾರಣ ಶಿಖರವನ್ನೇರತಕ್ಕದ್ದು.

೩ ಸಮಸ್ತ ವೀರಶೈವರು ಸದಾ ಲಿಂಗವನ್ನು ಧರಿಸಿಯೇ ಇರಬೇಕೆಂತಲೂ ಪ್ರತಿ ದಿವಸ ಸ್ನಾನಪೂರ್ವಕವಾಗಿ ಲಿಂಗಾರ್ಚನೆಯನ್ನು ಮಾಡಬೇಕು. ಲಿಂಗಾರ್ಚನೆಯಿಲ್ಲದೆ ಭುಂಜಿಸಕೂಡದು. ಶಿವಪಂಚಾಕ್ಷರೀ ಮಂತ್ರವನ್ನು ಬಹಿರಂಗವಾಗಿ ಉಚ್ಚರಿಸಕೂಡದೆಂತಲೂ ಸ್ತ್ರೀಯರು ಶಾಸ್ತ್ರವಿಧಿಗನುಸರಿಸಿ ಮೂರು ಬೆರಳುಗಳಿಂದ ಭಸ್ಮವನ್ನು ಧರಿಸಬೇಕೆಂತಲೂ ಮತ್ತು ಸ್ತ್ರೀಯರು ಹಚ್ಚೆಗಳನ್ನು ಚುಚ್ಚಿಸಿಕೊಳ್ಳುವ ಅಮಂಗಲ ಪದ್ಧತಿಯನ್ನು ದೂರಮಾಡಬೇಕೆಂತಲೂ ಈ ಪರಿಷತ್ತಿನವರು ನಿಶ್ಚಯಿಸಿದ್ದಾರೆ.

೪ ವೀರಶೈವ ಮತವು ಸರ್ವ ಮತಗಳಂತೆ ಅರ್ವಾಚೀನವಾಗಿರದೆ, ಬಹು ಪ್ರಾಚೀನವಾದದ್ದೆಂದು ವೇದಾಗಮೋಪನಿಷತ್‌ಗಳಿಂದಲೂ, ವ್ಯಾಸೋಕ್ತ ಪುರಾಣಗಳಿಂದಲೂ, ಜಗದ್ಗುರು ಪಂಚಸಿಂಹಾಸನಗಳಲ್ಲಿರುವ ಪಟ್ಟಾವಲೀ ಶಿಲಾಶಾಸನ ತಾಮ್ರಶಾಸನ ಮೊದಲಾದ ಅನೇಕ ದಾನಪತ್ರಗಳಿಂದಲೂ ಸಿದ್ಧವಿರುತ್ತದೆ.

೫ ಈ ಮೊದಲು ಜರುಗಿರುವ ೧ ನೇ ಹಾಗು ೨ ನೇ ಪಟ್ಟಚರಾಧಿಕಾರಿಗಳ ಸಮ್ಮೇಳನದಲ್ಲಿ ಪಾಸಾದ ಠರಾವುಗಳನ್ನು ಸರ್ವರೂ ಜಾರಿಯಲ್ಲಿ ತರತಕ್ಕದ್ದೆಂದು ಈ ಪರಿಷತ್ತು ಉದ್ದೇಶಿಸಿರುತ್ತದೆ.

೬ ಯಾವತ್ತೂ ಗುರುಸ್ಥಲದ ಮಠಾಧಿಕಾರಿಗಳು ದೀಕ್ಷಾ ವಿವಾಹಾದಿ ಧರ್ಮಕಾರ್ಯಗಳಲ್ಲಿ ಗುರುವರ್ಗ ಸಮ್ಮೇಲನ ವೃದ್ಧಿಗಾಗಿ ಧಾರವಾಡ ಜಿ. ಕುಂದಗೋಳ ತಾಲೂಕ ಹಿರೇಮಠದಲ್ಲಿ ಸ್ಥಾಪಿಸಲ್ಪಟ್ಟಿರುವ ಫಂಡಿಗಾಗಿ ೨ ರೂ. ಗಳಾಗಲಿ ಅಥವಾ ಯೋಗ್ಯತಾನುಸಾರ ಹೆಚ್ಚಾಗಲಿ ಸಹಾಯ ಮಾಡಬೇಕೆಂದು ಈ ಪರಿಷತ್ತಿನ ಅಭಿಪ್ರಾಯವಿರುತ್ತದೆ.

ಈ ಠರಾವುಗಳು ಶ್ರೀ ಜ|| ಪಂಚಪೀಠಾಧೀಶ್ವರರಲ್ಲಿಗೆ ಕಳುಹಿಸಲ್ಪಟ್ಟವು.

---

ಮಹಾತಪೋನಿಧಿಗಳಾದ



ಉಜ್ಜಯಿನಿ ಜಗದ್ಗುರು ಸಿದ್ಧಲಿಂಗಮಹಾಸ್ವಾಮಿಗಳು

## ಪಾಲ್ತೂರು ಮುಕ್ಕಾಮಿನಲ್ಲಿ ಶ್ರೀ ರುದ್ರಾಭಿಷೇಕ ಮಹಾಪೂಜೆಯೂ ಭೂರಿ ಗಣಸಂತರ್ಪಣೆಯೂ

ಮಹಾ ಶ್ರೀಗಳವರು ಬಳ್ಳಾರಿ ಪ್ರಾಂತದಲ್ಲಿರುವ ಪಾಲ್ತೂರು ಗ್ರಾಮಕ್ಕೆ ಮುಕ್ಕಾಂ ಮಾಡಿ ಸಕಲ ಭಕ್ತ ಮಾಹೇಶ್ವರಾದಿ ಮಂಡಳಿಯಿಂದ ಸೇವಾ ಸತ್ಕಾರ ಗಳಂ ಸ್ವೀಕರಿಸುತ್ತಿರಲು ಶ್ರಾವಣ ಮಾಸವು ಪ್ರಾಪ್ತವಾಯಿತು. ಈ ಮಹಾನುಭಾವರ ಪಾದಾರವಿಂದಗಳಲ್ಲಿ ಸೇವೆ ಮಾಡಲು ಅನೇಕ ಗುರು-ಭಕ್ತರು ಸಮ್ಮಿಳಿತರಾದರು ಮಹಾ ಸನ್ನಿಧಿಯವರು ಪ್ರತಿನಿತ್ಯ ಶ್ರೀ ರುದ್ರಾಧ್ಯಾಯ ಪಠನಪೂರ್ವಕ ಮಹಾಭಿಷೇಕ ಪೂಜಾದಿಗಳನ್ನು ನಿರಾತಂಕವಾಗಿ ನಡೆಯಿಸುವ ಪದ್ಧತಿಯು ಇರಲು ಎಷ್ಟೋ ಕೆಲಸಗಳಿದ್ದರೂ ಎಂತಹ ಕಷ್ಟಸಮಯವಿರಲಿ ತಮ್ಮ ಸತ್ಸಂಕಲ್ಪದಂತೆ ಶ್ರೀ ರುದ್ರಾಭಿಷೇಕ ಮಹಾ ಪೂಜಾ ಮಾತ್ರ ನಿರ್ವಿಘ್ನದಿಂದ ನಿರಂತರದಲ್ಲೂ ಬಹು ಪ್ರೇಮಾದರಗಳಿಂದ ನಡೆಯಿಸುತ್ತಿದ್ದರು.

ಯಾಕಂದರೆ "ಅಭಿಷೇಕ ಪ್ರಿಯಃ ಶಿವಃ" ಎಂಬ ವಾಕ್ಯಾನುಸಾರವಾಗಿ ಪರಶಿವನು ಸಂತುಷ್ಟನಾಗಬೇಕಾದರೆ ಅಭಿಷೇಕವೇ ಒಂದು ದೊಡ್ಡ ಸಾಧನವೆಂದು ಹೇಳಬೇಕಾಗಿದೆ. ಈ ಕಾರಣದಿಂದಲೇ ಪೂರ್ವದಲ್ಲಿ ಅನೇಕ ದೇವಾದಿದೇವತೆಗಳೂ ಮನು ಮುನಿಗಳೂ ಮಹಾ ರಾಜಾಧಿರಾಜರೂ ಸಹ ಶಿವನಿಗೆ ಅಭಿಷೇಕ ಮಾಡಿಯೇ ತಮ್ಮ ತಮ್ಮ ಇಚ್ಛಿತಾರ್ಥಗಳನ್ನು ಪಡೆದುಕೊಂಡು ಸುಖಿಗಳಾದರು.

ಅಭಿಷೇಕ ಮಾಡಬೇಕಾದರೆ ಜಲಾಭಿಷೇಕ, ಘೃತಾಭಿಷೇಕ, ಕ್ಷೀರಾಭಿಷೇಕ, ತೈಲಾಭಿಷೇಕ, ರಸಾಭಿಷೇಕವೆಂದು ಅನೇಕ ಪ್ರಕಾರಗಳುಂಟು. ಯಾವ ಅಭಿಷೇಕ ಮಾಡಿದರೂ ಶ್ರೀ ರುದ್ರಾಧ್ಯಾಯವನ್ನು ಪಠಿಸುತ್ತ ಮಾಡಬೇಕು. ಅಂದರೆ ಶಾಸ್ತ್ರೋಕ್ತಮಹಾಭಿಷೇಕ ಪೂಜಾ ಮಾಡಿದಂತಾಗುವದು. ಈ ಪ್ರಕಾರ ಮಾಡಿದಂಥವರಿಗೆ ಅಧಿಕವಾದ ಫಲ ಪ್ರಾಪ್ತವಾಗುವದು. ಈ ರುದ್ರಾಧ್ಯಾಯದ ಫಲಶ್ರುತಿಯನ್ನು ವೇದಾಗಮ ಸ್ಮೃತಿ ಪುರಾಣೇತಿಹಾಸಾದ್ಯುಪನಿಷತ್ತುಗಳಲ್ಲಿ ಬಹಳವಾಗಿ ಪ್ರಶಂಸಾ ಮಾಡಲ್ಪಟ್ಟಿರುತ್ತವೆ. (೧) ಜಾಬಾಲೋಪನಿಷತ್ (೨) ಕೈವಲ್ಯೋಪನಿಷತ್ (೩) ಶಾತಾತಪಸ್ಮೃತಿ (೪) ಯಾಜ್ಞವಲ್ಕ್ಯಸ್ಮೃತಿ (೫) ಶಿವಗೀತೆ (೬) ವಾಯು ಪುರಾಣ (೭) ಬ್ರಹ್ಮೋತ್ತರ ಖಂಡ ಇತ್ಯಾದಿಗಳಲ್ಲಿಯ ವಿಷಯಗಳನ್ನರಿತವರಾದ್ದರಿಂದಲೇ ರುದ್ರಾಭಿಷೇಕ ಪೂಜಾ ಮಹಾವ್ರತವನ್ನು ಅವಿಚ್ಛಿನ್ನವಾಗಿ ನಡೆಯಿಸುತ್ತಿದ್ದರು.

ಈ ಮಹಾ ಪೂಜಾ ಶಾಂತ್ಯರ್ಥವಾಗಿ ಆಗಾಗ್ಗೆ ಮಾಹೇಶ್ವರಾರಾಧನೆಪೂರ್ವಕ ಭೂರಿ ಅನ್ನಸಂತರ್ಪಣೆಯನ್ನೂ ಸಹ ಮಾಡುತ್ತಿದ್ದರು. ಇದೇ ಸಮಯಕ್ಕೆ ಮಹಾ ಗಣಾರಾಧನೆ ನಡೆಯಿಸಬೇಕೆಂದು ಸಂಕಲ್ಪಿಸಿ, ಆ ಗ್ರಾಮದ ದೈವದವರನ್ನೂ ಬ್ರ॥ ಮು॥ ಚರಮೂರ್ತಿ ಸ್ವಾಮಿಗಳವರನ್ನೂ ಕರೆಯಿಸಿ, ಮಹಾ ಗಣಾರಾಧನೆಯ ಸಮಾ

ರಂಭವನ್ನು ನಡೆಯಿಸಬೇಕೆಂದೂ ಇದಕ್ಕೆ ಬೇಕಾಗುವ ಸಕಲ ಸಾಹಿತ್ಯಗಳನ್ನೂ ಸಂಗ್ರಹಿಸಿ, ಈ ಕಾರ್ಯವನ್ನು ಸಾಂಗಗೊಳಿಸಿ ಪುಣ್ಯಕ್ಕೂ ಕೀರ್ತಿಗೂ ಭಾಗಿಗಳಾಗ ಬೇಕೆಂದು ಅಪ್ಪಣೆಯಾಯಿತು. ಮಹಾ ಶ್ರೀಗಳವರ ಅನುಜ್ಞಾಪ್ರಕಾರ ಅನೇಕ ಶಿಷ್ಯ ಸಮುದಾಯವು ತಮ್ಮ ತಮ್ಮ ಶಕ್ತ್ಯಾನುಸಾರವಾದ ಕಾರ್ಯಕಲಾಪಗಳಲ್ಲಿ ತೊಡಗಿ, ಭೋಜನದ ಸಕಲ ಸಾಹಿತ್ಯಗಳನ್ನು ಸಿದ್ಧಗೊಳಿಸಿದರು. ಆ ಪಾಲ್ತೂರು ಗ್ರಾಮಾನುಗ್ರಾಮಗಳಲ್ಲಿರುವ ಭಕ್ತಮಾಹೇಶ್ವರಾದಿ ಮಂಡಳಿಗೆ ಆಹ್ವಾನ ಪತ್ರಿಕೆಗಳು ಕಳುಹಲ್ಪಟ್ಟವು. ಆ ಪ್ರಕಾರ ಅನೇಕ ಪಟ್ಟಚರಾಧಿಕಾರಿಗಳೂ ಮಾಹೇಶ್ವರ ಸ್ತ್ರೀ-ಪುರುಷ-ಬಾಲಕರೂ ಅಸಂಖ್ಯಾತವಾಗಿ ಬಂದು ಸೇರಿದರು.

ತಾರೀಖು ೨೦—೯—೧೯೨೦ ನೇ ಇಸ್ವಿ ದಿವಸ ಉದಯ ೯ ಗಂಟೆಯಿಂದ ಭೂರಿಮಾಹೇಶ್ವರಾನ್ನಸಂತರ್ಪಣೆಯು ನಡೆಯಿತು. ಮಹಾಶ್ರೀಗಳವರು ತಮ್ಮ ಸತ್ಸಂಕಲ್ಪದಂತೆ ಪ್ರತಿಯೊಬ್ಬ ಗಣಂಗಳಿಗೆ ಒಂದು ರೂಪಾಯಿಯಂತೆ ದಕ್ಷಿಣೆ, ತಾಂಬೂಲಗಳನ್ನು ಕೊಡುತ್ತಿರಲು, ಒಂದೊಂದು ಪಂಗ್ತಿಗೆ ಸುಮಾರು ೨-೩ ಸಾವಿರ ಜನ ಭಕ್ತಮಾಹೇಶ್ವರರು ಭೋಜನಕ್ಕೆ ಕುಳಿತುಕೊಳ್ಳುತ್ತ ರಾತ್ರಿ ೮ ಗಂಟೆಯವರೆಗೆ ಅವಿಚ್ಛಿನ್ನವಾಗಿ ಅನ್ನಸಂತೃಪ್ತಿಯು ನಡೆಯಿತು. ಆ ಮಹಾಜನಸ್ತೋಮವನ್ನು ನೋಡಿ ನೋಡಿ ಮಹಾಶ್ರೀಗಳವರು ಅತ್ಯುತ್ಸುಕತೆಯಿಂದ ಜನರಿಗೆ ಯಾವ ವಿಧ ವಾದ ತೊಂದರೆ ಕೊರತೆಯಾಗದಂತೆ ಸ್ವತಃ ಸಂಚರಿಸುತ್ತ ಚನ್ನಾಗಿ ವ್ಯವಸ್ಥೆ ಮಾಡಿಸುತ್ತಿದ್ದರು. ಮಾರನೆಯ ದಿವಸ ಲೆಕ್ಕ ನೋಡಲಾಗಿ, ಒಂದೊಂದು ರೂ. ದಕ್ಷಿಣೆಯಂತೆ ಮೂರು ಸಾವಿರ ಗಣಂಗಳಿಗೆ ಮೂರು ಸಾವಿರ ರೂಪಾಯಿಗಳು ಸಲ್ಲಿ ಹೋಗಿದ್ದವು. ಇಂಥ ಅದ್ಭುತವಾದ ಮಹಾಗಣಸಮಾರಾಧನೆಯು "ನ ಭೂತೊ ನ ಭವಿಷ್ಯತಿ" ಎಂಬಂತಾಯಿತು. ಆ ಸಮಾರಂಭವನ್ನು ನೋಡಿದವರೆಲ್ಲಾ ಆನಂದಾಶ್ಚರ್ಯಗಳನ್ನು ಹೊಂದಿದರು. ಇಂದಿನ ವರೆಗೆ ಆ ಮಹಾಪ್ರಸ್ಥವನ್ನು ನೆನೆದುಕೊಂಡು ಮಹಾಶ್ರೀಗಳವರನ್ನು ಬಹಳ ಕೊಂಡಾಡುತ್ತಿರುವರು. ಇದೇ ಅಲ್ಲವೇ ಮಹಾತ್ಮರ ಪ್ರಭಾವ! ಇದೇ ಜಂಗಮಾರಾಧನಾಪ್ರೇಮ !

ಅಷ್ಟರಲ್ಲಿ ಶ್ರೀಶೈಲ ಪೀಠದ ಜಗದ್ಗುರು ನಾಗಲೂಟಿ ಭಿಕ್ಷಾವೃತ್ತಿ ಶಿವಾ ಚಾರ್ಯ ಮಹಾ ಸ್ವಾಮಿಗಳವರಿಂದ ನಿರೂಪ ಬರಲು, ಈ ಸಮಾರಂಭ ತೀರಿಸಿ ಕೊಂಡು ತಾರೀಖು ೫—೧೨—೧೯೨೦ ನೇ ಇಸ್ವಿ ದಿವಸ ಪಾಲ್ತೂರಿಂದ ಗುಂತ ಕಲ್ಲು ಗ್ರಾಮಕ್ಕೆ ದಯಮಾಡಿಸಿ, ಆ ಪೀಠದ ಉತ್ತರಾಧಿಕಾರ ಮಾಡಲು ಆಲೋ ಚನೆ ಮಾಡುತ್ತ ಒಂದು ತಿಂಗಳ ವರೆಗೂ ಅಲ್ಲಿಯೆ ಮುಕ್ಕಾಂ ಮಾಡೋಣ ವಾಯಿತು.



## ೩ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನವು

ವಿಜಾಪೂರ ಜಿಲ್ಹಾ ಮನಗೂಳಿ ಗ್ರಾಮದಲ್ಲಿ ಹಿರೇಮಠದ ಶ್ರೀ ಷ. ಬ್ರ. ಪಟ್ಟದಸ್ವಾಮಿಗಳವರು ಸದರಿ ಸಮ್ಮೇಲನವನ್ನು ತಮ್ಮಲ್ಲಿ ಜರುಗಿಸಬೇಕೆಂಬ ಕುತೂಹಲ ಉಳ್ಳವರಾಗಿ ಸಕಲವಿಧವಾದ ಸಾಹಿತ್ಯಗಳನ್ನು ಸಿದ್ಧತೆಮಾಡಿಕೊಂಡು ಪ್ರಸಿದ್ಧ ಪತ್ರಿಕೆಗಳನ್ನು ಹಂಚಿದರು.

ಆಪ್ರಕಾರ ಅನೇಕ ಪಟ್ಟಚರಾಧಿಕಾರಿಗಳೂ, ಶಾಸ್ತ್ರಿಗಳೂ ಮುಂತಾದವರು ಬಂದು ಸೇರಿದರು. ಅಧ್ಯಕ್ಷಸ್ಥಾನವನ್ನು ಬಳ್ಳಾರಿ ಜಿಲ್ಹಾ ಕೂಡ್ಲಿಗಿ ತಾಲೂಕು ಬೆಣ್ಣಿಹಳ್ಳಿ ಬೃಹನ್ಮಠದ ಶ್ರೀ ಷ. ಬ್ರ. ಪಟ್ಟದ ಮರುಲಸಿದ್ಧಸ್ವಾಮಿಗಳವರು ಸರ್ವಾನುಮತದಿಂದ ಅಲಂಕರಿಸಿದರು. ಬಳಿಕ ಅನೇಕ ಭಾಷಣಗಳು ನಡೆದು ಸಮ್ಮೇಲನವು ಯಶಸ್ವಿಯಾಗಿ ಈ ಕೆಳಗೆ ಬರೆದ ಠರಾವುಗಳು ಸರ್ವಾನುಮತದಿಂದ ಪಾಸಾದವು.

೧. ಭರತಖಂಡದೊಳಗಿನ ಸಮಸ್ತ ಗುರುಸ್ಥಲದವರೂ ಭೇದ-ಭಾವಗಳನ್ನು ಬಿಟ್ಟು ಪರಸ್ಪರ ಐಕ್ಯದಿಂದ ಇರತಕ್ಕದ್ದು.

೨. ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಬ್ರಹ್ಮ-ವಿಷ್ಣು ಮೊದಲಾದ ದೇವತೆಗಳಿಗೂ, ಅಗಸ್ತ್ಯ ಮೊದಲಾದ ಮಹಾಋಷಿಗಳಿಗೂ, ನಳ, ಕಕುತ್ಸ್ಥ ಮುಂತಾದ ಚಕ್ರವರ್ತಿಗಳಿಗೂ ಅನುಗ್ರಹಿಸಿ ಜಗದ್ಗುರುಗಳೆಂದು ಶಾಸ್ತ್ರ ಪ್ರಸಿದ್ಧರಾದ ಕಾರಣ ಇಂತಹ ಮಹಾಗುರುಗಳ ಪರಂಪರಾಗತ ಜಗದ್ಗುರುಗಳವರಲ್ಲಿ ಸರ್ವತರದ ವೀರಶೈವರೂ, ಸಾಮಾನ್ಯ, ವಿಶೇಷ, ನಿರಾಭಾರಿ ವೀರಶೈವರು ಅಸಾಧಾರಣವಾದ ಭಕ್ತಿಯನ್ನಿಟ್ಟು ಮುಕ್ತಿಯನ್ನು ಪಡೆಯತಕ್ಕದ್ದು.

೩. ಪ್ರತಿಯೊಬ್ಬ ವೀರಶೈವರು ಅಹಿಂಸೆಯನ್ನೂ, ಸತ್ಯವನ್ನೂ, ಬ್ರಹ್ಮಚರ್ಯವನ್ನೂ ಪರಿಪಾಲಿಸಬೇಕು ಹಾಗು ಗುರು-ಲಿಂಗ-ಜಂಗಮರ ಪೂಜೆಯನ್ನೂ ಧ್ಯಾನವನ್ನೂ ಅವರವರ ಗೋತ್ರಾನುಸಾರವಾಗಿ ಜಪಕ್ರಮವನ್ನೂ, ಸಹಜ ದಾನವನ್ನೂ ಆಚರಿಸತಕ್ಕದ್ದು.

೪. ಪಟ್ಟಚರಾಧಿಕಾರಿಗಳು ತಮ್ಮ ತಮ್ಮ ಗೋತ್ರಕ್ಕನುಸಾರವಾಗಿ ಕಂಥಾ-ಕಮಂಡಲು-ದಂಡ ಮೊದಲಾದ ಪೂಜ್ಯ ಗುರುಚಿನ್ಹಗಳನ್ನು ಧರಿಸಿ ಲೋಕವನ್ನುದ್ಧರಿಸಬೇಕು.

೫. ಪಟ್ಟಚರಾಧಿಕಾರಿಗಳು ದೀಕ್ಷಾ ಕಾಲದಲ್ಲಿ ವಟುಗಳಿಗೆ ತಮ್ಮ ತಮ್ಮ ಗೋತ್ರಗಳಿಗನುಸಾರವಾಗಿ ಬೇರೆಬೇರೆಯಾಗಿದ್ದ ಪ್ರಸಾದಪಂಚಾಕ್ಷರೀ ಮೊದಲಾದ ಮಂತ್ರಗಳನ್ನು ಉಪದೇಶಿಸತಕ್ಕದ್ದು.

೬. ವೀರಶೈವರ ಲಗ್ನಾದಿ ಕಾರ್ಯಗಗಲ್ಲಿ ಧರ್ಮಶಾಸ್ತ್ರ ವಿರುದ್ಧವಾಗಿ ವಿರಕ್ತ ಮಠಗಳಿಗೆ ಬಾಬುಕೊಡುವ ಪದ್ಧತಿಯು ಬಿದ್ದಿರುವದರಿಂದ ಈ ಶಾಸ್ತ್ರವಿರುದ್ಧ ಪದ್ಧತಿ ಯನ್ನು ಅತ್ಯಂತ ಜೋರಿನಿಂದ ತಪ್ಪಿಸತಕ್ಕದ್ದು.

೭. ಪಟ್ಟಚರಾಧಿಕಾರಿಗಳು ಆದಷ್ಟುರೀತಿಯಿಂದ ಏಕಾಂತವಾಸವನ್ನು ಮಾಡ ತಕ್ಕದ್ದು.

೮. ಎರಡನೇ ಸಮ್ಮೇಲನದಲ್ಲಿ ವಿಚಾರವಾಗದೆ ಹಾಗೆಯೇ ಉಳಿದಿರುವ ಅಶಾಸ್ತ್ರೀಯವಾದ ಕೆಳದಿಯ ಪಟ್ಟದಸಂಬಂಧ ವಿಷಯವನ್ನು ವಿಚಾರಮಾಡಿರುವ ದಲ್ಲದೆ ಈ ಪಟ್ಟದ ಬಗ್ಗೆ ಯೋಗ್ಯ ಬಂದೋಬಸ್ತು ಮಾಡುವದಕ್ಕೋಸ್ಕರ ಜಗದ್ಗುರು ಪಂಚಪೀಠಾಧಿಪತಿಗಳ ಸನ್ನಿಧಿಗೆ ಅರಿಕೆಮಾಡಿಕೊಳ್ಳತಕ್ಕದ್ದು.

ಈ ಠರಾವುಗಳನ್ನು ಶ್ರೀ ಜ. ಪಂಚಪೀಠಾಧೀಶರವರಲ್ಲಿಗೆ ರವಾನೆ ಮಾಡಿದರು.

---

## ಉಜ್ಜಯಿನೀ ಪಾಠಶಾಲೆಗೆ ವಿದ್ಯಾರ್ಥಿಗಳು ಬರಲು

## ನೋಟೀಸು

ಈ ಸಮಯದಲ್ಲಿ ಮಹಾಶ್ರೀಗಳವರ ಸವಾರಿಯು ದೇಶದಲ್ಲಿ ಶಿಷ್ಯೋದ್ಧಾರ ಕ್ಕೋಸ್ಕರ ಹೊರಟು ಆದವಾನಿ ತಾಲೂಕು ತುಂಗಭದ್ರಾ ಮುಕ್ಕಾಂ ಮಾಡಿರಲು ವೀರಶೈವ ಸಮಾಜ ಸುಧಾರಣೆಗೆ ಮುಖ್ಯವಾಗಿ ಗುರುವರ್ಗದ ವಟುಗಳು ವಿದ್ಯಾವಂತ ರನ್ನಾಗಿ ಪ್ರಥಮದಲ್ಲಿ ಮಾಡಬೇಕೆಂಬ ಉತ್ಕಟೇಚ್ಛೆಯು ಶ್ರೀಗಳವರಲ್ಲಿ ಅಧಿಕವಾ ಯಿತು. ಈ ಸದುದ್ದೇಶದಿಂದಲೇ ಈ ವಳಗಾಗಿ ತಮ್ಮ ಜಗದ್ಗುರು ಮಹಾಸಂಸ್ಥಾನ ಮಠದಲ್ಲಿ ಒಂದು ಪಾಠಶಾಲೆಯನ್ನು ಸ್ಥಾಪನಮಾಡಿದ್ದರು.

ಪಾಠಶಾಲೆಯು ಪ್ರಾರಂಭವಾಗಿ ೬-೮ ತಿಂಗಳಾದರೂ ಮಠಾಧಿಕಾರಿಗಳ ಮಕ್ಕಳು ಶಾಲೆಗೆ ವಿಶೇಷ ಬರಲಿಲ್ಲ. ಮಹಾಸನ್ನಿಧಿಯವರು ತಾವು ಸಂಚಾರದಲ್ಲಿ ದ್ದರೂ ಪಾಠಶಾಲಾ ವ್ಯವಸ್ಥೆಯು ಚನ್ನಾಗಿ ನಡೆಯುವಂತೆ ಏರ್ಪಡಿಸಿದ್ದರು. ವಿದ್ಯಾ ರ್ಥಿಗಳ ಸಂಖ್ಯೆಯು ಕಡಿಮೆಯಾಗಿತ್ತು. ಬಾಲಕರು ಹೆಚ್ಚಾಗಿ ಸೇರದಕಾರಣ ತುಂಬಾ ಕಳಕಳಿಯುಳ್ಳವರಾಗಿ ಮುಂದಾದರೂ ಹೆಚ್ಚು ವಿದ್ಯಾರ್ಥಿಗಳು ಶೀಘ್ರವಾಗಿ ಬಂದು ಅಭ್ಯಾಸಮಾಡಿ ವಿದ್ಯಾವಂತರಾಗಲೆಂಬ ಪ್ರೇಮದಿಂದ ಪುನಃ ತಮ್ಮ ಸಂಸ್ಥಾ ನದ ಎಜಂಟರ ಹೆಸರಿನಿಂದ ಕೆಳಗಿನಂತೆ ಒಂದು ಪ್ರಸಿದ್ಧ ಪತ್ರಿಕೆಯನ್ನು ಹೊರಡಿಸಿ ದೇಶದಲ್ಲಿ ಪ್ರಸಿದ್ಧಮಾಡಿದರು.

॥ ಶ್ರೀಮಜ್ಜಗದ್ಗುರು ಪಂಚಾಚಾರ್ಯೇಭ್ಯೋನಮಃ ॥

ಶ್ರೀಮಜ್ಜಗದ್ಗುರೂಜ್ಜಯಿನೀ ಸದ್ಧರ್ಮಸಿಂಹಾಸನದ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರಿಂದ (ಸದರಿ ಜಗದ್ಗುರು ಮಹಾಸ್ವಾಮಿಗಳವರು)

## ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿ ಬೋಧತ.

ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಚರಪಟ್ಟಾಧ್ಯಕ್ಷ ಶ್ರೀಮಜ್ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಭಗವತ್ಪಾದರು ಸ್ವಸಂಸ್ಥಾನದಲ್ಲಿ ವೈದಿಕ ಪಾಠಶಾಲೆಯನ್ನು ಸ್ಥಾಪಿಸಿ ವಿದ್ಯಾರ್ಥಿಗಳ ಅಶನ-ವಸನಾದಿಗಳ ವ್ಯವಸ್ಥೆಯನ್ನು ಏರ್ಪಡಿಸಿದ್ದರೂ ನಮ್ಮ ಗುರುವರ್ಗದ ಮಠಾಧಿಕಾರಿಗಳು ತಮ್ಮ ತಮ್ಮ ವಟುಗಳನ್ನು ಕಳಿಸದೆ ಗಾಢ ನಿದ್ರೆಯಲ್ಲಿಯೇ ಇರುವರಲ್ಲಾ! ಇದೇನು ಕಲಿಯುಗದ ಮಹಿಮೆಯೋ? ಮಠಾಧಿಕಾರಿಗಳ ದುರ್ದೈವವೋ ತಿಳಿಯದು. ಮಠಾಧಿಕಾರಿಗಳೇ, ಇನ್ನಾದರೂ ನಿಮ್ಮ ಗಾಢನಿದ್ರೆಯನ್ನು ಬಿಟ್ಟು ಮೇಲಕ್ಕೇಳಿರಿ. ಈ ಸಮಯವು ನಿದ್ರೆಯಿಂದ ಮಲಗುವ ಸಮಯವಲ್ಲಾ. ಈಕಾಲವೆಂಥಾದ್ದೆಂಬುದನ್ನು ನಿಮ್ಮ ಕಣ್ಣೊರಿಸಿಕೊಂಡು ಜಾಗ್ರತರಾಗಿ ನೋಡಿರಿ. ನಿಮ್ಮ ಕುಲಕ್ರಮಾಗತವಾದ ವೈದಿಕ ವಿದ್ಯೆಯನ್ನು ನಿಮ್ಮ ಮಕ್ಕಳಿಗಾದರೂ ಕಲಿಸಿರಿ. ಮತ್ತು ನಿಮ್ಮಕಿಂತಲೂ ಹೆಚ್ಚಿನವರು ಮಲಗಿದ್ದರೆ ಅವರನ್ನು ಕೂಡಾ ಎಬ್ಬಿಸಿ ವೈದಿಕ ವಿದ್ಯೆಯ ಕಡೆಗೆ ಅವರ ದೃಷ್ಟಿಯನ್ನು ತಿರುಗಿಸಿರಿ. ನಿಮ್ಮ ಮಕ್ಕಳು ವೈದಿಕ ವಿದ್ಯಾಸಂಪನ್ನರಾಗಬೇಕೆಂಬ ಉದ್ದೇಶದಿಂದಲೇ ಶ್ರೀ ॥೧॥ ಗಳಿಂದ ಪಾಠಶಾಲೆಯ ವ್ಯವಸ್ಥೆಯು ಉತ್ತಮರೀತಿಯಿಂದ ಇಡಲ್ಪಟ್ಟದೆ. ಮತ್ತು ಪಾಠಶಾಲೆಯ ಅಧ್ಯಾಪಕತ್ವಕ್ಕೆ ಬ್ರಹ್ಮ ಶ್ರೀ ಉಮಚಿಗಿ ಮಳೀಮಠದ ಶಂಕರಶಾಸ್ತ್ರಿಗಳನ್ನು ನಿಯಮಿಸಲ್ಪಟ್ಟದ್ದಾರೆ. ಪಾಠಶಾಲೆಯಲ್ಲಿ ತರ್ಕ-ವೇದಾಂತ-ಸಾಂಖ್ಯ-ಯೋಗಶಾಸ್ತ್ರಗಳ ಪಾಠಗಳು ಜರುಗುತ್ತವಲ್ಲದೆ, ಸಾಹಿತಿಯೂ ಮಠದ ದೀಕ್ಷಾ-ವಿವಾಹಾದಿ ವಿಧಿಗಳ ಪಾಠಗಳು ಕೂಡಾ ನಡೆಯುತ್ತವೆ. ಆದ್ದರಿಂದ ಈ ಸುಸಮಯವನ್ನು ಕಳೆಯದೆ ಕೂಡಲೆ ವಟುಗಳನ್ನು ಕಳಿಸುವದು ನಿಮಗೆ ತಕ್ಕದ್ದಾಗಿದೆ. ಈ ನಮ್ಮ ಮಠಸ್ಥಾಪನಾಚಾರ್ಯರು ಶ್ರೀ ॥೨॥ ನಮ್ಮಗಳ ಹೀನಾವಸ್ಥೆಯನ್ನು ನೋಡಿ ನಮ್ಮ ಮೇಲಿನ ಕೃಪೆಯಿಂದಲೇ ಇಂಥ ಮಹತ್ಕಾರ್ಯದಲ್ಲಿ ಮನಸ್ಸು ಮಾಡಿದ್ದಾರೆ. ಇದು ನಮ್ಮಗಳ ಸುದೈವವೇ ಸರಿ. ನಾವುಗಳು ವೈದಿಕವಿದ್ಯೆಯನ್ನು ಬಿಟ್ಟು ಕೇವಲ ಐಹಿಕ ಸುಖಸಾಧನವಾದ ಲೌಕಿಕ ವಿದ್ಯೆಯಲ್ಲಿಯೇ ಆಸಕ್ತರಾದರೆ ನಮ್ಮ ವೀರಶೈವ ಮಠದ ಧರ್ಮಾಧಿಕಾರವು ನಮ್ಮಗಳ ಕೈಬಿಟ್ಟುಹೋಗುವ ಪ್ರಸಂಗಬಂದೀತು. ಈಗ ಇಂಥಾ ಕಾಲವು ತಲೆದೋರುತ್ತಲಿದೆ. ಈ ಕಾಲದಲ್ಲಿ ನಾವು ವೈದಿಕವಿದ್ಯಾ ಧುರೀಣರಾಗಿ ನಮ್ಮ ಹಕ್ಕು-ಬಾಬುಗಳನ್ನು ಉಳಿಸಿಕೊಳ್ಳಬೇಕಾದದ್ದು ಪ್ರತಿಯೊಬ್ಬ ಗುರುವರ್ಗದವರಾದ ನಮ್ಮಗಳ ಕರ್ತವ್ಯವಾಗಿದೆ. ನಮ್ಮ ಅಧಿಕಾರವನ್ನು ನಾವು ಉಳಿಸಿಕೊಳ್ಳಬೇಕಾದರೆ ಸಂಸ್ಕೃತ ವಿದ್ಯೆಯಾವಶ್ಯಕತೆಯುಂಟು.

ಇದನ್ನು ಪರ್ಯಾಲೋಚಿಸಿಯೇ ಸದರಿ ಶ್ರೀ "  " ಗಳವರು ಈತರದ ವ್ಯವಸ್ಥೆಯನ್ನು ಮಾಡಿದ್ದಾರೆ. ಮಠಾಧಿಕಾರಿಗಳೇ, ಸಂಕ್ಷೇಪವಾಗಿ ಬರೆದ ಈ ನೋಟೀಸಿನ ಅಭಿಪ್ರಾಯವನ್ನು ಮನಸ್ಸಿನಲ್ಲಿ ತಂದು ವಟುಗಳನ್ನು ಕಳಿಸುವ ವ್ಯವಸ್ಥೆಮಾಡಿರಿ. ವಿದ್ಯಾರ್ಥಿಗಳು ಸಾಕಷ್ಟು ಕೂಡಿದಮೇಲೆ ಸ್ಥಲ ದೊರೆಯಲು ತೊಂದರೆಯಾದೀತು. ಕಾರಣ ಕೂಡಲೆ ವಟುಗಳನ್ನು ಕಳಿಸಿರಿ.

ಮುಕ್ಕಾಂ ತುಂಗಭದ್ರಾ,
ತಾಲೂಕಾ ಆದವಾನಿ.
೨೫-೪-೧೯೨೧

ಶ್ರೀಮಜ್ಜಗದ್ಗುರೂಜ್ಜಯಿನೀ ಸದ್ಧರ್ಮ
ಸಿಂಹಾಸನಾಧೀಶ್ವರ ಶ್ರೀ ಸಿದ್ಧಲಿಂಗ ಶಿವಾಚಾರ್ಯ
ಮಹಾಸ್ವಾಮಿಗಳವರ ಎಜಂಟ್
**ತೂಲಹಳ್ಳಿ ಮಠದ ಸಿದ್ಧಪ್ಪಯ್ಯ, ಉಜ್ಜಯಿನೀ**

---

## ಬಳ್ಳಾರಿಯಲ್ಲಿ ಸುವೃಷ್ಟಿಗರೆಸಿದ್ದು

ಒಂದು ಸಾರೆ (೧೯೨೦-೨೧ ನೇ ಇಸ್ವಿಯಲ್ಲಿ) ಬಳ್ಳಾರಿ ಪ್ರಾಂತದೊಳು ಮಳೆ, ಬೆಳೆ ಇಲ್ಲದೆ ದುರ್ಭಿಕ್ಷವಾಗಿ, ಎಲ್ಲ ಕಡೆಗೂ ಹಾಹಾಕಾರ ಉಂಟಾಯಿತು. ಅನೇಕ ಗ್ರಾಮದ ಜನರಿಗೆ ಅನ್ನವಿಲ್ಲದೆ, ದನ-ಕರುಗಳಿಗೆ ಹೊಟ್ಟು-ಸೊಪ್ಪೆಗಳಿಲ್ಲದೆ ಬಳಲುತ್ತ ಗುಳೇವು ಕಟ್ಟಿಕೊಂಡು ಬಳ್ಳಾರಿ ಪಟ್ಟಣಕ್ಕೆ ಬಂದು ಸೇರಿದರು.

ಇಷ್ಟರೊಳಗೆ ಆ ಬಳ್ಳಾರಿ ಪಟ್ಟಣಕ್ಕೆ ಆ ದೀನಜನರ ಸುದೈವದಿಂದ ತಪೋಸಿಧಿಗಳೂ, ಮಹಿಮಾಶಾಲಿಗಳೂ ಆದಂಥ ಉಜ್ಜಯಿನೀ ಜಗದ್ಗುರು ಮಹಾ ಶ್ರೀಗಳವರ ಸವಾರಿಯು ದಯಮಾಡಿಸಿತು. ಸಮಸ್ತ ಗುರುಭಕ್ತರೂ ಸೇರಿ, ಜಗದ್ಗುರುಗಳವರನ್ನು ಗೌರವದಿಂದ ಆಗಮಿಸಿಕೊಂಡು ಮೂರ್ತಮಾಡಿಸಿ, ಸರ್ವರೂ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿ, ಹಸ್ತಾಂಜಲಿ ಬದ್ಧರಾಗಿ ನಿಂತುಕೊಂಡು, ಮಹಾಗುರುವೇ, ಈವರೆಗೂ ಮಳೆಯಾಗದೆ, ಬೆಳೆಯಿಲ್ಲದೆ ಹೋದುದರಿಂದ ಅನೇಕ ಸಹಸ್ರ ಬಡಜನರು ಬಂದು ನಮ್ಮ ನಗರವನ್ನು ಸೇರಿದ್ದಾರೆ. ಈ ಭಯಂಕರವಾದ ದುರ್ಭಿಕ್ಷ (ಬರಗಾಲ) ದ ಹಾವಳಿಯನ್ನು ಎಷ್ಟು ಹೇಳೋಣ! ಈ ಕಷ್ಟವೆಂದಿಗೆ ಪರಿಹಾರವಾಗುವದೋ ತಿಳಿಯದಾಯಿತಲ್ಲಾ! ಮಹಾಪಾದ ಕೃಪೆಯಾದರೆ ತುಂಬಾ ಸಂತೋಷವಾಗುವದೆಂದು ಬಿನ್ನೈಸಿಕೊಂಡರು.

ಕರುಣಾಳುವೂ, ದೀನಜನೋದ್ಧಾರನೂ ಆದ ಮಹಾಗುರುವರೇಣ್ಯನು ಬಹು ಕನಿಕರಪಟ್ಟು ಸದ್ಭಕ್ತ ಶಿಖಾಮಣಿಗಳೇ, ನೀವು ಭಯಪಡಬೇಡಿರಿ. ಇನ್ನು ಸ್ವಲ್ಪ ದಿವಸಗಳಲ್ಲಿಯೇ ಸುವೃಷ್ಟಿಯಾಗುವದು. ಮುಂದೆ ಸುಖವಾಗುವದೆಂದು ಶುಭವಾಕ್ಯವನ್ನು ಅಪ್ಪಣೆಕೊಡಿಸಿದರು. ತರುವಾಯ ಕೆಲವರು ಶ್ರೀಮಂತರು ಮಹಾಗುರುಗಳವರಿಗೆ ಬಿನ್ನಹಮಾಡಿ, ೪-೮ ಭೂರಿ ಅಂನಸಂತರ್ಪಣೆ, ಸಮಾರಾಧನೆಗಳನ್ನು ನಡೆಯಿ

ಸಿದರು. ಮಹಾಶ್ರೀಗಳವರೂ ತಮ್ಮ ಶ್ರೀ ರುದ್ರಾಭಿಷೇಕ ಮಹಾಪೂಜಾಸಮಾರಂಭವನ್ನು ಪ್ರತಿನಿತ್ಯ ನಡೆಸುತ್ತಯಿದ್ದು, ಭಕ್ತರನ್ನು ಕರೆಯಿಸಿ, ಗುರುಸೇವಾಧುರೀಣರೇ ನಮ್ಮದೊಂದು ಅನ್ನಸಂತರ್ಪಣೆ ಸಮಾರಂಭ ನಡೆಯಿಸಬೇಕಾಗಿದೆ. ನೀವೆಲ್ಲರೂ ಭಕ್ತಿಯಿಂದ ನಿಂತು ಆ ಕಾರ್ಯವನ್ನು ಪೂರೈಸಬೇಕೆಂದು ಅಪ್ಪಣೆಮಾಡಲು, ಭಕ್ತರು ಬೇಕಾಗುವ ಸಾಹಿತ್ಯಗಳನ್ನೊದಗಿಸಿ ಶಾಕ-ಪಾಕಾದಿಗಳನ್ನು ಸಿದ್ಧಮಾಡಿಸಿ, ಡಂಡೂರ ಹೊಡಿದರು. ತಾ. ೪-೮-೧೯೩೧ ನೇ ಇಸ್ವಿ ದಿವಸ ಉದಯ ೧೦ ಗಂಟೆಯಿಂದ ಅನ್ನ ತೃಪಿಕಾರ್ಯವು ಪ್ರಾರಂಭವಾಯಿತು. ಸ್ಥಲ, ಪರಸ್ಥಲದ ಎಷ್ಟೋ ಸಹಸ್ರಾವಧಿ ಜನರು ಭೋಜನಮಾಡಿ ತೃಪ್ತರಾದರು. ರಾತ್ರಿ ೧೦ ಗಂಟೆವರೆಗೂ ಭೋಜನಸಮಾರಂಭ ನಡೆಯಿತು. ಆಹಾ! ಮಹಾಗುರು ಪ್ರಸಾದದಿಂದ ಪರಮ ಸಂತೋಷವಾಯಿತೆಂದು ಕೊಂಡಾಡಿದರು.

ಈ ಗುರುಸಾರ್ವಭೌಮರ ಕೃಪಾದೃಷ್ಟಿಯಿಂದ ಆ ದಿವಸ ವೃಷ್ಟಿ ಪ್ರಾರಂಭವಾಗಿ ೩-೪ ತಾಸುಗಳವರೆಗೆ ಅದ್ಭುತವಾದ ಮಳೆಗರೆಯಿತು. ಮಾರನೇ ದಿವಸ ಎಲ್ಲಿ ನೋಡಿದರೂ ಕೆರೆ, ಬಾವಿ, ಹೊಂಡ, ಹಳ್ಳ, ಕೊಳ್ಳಗಳೆಲ್ಲಾ ತುಂಬಿ ತುಳುಕುತ್ತಿಪ್ಪವು. ಎತ್ತ ನೋಡಿದರೂ ಜಲಮಯವೇ ಆಗಿತ್ತು. ಆಗ ಸಮಸ್ತ ಜನರಿಗೂ ಅಪಾರವಾದ ಸಂತೋಷಸಾಗರವು ಮೇರೆದಪ್ಪಿ, ಈ ಮಹಾನುಭಾವರಾದ ಉ। ಜ। ಸಿ। ಶಿವಾಚಾರ್ಯ ಮಹಾಸ್ವಾಮಿಗಳಿಂದ ನಾವು ಸುಖವನ್ನು ಹೊಂದಿದೆವೆಂದು ಪರಮ ಭಕ್ತಿಯಿಂದ ಕೊಂಡಾಡಿದರು.

---

## ಶ್ರೀ ಜಗದ್ಗುರು ಕೇದಾರ ಪೀಠಕ್ಕೆ ಪಟ್ಟಾಧಿಕಾರ ನೆರವೇರಿಸಿದ್ದು

ಈ ಪೀಠಾಧೀಶರಾದ ಶ್ರೀ ವಿಶ್ವಲಿಂಗ ಶಿವಾಚಾರ್ಯರು ಈ ಮೊದಲು ಶಿವಸಾಯುಜ್ಯವನ್ನು ಹೊಂದಿದ ಕೂಡಲೇ ಇದೇ ಸಂಧಿಯನ್ನು ಸಾಧಿಸಿ, ಈ ಪೀಠದ ಮೇಲೆ ಕಣ್ಣಿಟ್ಟದ್ದ ಪರರು ಇದರ ಆಧಿಪತ್ಯವನ್ನು ಅಪಹರಿಸಿಕೊಳ್ಳಲು, ವಿಶ್ವಪ್ರಯತ್ನವನ್ನು ಮಾಡಿ, ಅಲ್ಲಿಯ ಪ್ರಭುತ್ವಾಧಿಕಾರಿಗಳ ಮನವಲಿಸಿ, ಅವರ ಅನುಮತಿಸಿಗೊಳ್ಳುವ ಸ್ಥಿತಿಗೆ ತಂದುಕೊಡಿದ್ದರು. ಈ ಸಂಗತಿಯು ಇನ್ನುಳಿದ ಪೀಠಾಧೀಶ್ವರರಿಗೂ, ವೀರಶೈವ ಸಮಾಜ ಪ್ರಮುಖರಿಗೂ ತಿಳಿಯಲು, ಈ ಸಮಯದಲ್ಲಿ ಉದಾಶೀನಮಾಡಬಾರದೆಂದು ಉಜ್ಜಯಿನೀ ಜಗದ್ಗುರು ಮಹಾ ಶ್ರೀಗಳವರು ಬಹು ಜಾಗ್ರತೆಯಿಂದ ದೇಶಮಧ್ಯ ಸಮಾಜಾಭಿಮಾನಿಗಳೂ, ಶ್ರೀ ಜಗದ್ಗುರು ಪೀಠಾಭಿಮಾನಿಗಳೂ ಆದ ಪ್ರಮುಖ ಜನರಿಗೆ ತಾರುಗಳ ಮೂಲಕ ಶೃತಪಡಿಸಲಾಯಿತು.

ಈ ಮಹಾನುಭಾವರು ಮೊದಲಿಂದಲೇ ಕೇದಾರ ಪೀಠೋದ್ಧಾರದಲ್ಲಿ ನಿರತರಾಗಿದ್ದು, ಈಗ ಪುನಃ ಸರ್ವ ಪ್ರಮುಖರಿಗೆ ತಿಳಿಸಲು, ಅನೇಕರು ಅಲ್ಲಿಯ ಕಮಿಷನರ

ಕಡೆಗೆ ವಿಜ್ಞಾಪನೆಗಳನ್ನು ಕಳುಹಿಸಿದರು. ಅದರಲ್ಲೂ ಮುಖ್ಯರಾದ ದಿವಾನ ಬಹಾದ್ದೂರ ಪುಟ್ಟಣ್ಣ ಶೆಟ್ಟರವರು ಆ ಪೀಠವು ವೀರಶೈವರಿಗೆ ಸಂಬಂಧಪಟ್ಟ ಪೂರ್ವದ ಚರಿತ್ರವನ್ನೂ, ಲಿಂಗೈಕ್ಯರಾದ ಶ್ರೀ ವಿಶ್ವಲಿಂಗ ಸ್ವಾಮಿಗಳವರು ತಮ್ಮ ಬಳಿಯಲ್ಲಿರಿಸಿಕೊಂಡ ಶ್ರೀ ಗಂಗಾಧರ ಶಾಸ್ತ್ರಿಗಳಿಗೆ ಉತ್ತರಾಧಿಕಾರ ಮಾಡಬೇಕೆಂದು ಬರೆದ ಲೇಖವನ್ನೂ, ಅದರ ಅಧಿಪತ್ಯವು ಈ ಸಮಾಜದವರ ಒಪ್ಪಿಗೆಯಿಲ್ಲದವರಿಗೆ ಎಂದಿಗೂ ಆಗಕೂಡದೆಂಬ ಆಧಾರಗಳನ್ನೂ ಕಾಣಿಸಿ, ಬಲವಾದ ಲೇಖವನ್ನು ಅಲ್ಲಿರುವ ಚೀಫ್ ಕಮಿಷನರೇ ಮೊದಲಾದ ಅಧಿಕಾರಿಗಳಿಗೂ, ಸಂಯುಕ್ತಾಧಿಪತ್ಯದ ಧರ್ಮ ರಕ್ಷಣ ಸಭೆಯವರಿಗೂ ಬರೆದು ಕಳುಹಿಸಿದುದರ ಮೇಲೆ ಅವರೆಲ್ಲಾ ಇವುಗಳನ್ನು ವಿಮರ್ಶ ಮಾಡಿ, ಪರ್ಯಾಲೋಚಿಸಿ ನೋಡಿ, ಇದಕ್ಕೆ ಸಂಪೂರ್ಣ ಒಪ್ಪಿಗೆಯನ್ನು ಕೊಟ್ಟರು. ( ತಾ. ೨೪-೧೦-೧೯೩೦ ಮೈಸೂರು ಸ್ಟಾರಿನಲ್ಲಿ )

ಬಳಿಕ ಕರ್ನಾಟಕ, ಮಹಾರಾಷ್ಟ್ರ, ತೆಲಗು ದೇಶದ ಪ್ರಮುಖರೂ, ಶಾಸ್ತ್ರಿಗಳೂ, ಅಧಿಕಾರಿಗಳೂ ಅಲ್ಲಲ್ಲಿ ಸಭೆಗಳನ್ನು ಮಾಡಿ, ಕೈ। ಶ್ರೀ ವಿಶ್ವಲಿಂಗಸ್ವಾಮಿಗಳವರ ಮೃತ್ಯುಲೇಖನ ಪ್ರಕಾರ ಅಧಿಕಾರವಾಗತಕ್ಕದ್ದೆಂದು ಠರಾವು ಮಾಡಿಸಿ, ಬಹುಜನರ ಸಹಿಯೊಡಗೂಡಿದ ಲೇಖವನ್ನು ಟಿಹರಿ ಮಹಾರಾಜರ ಕಡೆಗೆ ಕಳುಹಿಸಿದರು. ಕೆಲವರು ತಾರುಮೂಲಕ ಅರಿಕೆಮಾಡಿಕೊಂಡರು.

ಈ ಪ್ರಕಾರ ಬಲವಾದ ಅಭಿಪ್ರಾಯಗಳು ವಿಶೇಷವಾಗಿ ಹೋದುದರಿಂದ ಅಲ್ಲಿಯ ಅಧಿಕಾರಿಗಳು ತೃಪ್ತರಾಗಿ ಯಾವ ಯೋಚನೆಮಾಡದೆ ಹುಕುಂ ಕೊಟ್ಟರು. ಆಗ ತಾ. ೧-೧೦-೧೯೩೧ ನೆಯ ಶುಭದಿವಸದಲ್ಲಿ ಅದೇ ಗಂಗಾಧರ ಶಾಸ್ತ್ರಿಗಳವರಿಗೆ ಸಕ್ರಮವಾಗಿ ಶ್ರೀ ಜಗದ್ಗುರು ಕೇದಾರ ಪೀಠಕ್ಕೆ ಪಟ್ಟಾಧಿಕಾರವು ಅತಿ ವಿಜೃಂಭಣೆಯಿಂದ ನಡೆಯಿತು. ಆ ನೂತನ ಜಗದ್ಗುರುಗಳವರಿಗೆ ಶ್ರೀ ನೀಲಕಂಠಲಿಂಗ ಶಿವಾಚಾರ್ಯರೆಂಬ ನಾಮಕರಣವು ಮಾಡಲ್ಪಟ್ಟಿತು. ಅಧಿಕಾರವಾದ ನಂತರ ಶ್ರೀ ಟಿಹರಿ ಮಹಾರಾಜರವರ ಅರಮನೆಗೆ ನೂತನ ಶ್ರೀಗಳವರು ದಯಮಾಡಿಸಿದಾಗ್ಗೆ ಗೌರವದಿಂದ ಕರೆದೊಯ್ದು ತಮ್ಮ ಸಿಂಹಾಸನದ ಮೇಲೆ ಮೂರ್ತಗೊಳಿಸಿ, ಕಸ್ತೂರಿ ತಿಲಕವನಿಟ್ಟು, ದಿವ್ಯ ಮತ್ತು ಅಮೌಲ್ಯವಾದ ಆಹೇರಗಳನ್ನಿತ್ತು ಪ್ರಾಚೀನ ಪದ್ಧತಿಯಂತೆ ಈ ಜಗದ್ಗುರು ನೀಲಕಂಠ ಶಿವಾಚಾರ್ಯರಿಗೆ "ರಾವಲ್" ಎಂಬ ಘನವಾದ ಟೈಟಲ್ (ಪ್ರಶಸ್ತಿ) ಯನ್ನು ಒಪ್ಪಿಸಿ ಫಲಾಶೀರ್ವಾದ ಪಡೆದು ಪುನಃ ಕೇದಾರ ಉಷಾಮಠಕ್ಕೆ ಸವಾರಿಯು ದಯಮಾಡೋಣವಾಯಿತು.

ಈ ನೂತನ ಜಗದ್ಗುರುಗಳವರು ಬಹು ಚತುರರಾಗಿಯೂ, ವಾಗ್ಮಿಗಳೂ, ಪಂಡಿತರೂ, ಧೈರ್ಯಶಾಲಿಗಳೂ, ಸಂಸ್ಕೃತ-ಇಂಗ್ಲೀಷು-ಹಿಂದೀ-ಮರಾಠಿ-ತೆಲುಗು-ಕನ್ನಡ ಭಾಷೆಗಳಲ್ಲಿ ಕೋವಿದರಾಗಿದ್ದು, ಕೇದಾರಮಠ ಸಂಸ್ಥಾನದ ಕಾರ್ಯಕಲಾಪಗಳನ್ನು ಬಹು ಜಾಗರೂಕತೆಯಿಂದ ನಡೆಸುತ್ತ ಉಜ್ಜಯಿನೀ ಜಗದ್ಗುರು ಮಹಾ

ಶ್ರೀಗಳವರಿಗೆ ಆಗಾಗ್ಗೆ ಸಕಲ ವೃತ್ತಾಂತಗಳನ್ನು ಅರಿಕೆಮಾಡಿಕೊಳ್ಳುತ್ತಿದ್ದರು. ಈ ಪ್ರಕಾರ ಕೇದಾರಪೀಠವನ್ನುದ್ಧಾರಮಾಡಿ ಪ್ರಕಾಶಕ್ಕೆ ತಂದು ಆ ಪೀಠದ ವೈಭವವು ಚತುರ್ದಿಕ್ಕುಗಳಲ್ಲಿ ಬೆಳಗುವಂತೆ ಮಾಡಿದ ಉಜ್ಜಯಿನೀ ಜ. ಮಹಾಶ್ರೀಗಳವರನ್ನು ಸರ್ವರೂ ಕೊಂಡಾಡಿದರು.

ತರುವಾಯ ಶ್ರೀಶೈಲ. ಪೀಠಾಧೀಶರಾದ ಜಗದ್ಗುರು ನಾಗಲೂಟಿ ಭಿಕ್ಷಾ ವೃತ್ತಿ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಪೀಠದ ಉತ್ತರಾಧಿಕಾರಮಾಡುವ ಯೋಚನೆಯ ಬಗ್ಗೆ ಗುಂತಕಲ್ಲ ಮುಕ್ಕಾಮಿನಿಂದ ಉ. ಮಹಾಶ್ರೀಗಳವರಲ್ಲಿಗೆ ಆಹ್ವಾನ ಕಳಿಸಿದರು. ಆ ಪ್ರಕಾರ ವಿಧ್ವನಕಲ್ಲಿಂದ ಗುಂತಕಲ್ಲು ಗ್ರಾಮಕ್ಕೆ ತಾ. ೧೪-೧೦-೫೧ ನೇ ಇಸ್ವಿ ದಿವಸ ದಯಮಾಡಿಸಿದರು.

## ಗುಂತಕಲ್ಲು ಮುಕ್ಕಾಮಿಗೆ ಕೇದಾರ ಪೀಠದ ನೂತನ ಜಗದ್ಗುರುಗಳವರ ಆಗಮನ

ಇದೇ ಸಮಯಕ್ಕೆ ಉತ್ತರ ಹಿಂದುಸ್ಥಾನದ ಹಿಮವತ್ಕೇದಾರ ಪೀಠಕ್ಕೆ ನೂತನಾಧಿಕಾರವನ್ನು ಹೊಂದಿದ ಶ್ರೀ ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮ ಸಿಬ್ಬಂದಿಯೊಡಗೂಡಿ ಸಂಚರಿಸುತ್ತ ಶಿವಯೋಗಿ ಪುಂಗವರಾದ ಉಜ್ಜಯಿನೀ ಮಹಾಶ್ರೀಗಳವರ ಪ್ರಥಮ ದರ್ಶನ ಮಾಡಿಕೊಳ್ಳ ಬೇಕೆಂಬ ಕುತೂಹಲವುಳ್ಳವರಾಗಿ ಪ್ರಯಾಣ ಬೆಳೆಸುತ್ತ ಗುಂತಕಲ್ಲು ಮುಕ್ಕಾ ಮಿಗೆ ತಾರೀಖು ೧೫—೧೦—೧೯೫೧ ನೇ ಇಸ್ವಿ ದಿವಸ ಆಗಮಿಸಿದರು.

ವಯೋವೃದ್ಧರೂ ಜ್ಞಾನವೃದ್ಧರೂ ಪರಮ ಜಿತೇಂದ್ರಿಯರೂ ಶಿವಪೂಜಾ ದುರಂಧರರೂ ಆದ ಶ್ರೀಶೈಲಪೀಠದ ಜಗದ್ಗುರುಗಳವರು ತಮ್ಮ ಸನ್ನಿಧಿಗೆ ಆಕ ಸ್ಮಾತ್ ಉಭಯ ಪೀಠದ ಜಗದ್ಗುರುಗಳವರು ಆಗಮಿಸಿದ್ದರಿಂದ ಆನಂದಭರಿತ ರಾಗಿ ಪರಸ್ಪರ ಪೂಜಾ, ವಂದನ, ಆದರಾತಿಥ್ಯಗಳಿಂದ ಸಂತೈಸಿದರು.

ಬಳಿಕ ಕೇದಾರಪೀಠದ ಜಗ. ಶ್ರೀಗಳವರು ಹಿಮಾಲಯದಲ್ಲಿ ತಮಗೆ ಪಟ್ಟಾ ಧಿಕಾರ ನೆರವೇರಿದ ಸಮಾರಂಭವನ್ನೂ ಶ್ರೀ. ಟಿ ಹ ರಿ ಮಹಾರಾಜರವರು ಅತ್ಯಂತ ಭಕ್ತಿಯಿಂದಲೂ ಗೌರವದಿಂದಲೂ ಆಹ್ವಾನಿಸಿಕೊಂಡು ಸಿಂಹಾಸನದಲ್ಲಿ ಮೂರ್ತಮಾಡಿಸಿ ಅಮೌಲ್ಯವಾದ ಪಚ್ಛದ ಕಡಗ, ಮೌಕ್ತಿಕಮಾಲಾ ಮತ್ತು "ರಾವಲ್" ಎಂಬ ಘನವಾದ ಬಿರುದನ್ನು ಅರ್ಪಿಸಿದ್ದು ಮುಂತಾದ ವಿಷಯ ಗಳನ್ನು ಸವಿಸ್ತಾರವಾಗಿ ಅರಿಕೆ ಮಾಡಿಕೊಂಡು ಆ ಸಾಮಾನುಗಳನ್ನು ತೋರಿಸಿದರು ಈ ಉಭಯ ಜ. ಗಳವರು ಕೇಳಿ ಬಹು ಸಂತೋಷಭರಿತರಾದರು. ತ್ರಿಪೀಠದ ಪೂಜ್ಯ ಪಾದರಾದ ಜಗದ್ಗುರುಗಳವರು ಕೆಲವು ದಿವಸ ವಿನೋದದಿಂದ ಇದ್ದರು.

---

## ಕೊಂಡಕುಂದಿಯಲ್ಲಿ ಮಹೋತ್ಸವ

ಉ. ಮಹಾ ಶ್ರೀಗಳವರು ತಮ್ಮ ಸಿಬ್ಬಂದಿಯೊಡಗೂಡಿ ಗುಂತಕಲ್ಲಿನಿಂದ ಹೊರಟು ಕೊಂಡಕುಂದಿ ಗ್ರಾಮಕ್ಕೆ ಆಗಮಿಸಲು, ಸರ್ವ ಭಕ್ತಾದಿಗಳು ಅತ್ಯಂತ ವೈಭವದಿಂದ ಕರೆತಂದು ಮುಕ್ಕಾಂ ಮಾಡಿಸಿ ಗುರುಕಾಣಿಕಾದಿಗಳನ್ನರ್ಪಿಸಿ ಆಶೀರ್ವಾದ ಪಡೆದರು. ಅದೇ ಗ್ರಾಮದಲ್ಲಿರುವ ವಿರಕ್ತಮಠದ ಶ್ರೀ ರೇವಣಸಿದ್ಧ ಸ್ವಾಮಿಗಳೆಂಬವರು ಈ ಮಹಾನುಭಾವರ ದಿವ್ಯ ಪ್ರಕಾಶವನ್ನೂ ಇವರ ಪವಿತ್ರವಾಣಿಯಿಂದ ಹೊರಡುವ ಅಮೌಲ್ಯವಾದ ಸದ್ಬೋಧವನ್ನೂ ಪ್ರತಿದಿವಸ ಬಂದು ವಂದಿಸಿ ಕೇಳುತ್ತ ಪೂಜ್ಯ ಬುದ್ಧಿಯೂ ಗುರುಭಕ್ತಿಯೂ ಉತ್ಪನ್ನವಾಗಿ ಮಹಾ ಸವಾರಿಯನ್ನು ತಮ್ಮ ಮಠಕ್ಕೆ ದಯಮಾಡಿಸಿಕೊಂಡು ಮಹಾಪಾದಪೂಜಾ ಮಾಡಿ ಧನ್ಯರಾಗಬೇಕೆಂಬ ಸದ್ಭಾವನೆಯುಂಟಾಗಿ ಮಹಾಶ್ರೀಗಳವರ ಸನ್ನಿಧಿಗೆ ಒಂದು ಬಿನ್ನಹ ಪತ್ರವನ್ನು ಬರೆದುಕೊಂಡು ಪ್ರಾರ್ಥನೆ ಮಾಡಿದರು. ಆಗ ಜಗದಾಚಾರ್ಯರವರು ಅವರ ಬಿನ್ನಹವನ್ನು ಕೈಕೊಂಡು ನಿಮ್ಮ ಇಷ್ಟದಂತಾಗಲಿ ಸಕಲ ಸಾಹಿತ್ಯಗಳನ್ನು ಸಿದ್ಧಪಡಿಸಿಕೊಳ್ಳಿರಿ. ಎಂದು ಅಪ್ಪಣೆಯಾಯಿತು.

ಮಹಾ ಶ್ರೀಗಳವರ ಅಪ್ಪಣೆಯಾದ ತಕ್ಷಣವೇ ಸದರಿ ಶ್ರೀ ರೇವಣಸಿದ್ಧಸ್ವಾಮಿಗಳವರು ಅತ್ಯುಲ್ಲಾಸದಿಂದ ಸರ್ವ ಭಕ್ತಮಂಡಳಿಯೊಡಗೂಡಿ ತಮ್ಮ ಮಠವನ್ನೂ ಬಜಾರಗಳನ್ನೂ ತಳಿರು-ತೋರಣಗಳಿಂದಲಂಕರಿಸಿ ಅನೇಕ ವಾದ್ಯವಿಶೇಷಗಳಿಂದಲೂ ಮಹೋತ್ಸವದಿಂದಲೂ ತಾ. ೨೦-೧೦-೧೯೨೧ ನೇ ದಿವಸ ಪಲ್ಲಕ್ಕಿಯಲ್ಲಿ ಶ್ರೀ||ಗಳ ಮೂರ್ತಗೊಳಿಸಿ ತಮ್ಮ ಮಠಕ್ಕೆ ವಿಜಯಂಗೈಸಿಕೊಂಡು ತ್ರಿಕರಣಶುದ್ಧವಾದ ಭಕ್ತಿಯಿಂದ ಶ್ರೀ ಜಗದ್ಗುರುಗಳವರ ಪಾದಪೂಜಾ, ತೀರ್ಥಪ್ರಸಾದಗಳ ಸೇವನ, ಗುರುಕಾಣಿಕಾರ್ಪಣ ಮುಂತಾದ ಸೇವಾದಿಗಳನ್ನರ್ಪಿಸಿ, ಫಲಾಶೀರ್ವಾದಗಳನ್ನು ಪಡೆದು ಧನ್ಯರಾದರು.

ತರುವಾಯ ಕೆಲವು ದಿನಗಳ ನಂತರ ಹೊರಟು, ತಾರೀಖು ೩-೧೧-೨೧ ನೆಯ ದಿವಸ ಉರಕೊಂಡಿ ಗ್ರಾಮಕ್ಕೆ ಮುಕ್ಕಾಂ ಮಾಡಿ ಅಲ್ಲಿಯ ಭಕ್ತರ ಸೇವೆಗಳಂ ಕೈಕೊಂಡು ಶಿವಪೂಜಾಲೋಲರಾಗಿದ್ದರು.

---

## ರಾಯದುರ್ಗದಲ್ಲಿ ಕೇದಾರ ಶ್ರೀ ಜಗದ್ಗುರುಗಳವರ ಮಹೋತ್ಸವವು

ಈ ಮೊದಲು ಗುಂತಕಲ್ಲು ಮುಕ್ಕಾಮಿನಲ್ಲಿ ಕೇದಾರ ಪೀಠದ ನೂತನ ಜಗದ್ಗುರುಗಳವರು ತಮಗೆ ಬ್ರಿಟಿಶ್ ಸಾರ್ವಭೌಮರು ಭರತಖಂಡದಲ್ಲೆಲ್ಲ ಬೇಕಾದಷ್ಟು ಬಂದೂಕು-ರಿವಾಲ್ವರುಗಳನ್ನೂ, ಕತ್ತಿಗಳನ್ನೂ ಉಪಯೋಗಿಸಬಹುದೆಂದೂ ಹಾಗು

ಅಡ್ಡಪಲ್ಲಕ್ಕಿ, ಪಂಚಕಲಶ ಮೊದಲಾದ ೭೨ ಬಿರುದಾವಳಿಗಳನ್ನೂ ಉಪಯೋಗಿಸ ಬಹುದೆಂದೂ ಹುಕುಮನ್ನು ದಯಪಾಲಿಸಿರುದದನ್ನು ತೋರಿಸಿ ಹೇಳಿದ್ದರಷ್ಟೇ. ಈ ಯಾವತ್ತೂ ವಿಷಯಗಳನ್ನು ಪರಿಶೀಲನಮಾಡಿ ಉಭಯ ಮಹಾಶ್ರೀಗಳವರು ಮನದಲ್ಲಿ ತುಂಬಾ ಹರುಷಭರಿತರಾಗಿ ಆದಷ್ಟು ಶೀಘ್ರವಾಗಿ ನಮ್ಮ ಪ್ರಾಂತದೊಳು ಯಾವದಾದರೊಂದು ದೊಡ್ಡ ಪಟ್ಟಣದಲ್ಲಿ ಸಮಸ್ತ ಬಿರುದಾವಳಿಯಿಂದ ಕೇದಾರ ಶ್ರೀಗಳವರ ಮಹೋತ್ಸವವನ್ನು ನಡೆಯಿಸಿ ನಮ್ಮ ನೇತ್ರಗಳಿಂದ ಸಂಪೂರ್ಣ ನೋಡಿ ಆನಂದಪಡಬೇಕೆಂದು ಆಲೋಚನೆ ಮಾಡಿ ಗುಂತಕಲ್ಲಿನಿಂದ ಹೊರಟು ರಾಯದುರ್ಗ ಸಮೀಪದ ಗ್ರಾಮಗಳಲ್ಲಿ ನಿಮ್ಮ ಸಂಚಾರ ನಡೆಯುತ್ತಿರಲೆಂದು ಆ ಕೇದಾರ ಶ್ರೀಗಳವರ ಸರಕೀಟನ್ನು ಕಳುಹಿಸಿದ್ದರು.

ಇತ್ತ ಉರವಕೊಂಡೆ ಗ್ರಾಮದಿಂದ ಉ. ಮಹಾಶ್ರೀಗಳವರು ಹೊರಟು, ತಮ್ಮ ಸದುದ್ದೇಶವನ್ನು ಪೂರೈಸುವದರ ಸಲುವಾಗಿ ತಾರೀಖು ೯—೧೨—೨೧ ನೇ ದಿವಸ ರಾಯದುರ್ಗ ಮುಕ್ಕಾಂ ಮಾಡಿದರು. ಆ ನಗರದ ಭಕ್ತಾದಿಗಳಿಗೆ ಸಮಸ್ತ ವಿಷಯವನ್ನು ಶೃತಪಡಿಸಿ ಕೇದಾರ ಪೀಠದ ನೂತನಾಧಿಕಾರಿಗಳನ್ನು ಮಹೋತ್ಸವ ದಿಂದ ದಯಮಾಡಿಸಿಕೊಳ್ಳಿರಿ ಎಂದು ಹೇಳಿ ಆಪ್ರಕಾರ ಸಕಲ ವಿಧವಾದ ಏರ್ಪಾಡ ಮಾಡಿಸಿ ತಾರೀಖು ೧೫—೧—೧೯೨೨ ನೇ ದಿವಸ ಕೇದಾರ ಪೀಠದ ಶ್ರೀಗಳವರನ್ನು ಅಡ್ಡಪಾಲ್ಕಿ, ಪಂಚಕಲಶ ಮೊದಲಾದ ೭೨ ಬಿರುದಾವಳಿಗಳೊಡನೆ ಮಹೋತ್ಸವ ವನ್ನು ಅತ್ಯಂತ ವೈಭವದಿಂದ ನಡೆಯಿಸಿದರು. ಈ ಉತ್ಸವವನ್ನು ಕಣ್ಮುಟ್ಟ ನೋಡಿ ನೋಡಿ ಅಹಾ! ನಮ್ಮ ಸಂಕಲ್ಪವು ಇಂದಿಗೆ ಪೂರ್ಣವಾಯಿತೆಂದು ಬಹು ಸಂತೋಷಭರಿತರಾದರು. ಆ ರಾಯದುರ್ಗದಲ್ಲಿ ಉಭಯ ಜಗದ್ಗುರುಗಳವರು ಸಮ್ಮಿಲಿತ ರಾಗಿದ್ದು ಆ ಪ್ರಾಂತದ ಶಿವಭಕ್ತ ಸಮೂಹವನ್ನು ಧರ್ಮೋಪದೇಶ ದರ್ಶನಾಶೀರ್ವಾದಗಳಿಂದ ಪುನೀತರನ್ನಾಗಿ ಮಾಡಿ ೧೫-೨೦ ದಿವಸಗಳ ನಂತರ ಈ ಮಹಾನುಭಾವರು ಮುಂದೆ ಪ್ರಯಾಣ ಬೆಳಿಸಿ ಕೂಡ್ಲಗಿ ತಾಲೂಕು ಕೊಟ್ಟೂರು ಪ್ರಾಂತಕ್ಕೆ ಆಗಮಿಸಿದರು.

---

## ಶ್ರೀ ರಂಭಾಪುರೀ ಪೀಠದ ವಿಷಯ

ಈ ಪೀಠವು ಮೈಸೂರು ದೇಶದ ಕಡೂರು ಡಿ. ನರಸಿಂಹರಾಜಪುರ ತಾಲೂಕು (ರಂಭಾಪುರಿ) ಬಾಳೆಹೊನ್ನೂರು ಎಂಬಲ್ಲಿ ವಿರಾಜಿಸುತ್ತಿರುವುದು. ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಕೊಲ್ಲಿಪಾಕಿ ಕ್ಷೇತ್ರದಲ್ಲಿ ಸೋಮೇಶ್ವರ ಲಿಂಗದಿಂದವ ತರಿಸಿ ಮಲಯಾದ್ರಿ ಮಧ್ಯದಲ್ಲಿ ತಮ್ಮ ಈ ಪೀಠವನ್ನು ಸ್ಥಾಪಿಸಿದರು. ಹಾಗೂ ಜಗತ್ತಿನಲ್ಲಿ ಅನೇಕ ಮಹಿಮಾತಿಶಯಂಗಳನ್ನು ನಡೆಯಿಸಿ ತಮ್ಮ ಮಹತ್ವ ಪ್ರಭಾವ ದಿಂದ "ರುದ್ರಮುನೀಶ್ವರ" ನೆಂಬ ತೇಜೋಮಯ ಗುರುಮೂರ್ತಿಯನ್ನು ಭೂಗರ್ಭ

ದಿಂದವತಾರ ಮಾಡಿಸಿ ಅವರಿಗೆ ಪಟ್ಟಾಧಿಕಾರವನ್ನೆಸಗಿ ಪುನಃ ಕೊಲ್ಲಿಪಾಕಿ ಸೋಮನಾಥಲಿಂಗದಲ್ಲಿ ಐಕ್ಯವಾದರು. ಈ ರುದ್ರಮುನೀಶ್ವರರ ತರುವಾಯ ಮುಕ್ತಿಮುನೀಶ್ವರ, ದಿಗಂಬರ ಮುನೀಶ್ವರ, ಶಿವಾಚಾರ್ಯರೇ ಮೊದಲಾಗಿ ೧೧೮ ಜನ ಸ್ವಾಮಿಗಳು ಪೀಠಾಧಿಪರಾಗಿದ್ದಾರೆ. ಈ ಪೀಠದಲ್ಲಿ ಅತ್ಯಂತ ಪ್ರಾಚೀನವಾದ ನಾಲ್ಕಾರು ಶಿಲಾಶಾಸನಗಳು ಉಪಲಬ್ಧವಿದ್ದು ಅದರಲ್ಲೊಂದು ಶಾಸನವು ಶ್ರೀ ರಾಮಚಂದ್ರರ ಕಾಲಮಾನದ್ದಿರಬಹುದೆಂದು ಅದರಲ್ಲಿರುವ ಕೆಲವು ಚಿಹ್ನೆಗಳಿಂದ ಕಂಡುಬರುತ್ತದೆ. ಹಾಗೂ ಸುಮಾರು ೧೨೦೦ ವರುಷಗಳ ಪೂರ್ವದ ಒಂದು ತಾಮ್ರಶಾಸನವನ್ನು ಮೈಸೂರು ಗವರ್ನಮೆಂಟ ಓರಿಯಂಟಲ್ ಲೈಬ್ರರಿಯ ಆರ್ಚಲಾಜಿಕಲ್ ಡಿಪಾರ್ಟಮೆಂಟಿನವರು ಶೋಧನೆಯ ನಿಮಿತ್ಯವಾಗಿ ಮಠದಿಂದ ತೆಗೆದುಕೊಂಡಿರುತ್ತಾರೆ. ಶಾಸನವು ತಮಿಳು ಭಾಷೆಯಲ್ಲಿರುವುದು. ಇದರ ವಿಷಯದಲ್ಲಿನ ಶೋಧಗಳನ್ನೂ ವಿವರವನ್ನೂ ಸರಕಾರದವರೇ ಪ್ರಕಟಿಸಲಿರುವರು.

ಈ ಪೀಠಾಧೀಶ್ವರರಿಂದ ಪ್ರಸಿದ್ಧರಾದ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗವು ಪ್ರಾಪ್ತವಾಯಿತೆಂಬ ವಿಷಯದಲ್ಲಿ ಅನೇಕ ಉಲ್ಲೇಖಗಳಿದ್ದು, ಈ ವಿಷಯವನ್ನೇ ತೋರಿಸುವ ಲಿಂಗಪ್ರದಾನರೂಪವಾದ ಒಂದು ಶಿಲಾಚಿತ್ರವೂ ಕೂಡಾ ಸದ್ಯಃ ಮಠದಲ್ಲಿ ವಿರಾಜಮಾನವಾಗಿರುವುದು.

ಈ ಪೀಠದ ಅಧಿಕಾರಿಗಳಲ್ಲಿ ಎಷ್ಟೋ ಜನ ಮಹಾ ತಪಸ್ವಿಗಳಾಗಿ ಹೋಗಿದ್ದಾರೆ. ಈ ಪೀಠದ ಯೋಗ್ಯತೆಯನ್ನೂ ಮಹತ್ವವನ್ನೂ ತಿಳಿದು ಮೈಸೂರು ಸರಕಾರದವರು ಗೌರವಾಸ್ಪದಗಳಾದ ಅನೇಕ ಬಿರುದು ರಹದಾರಿಗಳನ್ನು ಪೀಠಕ್ಕೆ ದಯಪಾಲಿಸಿರುತ್ತಾರೆ.

(ಬೆಂ. ವೀ. ಕ. ದಿಂಪ, ೧೯೨೭.)

## ರಂಭಾಪುರೀ ಪೀಠದ ಜಗದ್ಗುರುಗಳವರು ಲಿಂಗೈಕ್ಯರಾದದ್ದು.

ಈ ರಂಭಾಪುರಿ ವೀರಸಿಂಹಾಸನಾಧಿಪತಿಗಳಾದ ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳವರು ಶಿವಪೂಜಾನಿಷ್ಠರೂ, ಧೈರ್ಯಶಾಲಿಗಳೂ, ಜಿತೇಂದ್ರಿಯರೂ ಆಗಿದ್ದು ಈ ಪೀಠಾಧಿಕಾರಕ್ಕೆ ಬಂದ ಲಾಗಾಯಿತು ಮಹಾ ಸಂಸ್ಥಾನದ ಸಮಸ್ತ ಕಾರ್ಯಗಳನ್ನು ಚತುರತನದಿಂದಲೂ ಸುವ್ಯವಸ್ಥೆಯಿಂದಲೂ ಜರಗಿಸುತ್ತಾ ಬಂದಿದ್ದು, ತಮ್ಮ ಪೀಠದಲ್ಲೇ ಗಂಭೀರಮುದ್ರೆಯಿಂದ ಶಿವಪೂಜಾಲೋಲರಾಗಿರುತ್ತಿದ್ದರು. ತಮಗೆ ಕೇವಲ ಪ್ರೀತಿಪಾತ್ರರಾಗಿಯೂ ಈ ಪೀಠಾಭಿಮಾನಿಗಳಾಗಿಯೂ ಇದ್ದ ದಿ. ಬಹಾದ್ದೂರ ಕೆ. ಪಿ. ಪುಟ್ಟಣ್ಣಶೆಟ್ಟರೂ ಶ್ರೀಮಾನ್ ಪಿ. ಮಹಾದೇವಯ್ಯನವರೂ ಶ್ರೀಯುತ ಯಜಮಾನ್ ಯೆಡೆಹಳ್ಳಿ ಶಾಂತಪ್ಪಶೆಟ್ಟರೂ ಮುಂತಾದ ಸದ್ಭಕ್ತರನ್ನು ಮಾತ್ರ ಆಗಾಗ್ಗೆ ತಮ್ಮಲ್ಲಿಗೆ ಕರೆಯಿಸಿಕೊಂಡು ಆಪ್ತಾಲೋಚನೆ ಮಾಡುತ್ತಿದ್ದರು.

ಈ ಮೊದಲು ಬೀರೂರು ವೀರಶೈವ ಮಹಾಸಭೆಗೆ ದಯಮಾಡಿಸಿ ಸಭಾಕಾರ್ಯವನ್ನು ಪೂರೈಸಿಕೊಂಡು ಬಂದು ಪದ್ಧತಿ ಪ್ರಕಾರ ಪ್ರತಿವರುಷ ಫಾಲ್ಗುಣ ಶು. ೧೩ ಮಿತಿಗೆ ಶ್ರೀ ಜ. ರೇಣುಕಶಿವಾಚಾರ್ಯರ ಜಯಂತಿ ರಥೋತ್ಸವಾದಿ ಕಾರ್ಯಗಳನ್ನು ಜರುಗಿಸುತ್ತಾ ಬಂದರು. ಕೇವಲ ವಯೋವೃದ್ಧರಾದುದರಿಂದಲೂ ಮಲೆನಾಡ ಶೀತಲ ಪ್ರದೇಶವಾದುದರಿಂದಲೂ ದೇಹದಲ್ಲಿ ಜಾಡ್ಯವುಂಟಾಗಿ ಅನೇಕ ಚಿಕಿತ್ಸೆ ಮಾಡಿಸಿದರೂ ಗುಣವಾಗದೆ ದುಂದುಭಿ ಸಂ. ಮಾಘದಲ್ಲಿ ತಾರೀಖು ೮—೨—೧೯೨೨ ನೇ ದಿವಸ ಶಿವಸಾಯುಜ್ಯವನ್ನು ಹೊಂದಿದರು.

ಈ ದುಃಖವಾರ್ತೆಯು ಸರ್ವತ್ರ ವ್ಯಾಪಕವಾಗಿ ಸಮಸ್ತ ವೀರಶೈವ ಮಂಡಳಿಗೆ ತುಂಬಾ ವ್ಯಥೆಯಾಯಿತು. ಆದರೆ ದೂರಪ್ರದೇಶವಾದುದರಿಂದ ದೇಹಾಲಸ್ಯ ವಾರ್ತೆಯು ತಿಳಿಯದೆ ಹೋದಕಾರಣ ಇನ್ನುಳಿದ ಪೀಠಾಧೀಶರಾಗಲಿ ಸಮಾಜದ ಪ್ರಮುಖರಾಗಲಿ ಅವರಲ್ಲಿಗೆ ಹೋಗುವದಕ್ಕೆ ಸಾಧ್ಯವಾಗಲಿಲ್ಲ. ತಮ್ಮ ಪೀಠಕ್ಕೆ ಯೋಗ್ಯ ವಟುವನ್ನು ಅಧಿಕಾರಮಾಡಲು ನಿರ್ಣಯಿಸದೆ ಹೋದರು. ಮುಂದೆ ಯಾವಪ್ರಕಾರ ಮಾಡಬೇಕೆಂದು ಸಮಾಜದ ಪ್ರಮುಖರು ತುಂಬಾ ಆಲೋಚನಾ ತತ್ಪರರಾದರು.

ಆ ಮಹಾ ಸಂಸ್ಥಾನದ ಸಕಲ ವ್ಯವಸ್ಥೆಯನ್ನು ಎಜಂಟರಾದ ಎಸ್. ಕೆ. ಎಮ್. ರುದ್ರಾರಾಧ್ಯರೂ ಮತ್ತು ಯಜಮಾನ ಎ. ಶಾಂತಪ್ಪಶೆಟ್ಟರೂ ನೋಡಿಕೊಂಡು ಹೋಗುತ್ತಿದ್ದರು.

ಇತ್ತ ಈ ಉಜ್ಜಯನೀ ಜಗದ್ಗುರು ಮಹಾಶ್ರೀಗಳವರು ಕೆಲವು ದಿವಸ ಕೊಟ್ಟೂರು ದಾರುಕಾಶ್ರಮದಲ್ಲಿಯೂ ಕೆಲವು ದಿವಸ ಮಹಾ ಸಂಸ್ಥಾನ ಮಠದಲ್ಲಿಯೂ ಇರುತ್ತ ತಮ್ಮ ವ್ಯಾಜ್ಯಗಳು ಮದ್ರಾಸ್ ಹೈಕೋರ್ಟಿನಲ್ಲಿ ನಡೆದಿರಲು ಇವರ ತಪೋಬಲದಿಂದ ಒಂದೊಂದೇ ವ್ಯಾಜ್ಯಗಳು ಇವರಂತೆ ನಿರ್ಣಯವಾಗಿ ಜಯ ಹೊಂದುತ್ತ ಬಂದವು. ಈ ವ್ಯವಹಾರಗಳಿಗೆ ಬೇಕಾಗುವ ಧನಸಹಾಯ. ಜನಸಹಾಯ ಮುಂತಾದವುಗಳ ವ್ಯವಸ್ಥೆ ಮಾಡುತ್ತಿರಲಾಗಿ ಏಕಕಾಲಕ್ಕೆ ಶ್ರೀ ರಂಭಾಪುರೀ ಜಗದ್ಗುರುಗಳವರು ಪರಂಧಾಮವನ್ನೈದಿದರೆಂಬ ದುಃಖವಾರ್ತೆಯನ್ನು ಕೇಳಿ ಬಹು ವ್ಯಥೆ ಪಟ್ಟು ಮುಂದಿನ ವ್ಯವಸ್ಥೆ ಹೇಗೆ ಮಾಡಬೇಕೆಂಬಾಲೋಚನೆ ಮಾಡುತ್ತ ಪುನಃ ಸಂಚಾರಾರ್ಥವಾಗಿ ಹೊರಟು ತಾ. ೬—೭—೧೯೨೧ ಕ್ಕೆ ಕೂಡ್ಲಗಿ ತಾಲೂಕು ಬೆಣಕಲ್ಲು ಗ್ರಾಮದಲ್ಲಿ ಮುಕ್ಕಾಂ ಮಾಡಿ ಸಂಸ್ಥಾನದ ಕಾರ್ಯಗಳನ್ನು ನಡೆಯಿಸಿಕೊಂಡಿದ್ದರು.

ಶ್ರೀಮದ್ರಂಭಾಪುರೀ ಪೀಠದ ಜಗದ್ಗುರುಗಳವರು ಲಿಂಗೈಕ್ಯರಾದ ಬಳಿಕ ಕೆಲವು ತಿಂಗಳು ಗತಿಸಲಾಗಿ ಈ ಪೀಠಕ್ಕೆ ಮುಂದೆ ಅಧಿಕಾರಮಾಡಲು ಯಾವರೀತಿ ಮಾಡತಕ್ಕದ್ದು? ಯಾವ ವಟುವನ್ನು ಆರಿಸತಕ್ಕದ್ದು? ಎಂಬ ಆಲೋಚನೆಗಾಗಿ. ಕಾಶಿ,

ಶ್ರೀಶೈಲ, ಕೇದಾರ ಪೀಠಾಧಿಪತಿಗಳವರಿಂದ ಈ ಉಜ್ಜಯಿನೀ ಜಗದ್ಗುರುಗಳವರ ಸನ್ನಿಧಿಗೆ ಪತ್ರಗಳು ಬಂದವು. ಇದರ ವಿಷಯದಲ್ಲಿ ಆಲೋಚನೆ ಮಾಡೋಣ ವೆಂದು ಪ್ರತಿ ಜವಾಬು ಬರೆದು ತರುವಾಯ ಬೆಣಕಲ್ಲು ಮುಕ್ಕಾಮಿಸಿಂದ ಹೊರಟು ಹೂವಿನ ಹಡಗಲಿ ತಾಲೂಕು ಮೋರಿಗೇರಿ, ಇಟ್ಟಿಗಿ ಗ್ರಾಮಗಳಲ್ಲಿ ಕೆಲವು ದಿವಸ ಮುಕ್ಕಾಂ ಮಾಡಿರಲಾಗಿ ವಸಂತಕಾಲವು ಪ್ರಾಪ್ತವಾಯಿತು. ಬಿಸಲಿನ ತಾಪಾ ಧಿಕವಾಗಲು ನಾಲ್ಕೆಂಟು ದಿವಸಗಳ ವರೆಗೆ ಯಾವದಾದರೊಂದು ಮನಾನಂದವಾಗುವ ಉತ್ತಮ ಹವೆಯುಳ್ಳ ಪವಿತ್ರಸ್ಥಾನಕ್ಕೆ ಹೋಗಿ ವಾಸಮಾಡಿ ಬರಬೇಕೆಂದಾಲೋಚನೆ ಮಾಡಿದರು.

## ಸೋಗಿ ಬೆಟ್ಟದಲ್ಲಿ ವಿಶ್ರಾಂತಿ

ಹೂವಿನಹಡಗಲಿಗೆ ದಕ್ಷಿಣದಿಕ್ಕಿನ ೬-೭ ಮೈಲಿನಲ್ಲಿ ಬೆಟ್ಟದ ಮಲ್ಲೇಶ್ವರನಗಿರಿ ಎಂಬುವದು ಆ ಪ್ರಾಂತದಲ್ಲಿ ಪ್ರಸಿದ್ಧವಾಗಿರುವದಲ್ಲದೆ ಅತ್ಯುನ್ನತ ಶಿಖರಾಗ್ರದಿಂದ ಬಹು ದೂರದ ವರೆಗೂ ದರ್ಶನವಾಗುತ್ತಿದೆ. ಇದರ ಮಧ್ಯಭಾಗದಲ್ಲಿ ಪ್ರಾಚೀನ ದೇವಾಲಯದೊಳು ಶ್ರೀ ಮಲ್ಲಿಕಾರ್ಜುನ ನಾಮಕ ಲಿಂಗವೂ, ಬೆಟ್ಟದ ತುದಿಯಲ್ಲಿ ಶ್ರೀ ಮುದಿಮಲ್ಲೇಶನೆಂಬ ಲಿಂಗವೂ ಇರುತ್ತವೆ. ಆ ದೇವಾಲಯದ ಒಳಗೆ ಮಧ್ಯ ಅಂಕಣದಲ್ಲಿ ಕೆಳಗಿಳಿದರೆ "ಶ್ರೀ ಪಾತಾಳ ಗಂಗಾ" ಎಂಬ ಚಿಕ್ಕ ಜಲಾಶಯ (ನೀರಿನ ಕುಂಡ) ಇದೆ. ಆದರಲ್ಲಿ ಸರ್ವೋತ್ತಮವಾದ ೮-೧೦ ಕೊಡಗಳು ತುಂಬು ವಷ್ಟು ಶೀತಲೋದಕವು ಸದಾವಕಾಲ ತುಂಬಿರುವುದು. ಬಹುಜನರು ಭಕ್ತಿಯಿಂ ದಲೂ, ಉತ್ಸುಕತೆಯಿಂದಲೂ ಶ್ರಾವಣಮಾಸ, ನವರಾತ್ರಿ, ಶಿವರಾತ್ರಿ, ಪರ್ವಕಾಲ ಗಳಲ್ಲಿ ಇಲ್ಲಿಗೆ ಬಂದು ಮಹಾಲಿಂಗಕ್ಕೆ ಪೂಜಾ-ನೈವೇದ್ಯ, ಗಣಸಂತರ್ಪಣೆ ಮಾಡು ತ್ತಿರುವರು.

ಈ ಸ್ಥಾನವು ಬೇವು-ಬಿಲ್ವಾದಿ ವೃಕ್ಷಗಳಿಂದಲೂ, ತಂಗಾಳಿಯಿಂದಲೂ ಬಹು ದೂರದ ವರೆಗೂ ಕಾಣಿಸುವ ಸೃಷ್ಟಿಸೌಂದರ್ಯದ ಸೊಬಗಿನಿಂದಲೂ ಪ್ರೇಕ್ಷಕರಿಗೆ ಅತ್ಯಂತ ಮನೋರಂಜಕವಾಗಿ ತೋರುವದೆಂಬ ಸದ್ವಾರ್ತೆಯನ್ನು ಕೇಳಿ ಈ ಮಹಾ ಶ್ರೀಗಳವರು ಉತ್ಸುಕತೆಯಿಂದ ತಾ. ೧-೩-೧೯೩೩ನೇ ದಿವಸ ಮಿತಪರಿವಾರದೊಡನೆ ದಯಮಾಡಿಸಿ ೮-೧೦ ದಿವಸಗಳ ವರೆಗೂ ಶಿವಪೂಜಾನಂದಲೋಲರಾಗಿ ವಿಶ್ರಾಂತಿ ಹೊಂದಿ ಆ ಪವಿತ್ರ ಗಿರಿಯಲ್ಲಿರುವ ಶಿವಾಲಯ ವಿಗ್ರಹಾದಿಗಳನ್ನು ಪರಾಂಬರಿಸಿ ಕೊಂಡು ಆನಂದತುಂದಿಲಮಾನಸರಾಗಿ ಪುನಃ ಅಲ್ಲಿಂದ ಹೊರಟು ಹೊಳಗುಂದಿ ಗ್ರಾಮಕ್ಕೆ ಆಗಮಿಸಿದರು.



## ಹೊಳಗುಂದಿಯಲ್ಲಿ ಸದ್ಬೋಧವೂ, ಮಹಾಗಣಾರಾಧನೆಯೂ

ಈ ಗ್ರಾಮದ ಸದ್ಭಕ್ತಮಂಡಲಿಯು ಮಹೋತ್ಸವದೊಡನೆ ದಯಮಾಡಿಸಿ ಕೊಂಡು "ಶ್ರೀ ಬಳ್ಳೇಶ್ವರ" ದೇವಾಲಯದ ಶೃಂಗಾರಮಂಟಪದೊಳು ಮೂರ್ತ ಮಾಡಿಸಿದರು.

ಮಹಾಸಂಸ್ಥಾನದ ಪದ್ಧತಿಯಂತೆ ಗುರುಕಾಣಿಕಾರ್ಪಣಾದಿ ಕಾರ್ಯಕ್ರಮ ಗಳು ನಡೆದವು. ಪ್ರತಿನಿತ್ಯ ಸನ್ನಿಧಿಯಲ್ಲಿ ನೆರೆದ ಶಿಷ್ಯಸಂದೋಹಕ್ಕೆ ಜಗದ್ಗುರುಗ ಳವರಿಂಲೂ, ತತ್ಕಾಲದಲ್ಲಿ ಆಗಮಿಸಿದ ಶಾಸ್ತ್ರಿಗಳವರಿಂದಲೂ, ಪಟ್ಟಾಧಿಕಾರಿಗಳಿಂ ದಲೂ ಅನೇಕ ವಿಧ ಉಪನ್ಯಾಸಗಳು ನಡೆಯುತ್ತಿರಲು ರುಧಿರೋದ್ಗಾರಿ ಸಂವತ್ಸರದ ಚೈತ್ರ ಶು. ೧ (ಯುಗಾದಿ ಹಬ್ಬವು) ಪ್ರಾಪ್ತವಾಯಿತು. ಮಹಾಸನ್ನಿಧಿಯಲ್ಲಿ ಭಕ್ತ- ಮಾಹೇಶ್ವರಾದಿ ಮಂಡಳಿಯು ಸಮ್ಮಿಳಿತರಾಗಲು ಶ್ರೀ ರುದ್ರಾಭಿಷೇಕ ಮಹಾಪೂಜಾ ದಿಗಳು ಪರಮ ಸಂಭ್ರಮದಿಂದ ನೆರವೇರಿದವು. ಸಾಯಂಕಾಲಕ್ಕೆ ಪುನಃ ಸಭೆಯಲ್ಲಿ ಈ ಗುರುಸಾರ್ವಭೌಮರು ತಮ್ಮ ಅಮೃತವಾಣಿಯಿಂದ ರುದ್ರಾಕ್ಷಿ ಉತ್ಪತ್ತಿ, ರುದ್ರಾಕ್ಷಿ ಧಾರಣ ವಿಷಯದಲ್ಲಿ ಬಹು ಸ್ವಾರಸ್ಯವಾದ ಭಾಷಣಮಾಡಿದರು.

ಸದ್ಭಕ್ತರೇ, ಪೂರ್ವದಲ್ಲಿ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬ ರಾಕ್ಷ ಸರು ಬ್ರಹ್ಮದೇವರನ್ನು ಕುರಿತು ಬಹುಕಾಲ ಘೋರ ತಪಸ್ಸನ್ನಾಚರಿಸಲು ಬ್ರಹ್ಮನು ಪ್ರತ್ಯಕ್ಷನಾಗಿ ಅವರ ಇಷ್ಟದಂತೆ ವರಪ್ರದಾನಮಾಡಿದನು. ಮುಂದೆ ಆ ರಾಕ್ಷಸರು ಅಂತರಿಕ್ಷದಲ್ಲಿ ಕಬ್ಬಿಣ-ಬೆಳ್ಳಿ-ಬಂಗಾರಗಳಿಂದ ಅತ್ಯಂತ ಭದ್ರವಾಗಿ ತ್ರಿಪುರ (ಮೂರು ಪಟ್ಟಣ) ಗಳನ್ನು ನಿರ್ಮಾಣ ಮಾಡಿಕೊಂಡು ಅವುಗಳಲ್ಲಿ ವಾಸಮಾಡಿ ಬಹು ಮದಾಂಧರಾಗಿ ದೇವ-ದಾನವ-ಮಾನವಾದಿ ಪ್ರಾಣಿಗಳಿಗೆ ಅನಂತರೀತಿಯಿಂದ ಕಷ್ಟ- ನಷ್ಟ-ಸಂಕಟಗಳನ್ನುಂಟುಮಾಡುತ್ತ ಯಾರಿಂದಲೂ ಮೃತರಾಗದೆ ಲೋಕಕಂಟಕ ರಾಗಿದ್ದರು.

ತರುವಾಯ ಸಕಲ ದೇವತಾಸಮೂಹದ ಪ್ರಾರ್ಥನೆಯ ಮೇರೆಗೆ ಆ ದುಷ್ಟ ದೈತ್ಯರನ್ನೂ ತ್ರಿಪುರಗಳನ್ನೂ ಸಂಹರಿಸುವದಕ್ಕೋಸ್ಕರ ಅಖಿಲ ಬ್ರಹ್ಮಾಂಡ ಪಾಲಕ ನಾದ ಶ್ರೀ ಪರಶಿವನು ಭೂಮಿಯೇ ರಥವು, ಸೂರ್ಯ-ಚಂದ್ರರೇ ಗಾಲಿಗಳು, ಬ್ರಹ್ಮನೇ ಸಾರಥಿಯು, ಮಹಾಮೇರುಪರ್ವತವೆ ಧನುಸ್ಸು, ಆದಿಶೇಷನೇ ಸಿಂಜನಿ ಯು, ವಿಷ್ಣುವೇ ಬಾಣವು ಈಪ್ರಕಾರ ಸಿದ್ಧತೆಮಾಡಿಕೊಂಡು ಅಂತರಿಕ್ಷದಲ್ಲಿ ತಿರುಗು ತ್ತಿದ್ದ ಆ ತ್ರಿಪುರಗಳ ಬಳಿಗೆ ಬಂದು ಅವುಗಳನ್ನು ಒಂದೇ ಬಾಣದಿಂದ ಸಂಹರಿಸುವ ದಕ್ಕಾಗಿ ಬಹುಕಾಲದವರೆಗೆ ಅನಿಮಿಷ ದೃಷ್ಟಿಯಿಂದ (ಕಣ್ಣುರೆಪ್ಪೆ ಮುಚ್ಚದಂತೆ) ನಿರೀಕ್ಷಿಸುತ್ತಿರಲು ಆ ಪರಮೇಶ್ವರನ ತ್ರಿನೇತ್ರಗಳಿಂದ ಉದುರಿದ ಜಲಬಿಂದುಗಳು ಭೂಮಿಯ ಮೇಲೆ ಬಿದ್ದವು. ಆ ತಕ್ಷಣವೇ ಸಸಿಗಳಾಗಿ ಮರಗಳಾಗಿ ರುದ್ರಾಕ್ಷಿಗಳೂ ಉತ್ಪನ್ನವಾದವು. ಈ ವಿಷಯದಲ್ಲಿ—

"ಪುರಾತ್ರಿಪುರವಧಾಯೋನ್ಮೀಲಿತಾಕ್ಷೋ ಹಂತೇಭ್ಯೋ ಜಲಬಿಂದವಃ ।
ಭೂವೌ ಪತಿತಾಸ್ತೇ ರುದ್ರಾಕ್ಷಾ ಜಾತಾಃ ॥ " ಇತ್ಯಾದಿ.

ಆದುದರಿಂದ ಶಿವಪೂಜಾ - ಶಿವಭಕ್ತಿಪರಾಯಣರಾದವರು ಭಿನ್ನವಾಗದೆ ಇದ್ದ, ಅನ್ಯರಿಂದ ಧರಿಸಲ್ಪಡದೆ ಇದ್ದ, ಕೆಂಪಾಗಿ ಧೃಡವಾಗಿ ಮನೋಹರವಾಗಿ ಇರುವಂಥವುಗಳನ್ನು (೩೨) ಕಂಠಮಾಲೆಯನ್ನಾಗಿ ಮಾಡಿ ಧರಿಸಬೇಕು. ಮತ್ತು "ಕ್ರಿಮಿದಷ್ಟಂ ಭಿನ್ನಭಿನ್ನಂ । ಕಂಟಕೈರ್ಹೀನಮೇವಚ ॥ ವ್ರಣಯುಕ್ತಾ ಮ ವೃತ್ತಂಚ । ಷಡ್ಭೇದಾನ್ ವರ್ಜಯೇನ್ನರಃ ॥ ಅಂದರೆ ಹುಳಕಡಿದವೂ, ಬಡಕಾದವೂ, ಸೀಳಿದವೂ, ಮುಳ್ಳೀಳದವೂ, ಡೊಂಕುಡೊಂಕಾದವು, ಘಾಯ ( ಧಕ್ಕೆ ) ಆದವೂ ಮುಂತಾದ (೬) ಕಲಂಕವುಳ್ಳವುಗಳನ್ನು ಧರಿಸಬಾರದು.

ಮುಖ್ಯವಾಗಿ "ಯಸ್ಯಾಂಗೇ ನಾಸ್ತಿ ರುದ್ರಾಕ್ಷೋ । ಏಕೋಪಿ ಬಹುಪುಣ್ಯದಃ। ತಸ್ಯ ಜನ್ಮನಿರರ್ಥಂಸ್ಯಾತ್ । ತ್ರಿಪುಂಡ್ರರಹಿತಂ ಯಥಾ ॥ ( ಸ್ಕಾಂದ ಪುರಾಣೇ) ಭಸ್ಮತ್ರಿಪುಂಡ್ರವನ್ನು ಧರಿಸದವನ ಜನ್ಮವು ಹೇಗೆ ವ್ಯರ್ಥವೋ ಹಾಗೆಯೇ ಬಹುಪುಣ್ಯವನ್ನುಂಟುಮಾಡುವ ಒಂದು ರುದ್ರಾಕ್ಷಿಯಾದರೂ ಯಾವನ ದೇಹದಲ್ಲಿರುವದಿಲ್ಲವೋ ಅವನ ಜನ್ಮವು ನಿರರ್ಥಕವಾದದ್ದು.

ಮತ್ತು "ಸ್ಮಶಾನಮೇವ ತದ್ದೇಹಂ । ತನ್ಮುಖಂ ಗಿರಿಗಹ್ವರಂ ॥ " ರುದ್ರಾಕ್ಷಿ ಧಾರಣವಿಲ್ಲದ ದೇಹವು ಸ್ಮಶಾನವು. ಆತನ ಬಾಯಿಯು ಪರ್ವತದ ಬಿಲವು ಹೀಗೆಂದು ಹೇಳಲ್ಪಟ್ಟದೆ. ಆದ್ದರಿಂದ ಪ್ರತಿಯೊಬ್ಬರೂ ದೇಹದಲ್ಲಿ ರುದ್ರಾಕ್ಷಿ ಧರಿಸಿರಬೇಕು. "ರುದ್ರಾಕ್ಷ ಧಾರಕೇ ಶಂಭುಃ । ಪರಿಪೂರ್ಣ ಕಟಾಕ್ಷವಾನ್ । ರುದ್ರಾಕ್ಷ ಧಾರಕಾಸ್ಸರ್ವೇ । ರುದ್ರಾಕಾರಾಃ ಪ್ರಕೀರ್ತಿತಾಃ ॥ (ಇತಿ ವಾಯುಸಂಹಿತ ಉತ್ತರ ಭಾಗೇ). ಶಿವನು ರುದ್ರಾಕ್ಷಿ ಧರಿಸಿದವನಲ್ಲಿ ಪೂರ್ಣ ಕೃಪೆಯುಳ್ಳವನಾಗುವನು. ಇದಲ್ಲದೆ— "ದರ್ಶನಾತ್ ಸ್ಪರ್ಶನಾಚ್ಚೈವ । ಸ್ಮರಣಾದಪಿ ಪೂಜನಾಲ್ ॥ ರುದ್ರಾಕ್ಷಧಾರಣಾಲ್ಲೋಕೆ । ಮುಚ್ಯಂತೆ ಪಾತಕೈರ್ಜನಾಃ ॥ " ಪರಮ ಪವಿತ್ರವಾದ ರುದ್ರಾಕ್ಷಿಯ ದರ್ಶನ-ಸ್ಪರ್ಶನ-ಸ್ಮರಣ-ಪೂಜನ-ಧಾರಣಗಳಿಂದ ಮಾನವನು ಸಕಲ ದೋಷ (ಪಾಪ) ಗಳಿಂದ ಬಿಡುಗಡೆ ಹೊಂದುವನಲ್ಲದೆ ಭೂತ-ಪ್ರೇತ-ಗ್ರಹಾದಿಗಳ ಬಾಧೆಗಳಿಲ್ಲದೆ ಸುಖಜೀವಿಯಾಗಿರುವನು. ಮತ್ತು ರುದ್ರಾಕ್ಷಿಗಳನ್ನು ಗುರು-ಜಂಗಮಮೂರ್ತಿಗಳಿಗೆ ದಾನಕೊಡುವದು ಅತ್ಯಂತ ಶ್ರೇಷ್ಠ ಫಲದಾಯಕವಾಗಿರುವದು ಇತ್ಯಾದಿ ಬೋಧಿಸಿದರು.

ಈಪ್ರಕಾರ ಗುರುಪುಂಗವರು ೩–೪ ತಿಂಗಳು ವರೆಗೂ ಅಲ್ಲಿ ಮುಕ್ಕಾಂ ಮಾಡಿ ಪವಿತ್ರವಾದ ಶ್ರಾವಣಮಾಸವು ಪ್ರಾಪ್ತವಾಗಲು ನಿತ್ಯಾನುಷ್ಠಾನವನ್ನು ಪರಮಾನಂದದಿಂದ ಜರಗಿಸಿದರು. ಈ ಗ್ರಾಮಕ್ಕೆ ಹೊಂದಿರುವ ಕೇವಲ ಶುಭ್ರವಾದ ಶಿಲಾಮಯ ಸಣ್ಣಗುಡ್ಡದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ದೇವಾಲಯಕ್ಕೆ ನಿತ್ಯವೂ ದಯಮಾಡಿಸುತ್ತ

ತಾ. ೩೯-೮-೧೯೩೩ ನೇ ದಿವಸ ಆ ದೇವಾಲಯದೊಳು ಭೂರಿ ಅನ್ನಸಂತರ್ಪಣೆ ನಡೆಯಿಸಿ ಪ್ರತಿಯೊಬ್ಬ ಮಾಹೇಶ್ವರರಿಗೆ ನಾಲ್ಕಾಣೆಯಂತೆ ದಕ್ಷಿಣೆ, ತಾಂಬೂಲಾದಿಗಳನ್ನು ಸ್ವಹಸ್ತದಿಂದಲೇ ಕೊಟ್ಟು ಆನಂದಪಡಿಸಿ ಮಹಾಕೀರ್ತಿ ಪಡೆದರು.

ವಾಚಕರೇ, ಈ ಪೂಜ್ಯಪಾದರಿಗೆ ಮಠಾಧಿಕಾರಿ ಜಂಗಮರಲ್ಲಿ ಬಹು ಪ್ರೇಮ. ಆಗಾಗ್ಗೆ ಅವರಿಗೆ ತೃಪ್ತಿಪಡಿಸುವದೂ, ಸದ್ಬೋಧಮಾಡಿ ಸನ್ಮಾರ್ಗ ತೋರಿಸುವದೂ ಮತ್ತು ಗುರುವರ್ಗದವರು ವಿದ್ಯಾವಂತರಾದರೆ ನಮ್ಮ ಸಮಾಜದೇಳ್ಗೆಯಾಗುವದೆಂಬ ಧೃಡಭಾವನೆಯೂ ಪೂರ್ಣವಾಗಿತ್ತು.

---

## ಹುವ್ವಿನಹಡಗಲಿಯಲ್ಲಿ ಮಹೋತ್ಸವವು.

ಹೊಳಗುಂದಿಯಿಂದ ಹುವ್ವಿನಹಡಗಲಿ ದೈವದವರಿಗೆ ಮುಕ್ಕಾಂ ಪತ್ರ ರವಾನಿಸಲು, ಆ ಗ್ರಾಮದ ಸಮಸ್ತರೂ ಸೇರಿ ನಾನಾವಿಧವಾಗಿ ಪುರವನ್ನಲಂಕರಿಸಿ. ತಾರೀಖು ೧-೯-೧೯೩೩ ನೇ ದಿವಸ ಶ್ರೀ ಜಗದ್ಗುರುಗಳವರನ್ನು ಮಹೋತ್ಸವದೊಡನೆ ಬಿಜಯಂಗೈಸಿಕೊಂಡು, ಕೋರಿ ಗುರುಶಾಂತಪ್ಪನವರ ಭವ್ಯವಾದ ಮಂದಿರದಲ್ಲಿ ಅಲಂಕರಿಸಲ್ಪಟ್ಟ ಮಂಟಪದೊಳು ಮೂರ್ತಮಾಡಿಸಲು, ತಕ್ಷಣವೇ ಸರ್ವರೂ "ಶ್ರೀ ಜಗದ್ಗುರು ಸಿದ್ಧಲಿಂಗರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿನಾಂ ಜೈ ಜೈ" ಎಂದು ಮಂಗಲಧ್ವನಿಯನ್ನು ಮಾಡಿ ವಂದಿಸಿ ಅಪ್ಪಣೆಪಡೆದರು.

ಬಳಿಕ ಪದ್ಧತಿ ಪ್ರಕಾರ ಸಂಸ್ಥಾನದ ಕಾರ್ಯಭಾಗಗಳು ನಡೆದವು. ಕೆಲವು ದಿವಸಗಳಲ್ಲಿ ( ನೈಜಾಂ ಸ್ಟೇಟ ) ಮುದಗಲ್ಲು ವೇ|| ಇಂದುಧರ ಶಾಸ್ತ್ರಿಗಳೆಂಬುವವರು ಬಂದು, ಸನ್ನಿಧಿಯಲ್ಲಿ ಶಿವಕೀರ್ತನಮೂಲಕ ನಾನಾವಿಧ ವಿಷಯಗಳನ್ನು ಹೇಳುತ್ತ ೪-೮ ದಿವಸ ಇದ್ದರು. ಮಹಾಪಾದ ಸನ್ನಿಧಿಯಿಂದ ಯೋಗ್ಯ ಸಂಭಾವನೆ ಕೊಡಲ್ಪಟ್ಟು- ಶಾಸ್ತ್ರಿಗಳೇ, ನಮ್ಮ ಪ್ರಾಂತದಲ್ಲಿ ಶಿವಕೀರ್ತನ ಮಾಡತಕ್ಕವರಿಲ್ಲಾ ಆದುದರಿಂದ. ನೀವು ನಮ್ಮ ಪ್ರಾಂತದಲ್ಲಿ ಸಂಚರಿಸುತ್ತ ಜನರಿಗೆ ಸದ್ಬೋಧಮಾಡಿರಿ. ಮುಖ್ಯವಾಗಿ ನಿಮ್ಮಂಥ ಧರ್ಮೋಪದೇಶಕರಿಂದಲೇ ಸಮಾಜ ಸುಧಾರಣೆಯಾಗಬೇಕಾಗಿದೆ. ಇತ್ಯಾದಿ ಶೃತಪಡಿಸಿ, ಫಲಾಶೀರ್ವಾದವನ್ನಿತ್ತು ಕಳುಹಿಸಿದರು.

ತಾರೀಖು ೧೪-೧೦-೧೯೩೩ ನೆಯ ದಿವಸ ಶ್ರೀಮದ್ರಂಭಾಪುರೀ ಪೀಠದ ಪೂರ್ಣ ಅಭಿಮಾನಿಶಾಲಿಗಳಾದ ಮ|| ರಾ|| ರಾ|| ಯೆಡೆಹಳ್ಳಿ ಶಾಂತಪ್ಪ ಶೆಟ್ಟರವರು ಮುಂದೆ ರಂಭಾಪುರೀ ಪೀಠಾಧಿಕಾರವನ್ನು ನೆರವೇರಿಸುವ ಆಲೋಚನೆಯ ಸಲುವಾಗಿ ಆ ಪೀಠದ ಎಜಂಟರಾದ ಎಸ್. ಕೆ. ಎಂ. ರುದ್ರಾರಾಧ್ಯರನ್ನೂ ಮತ್ತು ಜಗಲೂರು ಸಾಹುಕಾರ ಮ|| ರಾ|| ರಾ|| ಮಹಾಲಿಂಗಪ್ಪನವರನ್ನೂ ಇಲ್ಲಿಗೆ ( ಹೂ| ಹಡಗಲಿಗೆ )

ಕಳುಹಿಸಿಕೊಟ್ಟರು. ಮಹಾಸನ್ನಿಧಿಯವರು ಬಂದವರೊಡನೆ ಕೆಲವು ವಿಷಯಗಳ ಆಲೋಚನೆಮಾಡಿ, ಅವರನ್ನು ಪುನಃ ಯಜಮಾನ್ ಶಾಂತಪ್ಪ ಶೆಟ್ಟರಲ್ಲಿಗೆ ಕಳುಹಿಸಿದರು.

ತರುವಾಯ ಒಬ್ಬ ಸದ್ಭಕ್ತನು ಬಂದು ವಂದಿಸಿ— ಮಹಾಗುರುವೇ, ದೇಶದಲ್ಲಿ ಅನೇಕ ಜನರು ಗುರುಗಳೆಂದು ಹೇಳಿಕೊಳ್ಳುತ್ತಿರುವರು; ಗುರುಗಳೆಂದರೆ ಹೇಗಿರಬೇಕು ? ಗುರುತ್ವಾಧಿಕಾರಕ್ಕೆ ಯೋಗ್ಯರಾದವರ ಲಕ್ಷಣಗಳೇನು ? ಈ ಬಗ್ಗೆ ಧರ್ಮಶಾಸ್ತ್ರದಲ್ಲಿರುವ ವಿಷಯವಂ ದಯವಿಟ್ಟು ಅಪ್ಪಣೆಕೊಡಿಸಬೇಕೆಂದು ಬಿನ್ನೈಸಿಕೊಂಡನು. ಅದಕ್ಕೆ ಮಹಾ ಶ್ರೀಗಳವರು—

ಸದ್ಭಕ್ತನೇ, ಲೋಕದಲ್ಲಿ ಅನೇಕ ಜಾತಿಯ ಜನರು ಕಾಷಾಯವಸ್ತ್ರಧಾರಿಗಳಾಗಿ, ದುರಳ ವೇದಾಂತೋಪದೇಶದಿಂದ ಜನರನ್ನು ವಂಚಿಸುತ್ತ ನಾನು ಗುರು, ತಾನು ಗುರುವೆಂದು ಹೇಳಿಕೊಳ್ಳುತ್ತ ತಿರುಗಹತ್ತಿದ್ದಾರೆ. ಇಂತಹ ಜನರ ಬಲಿಗೆ ಬೀಳದೆ, ಅನಾದಿಸಂಸಿದ್ಧರಾದ ಗುರುಗಳಲ್ಲಿಯೇ ಭಕ್ತಿಯಿಂದ ನಡೆದುಕೊಳ್ಳಬೇಕು. ಧರ್ಮಶಾಸ್ತ್ರದಲ್ಲಿ ಈ ಗುರುವಿನ ಲಕ್ಷಣವು ಕೆಳಗೆ ಕಂಡಂತೆ ಹೇಳಲ್ಪಟ್ಟಿದೆ.

( ಕ್ರಿಯಾಸಾರ. ಉಪ. ೩೫ )

ಮಠಸ್ಥಲಸಮುತ್ಪನ್ನಃ ಶಾಂತಶ್ಶೈವಾಗಮಾರ್ಥವಿತ್ ।
ಅನೂಚಾನಃ ಪ್ರಸನ್ನಾತ್ಮಾ ಶಿವದೀಕ್ಷಾಭಿಷೇಚಿತಃ ॥
ಶಿವಾಗಮಜ್ಞೋ ಮತಿಮಾಂಶ್ಶಿವಪೂಜಾಪರಾಯಣಃ ।
ರುದ್ರಾಕ್ಷಮಾಲಾಂ ಬಿಭ್ರಾಣಸ್ತ್ರಿಪುಂಡ್ರಾಂಕಿತಮಸ್ತಕಃ ॥
ವಿಶುದ್ಧದೇಹಃ ಕುಲಜಃ ಶಿವಾಚಾರಸಮನ್ವಿತಃ ।
ಭಸ್ಮೋದ್ಧೂಲನನಿಷ್ಣಾತೋ ಭಸ್ಮತತ್ತ್ವವಿವೇಕವಾನ್ ॥
ವರ್ಣಾಶ್ರಮಕ್ರಿಯಾನಿಷ್ಠೋ ಧರ್ಮವಿಚ್ಛಾಸ್ತ್ರಕೋವಿದಃ ।
ಮಿತಾಶೀ ಮಿತನಿದ್ರಶ್ಚ ಮಿತವಾಗ್ಯೋಗ ತತ್ಪರಃ ॥
ಜಿತೇಂದ್ರಿಯೋ ಜಿತದ್ವಂದ್ವಸ್ತಪಃ ಶೀಲೋ ದಯಾಪರಃ ।
ಸ್ಥಿರಬುದ್ಧಿಃ ಸ್ಥಿರಾರಂಭಶ್ಶಿವಪೂಜಾದಿ ಕರ್ಮವಿತ್ ॥

ಮಠಸ್ಥಲಸಮುತ್ಪನ್ನನೂ, ಶಾಂತಸ್ವಭಾವದವನೂ, ಶಿವಾಗಮಗಳ ಅರ್ಥವನ್ನು ತಿಳಿದವನೂ, ವೇದ ವೇದಾಂಗಗಳ ಅಭ್ಯಾಸವನ್ನು ಮಾಡಿದವನೂ, ಪ್ರಸನ್ನಚಿತ್ತನೂ, ಶಿವದೀಕ್ಷಾಭಿಷೇಕವುಳ್ಳವನೂ, ಬುದ್ಧಿಶಾಲಿಯೂ, ಶಿವಪೂಜಾಲೋಲನೂ, ರುದ್ರಾಕ್ಷಮಾಲೆಗಳನ್ನು ಧರಿಸಿದವನೂ, ತ್ರಿಪುಂಡ್ರಧಾರಿಯೂ, ಪರಿಶುದ್ಧವಾದ ಶರೀರವುಳ್ಳವನೂ, ಸತ್ಕುಲಪ್ರಸೂತನೂ, ಶಿವಶಾಸ್ತ್ರದಲ್ಲಿ ಹೇಳಿದಂತೆ ದ್ರವ್ಯ-ಕ್ಷೇತ್ರ-ಗೃಹಾದಿ ಷೋಡಶ ಪದಾರ್ಥಶುದ್ಧಿರೂಪ ಶಿವಾಚಾರದಿಂದ ಯುಕ್ತನಾದವನೂ, ಭಸ್ಮೋದ್ಧೂಲನದಲ್ಲಿ ಆಸಕ್ತನೂ, ಭಸ್ಮತತ್ವವಿವೇಕಿಯೂ, ವರ್ಣಾಶ್ರಮಕ್ರಿಯಾ

ನಿಷ್ಠನೂ, ಧರ್ಮಜ್ಞನೂ, ಶಾಸ್ತ್ರಕೋವಿದನೂ, ಮಿತಾಶನ – ಮಿತನಿದ್ರೆಗಳುಳ್ಳವನೂ, ಮಿತಭಾಷಿಯೂ, ಯೋಗತತ್ಪರನೂ, ಜಿತೇಂದ್ರಿಯನೂ, ಸುಖ-ದುಃಖ ಸಹಿಷ್ಣುವೂ, ತಪಶ್ಶೀಲನೂ, ಕರುಣಾಶಾಲಿಯೂ, ಸ್ಥಿರವಾದ ಬುದ್ಧಿಯುಳ್ಳವನೂ, ಸ್ಥಿರವಾದ ಕಾರ್ಯಾರಂಭವುಳ್ಳವನೂ, ಶಿವಪೂಜಾದಿ ಕರ್ಮಗಳನ್ನು ಬಲ್ಲವನೂ, ಸತ್ಯಸಂಧನೂ, ಮತ್ತು—

( ಚಂದ್ರಜ್ಞಾನ ಪಟಲ. ೧ )

ಶೈವಸಿದ್ಧಾಂತತತ್ತ್ವಜ್ಞಃ ಪ್ರತಿಷ್ಠಾಮಂತ್ರಪಾರಗಃ ।
ಮೋಕ್ಷದಃ ಕರುಣೋಪೇತೋ ವೀತರಾಗೋ ವಿಮತ್ಸರಃ ॥

ಕ್ರಿಯಾದಿಜ್ಞಾನಪರ್ಯಂತಂ ಶಿವತತ್ತ್ವವಿನಿಶ್ಚಯಃ ।
ಸಂಪ್ರದಾಯಾಗತಜ್ಞಾನೋ ಲೋಭದಂಭವಿವರ್ಜಿತಃ ॥

ಲಿಂಗಾಂಗಸ್ಥಲಭೇದಜ್ಞಃ ಷಟ್‌ಸ್ಥಲಜ್ಞಾನ ತತ್ಪರಃ ।
ದೀಕ್ಷಾಕರ್ಮಾದಿ ಕುಶಲಃ ಷಡಧ್ವಜ್ಞಾನ ವತ್ಸಲಃ ॥

ಶಿವಸ್ಯ ಚ ಗುರೋರ್ಭಕ್ತಃ ಶಿವೈಕಾಹಿತಮಾನಸಃ ।
ಶಿವಾರ್ಚನಾಸಕ್ತ ಚಿತ್ತಶ್ಶಿವಧ್ಯಾನೈಕ ತತ್ಪರಃ ॥

ವೀರಶೈವ ಸಿದ್ಧಾಂತವನ್ನು ಬಲ್ಲವನೂ, ದೇವತಾ ಪ್ರತಿಷ್ಠಾದಿಗಳಲ್ಲಿ ಪಾರಂಗತನೂ, ಮೋಕ್ಷಪ್ರದನೂ, ಕರುಣಾರಸಭರಿತನೂ, ವೈರಾಗ್ಯಸಂಪನ್ನನೂ, ಮಾತ್ಸರ್ಯರಹಿತನೂ, ಕ್ರಿಯಾಪಾದದಿಂದ ಜ್ಞಾನಪಾದದವರೆಗಿರುವ ಶಿವಾಗಮಗಳ ಅಭ್ಯಾಸದಿಂದ ಶಿವತತ್ವವನ್ನು ನಿಶ್ಚಯಿಸಿಕೊಂಡವನೂ, ಪಿತೃಪಿತಾಮಹಾದಿ ಸಂಪ್ರದಾಯದಿಂದ ಪ್ರಾಪ್ತವಾದ ಜ್ಞಾನವುಳ್ಳವನೂ, ಲೋಭದಂಭಾದಿಗಳಿಲ್ಲದವನೂ, ಲಿಂಗಸ್ಥಲ ಮತ್ತು ಅಂಗಸ್ಥಲಗಳ ಭೇದವನ್ನು ತಿಳಿದವನೂ, ಷಟ್‌ಸ್ಥಲ ಜ್ಞಾನದಲ್ಲಿ ಪ್ರೇಮವುಳ್ಳವನೂ, ದೀಕ್ಷಾದಿಕರ್ಮಗಳಲ್ಲಿ ಕುಶಲನೂ, ಷಡಧ್ವಗಳನ್ನು ಬಲ್ಲವನೂ, ಶಿವನಲ್ಲಿಯೂ, ತನ್ನ ಗುರುವಿನಲ್ಲಿಯೂ ಭಕ್ತಿಯುಳ್ಳವನೂ, ಶಿವನೊಬ್ಬನಲ್ಲಿ ಮಾತ್ರ ಮನಸ್ಸನ್ನಿಟ್ಟವನೂ, ಶಿವಾರ್ಚನೆಯಲ್ಲಿ ಆಸಕ್ತವಾದ ಚಿತ್ತವುಳ್ಳವನೂ, ಶಿವಧ್ಯಾನದಲ್ಲಿ ತತ್ಪರನೂ ಆದವನೇ ಗುರುವೆನಿಸುವನು.

ವ್ಯಸನೀ ವಾಮನಃ ಕುಬ್ಜಃ ಕೋಪೀ ಚ ಕುಟಿಲಶ್ಚರಃ ।
ಚಪಲೋಽಧಿಕಹೀನಾಂಗಃ ಪಾಪೀಯಾನ್ಸೂಚಕೋಽನ್ಯಜಃ ॥

ವ್ಯಾಧಿಗಸ್ತಾರ್ಕಿಕಃ ಶೂರಃ ಕಾಕನಾದೋ ಬಕವ್ರತೀ ।
ಗುರುದೇವದ್ವಿಜಾತೀನಾಂ ನಿಂದಕೋ ವೃಷಲೀಪತಿಃ ॥

ಲಂಬೋಷ್ಠೋ ವಕ್ರನಾಸಶ್ಚ ಗರ್ವಿಣಃ ಕಲಹಪ್ರಿಯಃ ।
ಪರಾಪವಾದಶೀಲಶ್ಚ ವರ್ಜನೀಯೋ ಗುರುಃ ಸ್ಮೃತಃ ॥

ದುರ್ವ್ಯಸನಿಯೂ, ಕುಳ್ಳನೂ, ಡೊಂಕಾದ ಶರೀರವುಳ್ಳವನೂ, ಕೋಪಿಯೂ, ವಕ್ರಬುದ್ಧಿಯುಳ್ಳವನೂ, ಚಪಲನೂ, ಅಧಿಕಾಂಗನೂ, ಹೀನಾಂಗನೂ, ಪಾಪಿಯೂ, ಚಾಡಿಕೋರನೂ, ಕುಂಡನೂ, ಗೋಲಕನೂ, ರೋಗಿಯೂ, ತಾರ್ಕಿಕನೂ, ಶೂರನೂ, ಕಾಗಿಯ ಸ್ವರದಂತೆ ಸ್ವರವುಳ್ಳವನೂ, ಬಕವ್ರತಿಯೂ, ಗುರು-ದೇವ-ದ್ವಿಜರನ್ನು ನಿಂದಿಸುವವನೂ, ಶೂದ್ರಸ್ತ್ರೀಸಂಗ ಮಾಡಿದವನೂ, ಉದ್ದಾದ ತುಟಿಯುಳ್ಳವನೂ, ಡೊಂಕಾದಮೂಗುಳ್ಳವನೂ, ದನಕಾಯುವವನೂ, ಕಲಹಪ್ರಿಯನೂ, ಪರನಿಂದೆಯನ್ನು ಮಾಡುವವನೂ ನಿಷಿದ್ಧಗುರುವೆನಿಸುವನು. ಇಂತಹ ನಿಷಿದ್ಧ ಗುರುವನ್ನಾಶ್ರಯಿಸಬಾರದು.

ಈ ಪ್ರಕಾರ ಶಾಸ್ತ್ರ - ನಿಯಮವಿದೆ. ಆದುದರಿಂದ ಸದ್ಗುರುವನ್ನಾಶ್ರಯಿಸಿ, ಸುಖವನ್ನು ಹೊಂದಬೇಕು. ಹೀಗೆ ಅಪ್ಪಣೆಕೊಡಿಸಿದರು.

---

## ಸಿಂಗಟಾಲೂರು ಶ್ರೀಗಿರಿಯಲ್ಲಿ ಅನುಷ್ಠಾನ ಮಾಡಿದ್ದು

ಮಹಾಶ್ರೀಗಳವರು ಹುವ್ವಿನಹಡಗಲಿ ಗ್ರಾಮದಲ್ಲಿ ಆನಂದದಿಂದ ಇರುತ್ತಿರಲು ಇಲ್ಲಿಗೆ ೩-೪ ಮೈಲು ದೂರದೊಳು ತುಂಗಭದ್ರಾ ನದೀ ತೀರದ (ಸಿಂಗಟಾಲೂರು) ಗಿರಿಯಲ್ಲಿ ಶ್ರೀ ವೀರಭದ್ರಸ್ವಾಮಿಯ ದೇವಾಲಯವು ಬಹುಪ್ರಸಿದ್ಧವಾಗಿರುವದು. ಈ ದೇವಸ್ಥಾನವು ಧಾರವಾಡ ಮತ್ತು ಬಳ್ಳಾರಿ ಜಿಲ್ಹೆಗಳ ಮಧ್ಯದಲ್ಲಿ ಗದಗ ತಾಲೂಕ (ಮುಂಡರಗಿ ಪೇಠಾಕ್ಕೆ ಸೇರಿ) ಹಮ್ಮಿಗಿ ಮತ್ತು ಸಿಂಗಟಾಲೂರು ಗ್ರಾಮಗಳ ಮಧ್ಯದಲ್ಲಿ ಹಾಗು ನವುಲಿಗೆ ಸಮೀಪವಾಗಿದ್ದು ಇಲ್ಲಿ ಸರ್ವೋತ್ತಮವಾದ ಹವೆಯಿಂದಲೂ ಶಮಿ, ಬಿಲ್ವ, ಚೂತ, ತಿಂತ್ರಿಣೀ, ನಿಂಬಾ ಮೊದಲಾದ ಗಿಡಬಳ್ಳಿಗಳ ಸಮೂಹದಿಂದಲೂ ತುಂಗಭದ್ರಾ ನದಿಯ ನಿರ್ಮಲೋದಕದ ಪ್ರವಾಹದಿಂದಲೂ, ನೇತ್ರಾನಂದ ಮನಾನಂದಕರಮಾಗಿ ಜಪ - ತಪಾನುಷ್ಠಾನಾದಿ ವ್ರತಗಳನ್ನಾಚರಿಸಲು ಅತ್ಯಂತ ಪವಿತ್ರ ಸ್ಥಾನವೆನಿಸಿರುವುದು.

ಈ ವೀರಭದ್ರದೇವರ ಮಹಿಮಾಪ್ರಭಾವವು ಈ ಪ್ರಾಂತದಲ್ಲಿ ವಿಶೇಷವಾಗಿರುವದಲ್ಲದೆ ಶಿರಹಟ್ಟಿ, ಗದಗ, ಕೊಪ್ಪಳ, ಹುವ್ವಿನಹಡಗಲಿ, ಹರುಪನಹಳ್ಳಿ ಈ ಐದು ತಾಲೂಕುಗಳಿಂದಲೂ ಹಾಗು ಬೇರೆ ೫೦-೬೦ ಮೈಲು ದೂರ ಗ್ರಾಮಗಳಿಂದಲೂ ಅನೇಕ ಜನ ಭಕ್ತಮಾಹೇಶ್ವರಾದಿ ಮಂಡಳಿಯು ಬಂದು ಶ್ರೀ|| ದೇವರ ಸೇವೆಯನ್ನು ಬಹು ನಿಷ್ಠೆಯಿಂದ ಮಾಡಿ ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಿರುವದು ಲೋಕ ಪ್ರಸಿದ್ಧವಾಗಿರುತ್ತದೆ.

ಈ ದೇವಸ್ಥಾನಕ್ಕೆ ಹಮ್ಮಿಗಿ ಸಿಂಗಟಾಲೂರು ನವುಲಿ ಈ ೩ ಗ್ರಾಮಗಳಿಂದ ಪಂಚರು (ವ್ಯವಸ್ಥಾಪಕ ಕಮೀಟಿಯು) ಏರ್ಪಾಟಾಗಿದ್ದು ಪ್ರತಿವರುಷ ಚೈತ್ರ ಶು.

೫ ಮಿತಿಗೆ ಶ್ರೀ ದೇವರ ರಥೋತ್ಸವ, ಅಗ್ನಿಕುಂಡ ಮುಂತಾದ ಕಾರ್ಯಕ್ರಮಗಳು ಅತ್ಯಂತ ವೈಭವದಿಂದ ನಡೆಯುತ್ತಿರುವವಲ್ಲದೆ ೧೫–೨೦ ಸಹಸ್ರ ಜನಸಂದಣಿಯು ಕೂಡಿ, ಅನೇಕ ವ್ಯಾಪಾರಾದಿಗಳು, ಸ್ನಾನ, ಪಾನ, ಹರಗುರು ಜಂಗಮ ಪೂಜಾ, ಅನ್ನಸಂತರ್ಪಣೆ ಮುಂತಾದ ಸತ್ಕಾರ್ಯಗಳೂ ೩–೪ ದಿವಸಗಳವರೆಗೂ ದೊಡ್ಡ ಜಾತ್ರೆಯು ಬಹು ಭಕ್ತಿಯಿಂದ ನಡೆಯುವುದು.

ಮಹಾಶ್ರೀಗಳವರು ಇಲ್ಲಿಯ ಸದ್ವಾರ್ತೆಯನ್ನು ಬಹುಜನರ ಪರಿಮುಖದಿಂದ ಕೇಳಿ ಆ ಮನೋಹರವಾದ ಕ್ಷೇತ್ರವನ್ನು ಅವಲೋಕನಮಾಡಬೇಕೆಂದಾಲೋಚನೆ ಮಾಡಿ ಹೂ. ಹಡಗಲಿಯಿಂದ ಮಿತಪರಿವಾರದೊಡನೆ ಹೊರಟು ತಾವು ಗಜಾರೋಹಣಮಾಡಿ ತುಂಬಿ ಹರಿಯುತ್ತಿರುವ ನದೀಪ್ರವಾಹದೊಳಗೆ ಪ್ರವೇಶಮಾಡಿ ತಾರೀಖು ೧೦—೧೧—೧೯೩೩ ನೇ ಇಸ್ವಿ ದಿವಸ ಸಿಂಗಟಾಲೂರು ಗಿರಿಯಲ್ಲಿ ಮುಕ್ಕಾಂ ಮಾಡಿದರು.

ಮಹಾ ಸನ್ನಿಧಿಯವರು ಇಂತಹ ರಮಣೀಯವಾದ ಆಸ್ಥಾನದ ಶೋಭೆಯನ್ನು ಅವಲೋಕನಮಾಡಿ ಹರುಷಪಡುತ್ತ ಕೆಲವು ದಿವಸಗಳ ವರೆಗೂ ಅಲ್ಲಿಯೇ ತ್ರಿಕಾಲ ಶಿವಪೂಜಾನಂದಲೋಲರಾಗಿದ್ದರು.

ತರುವಾಯ ಈ ದೇವಸ್ಥಾನದಲ್ಲಿ ಪಂಚಕಮೀಟಿಯವರು ಇಟ್ಟಿದ್ದ ವ್ಹಿಜಿಟರ್ಸ ಬುಕ್ಕಿನಲ್ಲಿ ತಾರೀಖು ೧೧—೧೧—೧೯೩೩ ನೇ ದಿವಸ ಮಹಾಸನ್ನಿಧಿಯವರು ಸ್ವಹಸ್ತಾಕ್ಷರಗಳಿಂದ ತಮ್ಮ ಸದಭಿಪ್ರಾಯವನ್ನು ಈ ಕೆಳಗೆ ಬರೆದಂತೆ ಲಿಖಿಸಿದರು.

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

| ಮೊಹರು |
|---|

ಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯ ಶ್ರೀ ಜಗದಾಚಾರ್ಯ ಶ್ರೀ ೧೦೦೮ ದಾರುಕಾಚಾರ್ಯ ಸಮಾಧಿಷ್ಠಿತ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರು ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿನಾಂ ಸನ್ನಿಧಿಯಿಂದ—

ಶ್ರೀ ಸಿಂಗಟಾಲೂರು ಶ್ರೀ ವೀರಭದ್ರ ದೇವಾಲಯ ಕಾರ್ಯನಿರ್ವಾಹಕ ಮಂಡಲಿಯಾದ ವೀರಶೈವ ಮಂಡಲಿಗೆ— ( ಅಂದರೆ ಹಮ್ಮಿಗಿ, ಸಿಂಗಟಾಲೂರು ನವುಲಿ ಈ ೩ ಗ್ರಾಮಗಳ ಮೆಂಬರರು ಮತ್ತು ಹಡಗಲಿ ಪ್ರೆಸಿಡೆಂಟರು ಇವರಿಗೆ ) ಸಕಲಾಭೀಷ್ಟಸಿದ್ಧಿರಸ್ತು ಇತ್ಯಾಶೀರ್ವಚನವೇನಂದರೆ—

ಶ್ರೀ ವೀರಭದ್ರೋ ವಿಜಯತೇತರಾಂ

ಯತ್ರಸನ್ನಿಹಿತಾತುಂಗ । ಭದ್ರಾ ಭದ್ರೇವ ನಿರ್ಮಲಾ ॥
ಮೋದತೇತತ್ರವೀರೇಶೋ । ಕಸ್ಪತ್ನಾಮನಿಸರ್ವತೆ ॥ ೧ ॥

ಇಂತಹ ಶ್ರೀ ವೀರಭದ್ರೇಶ್ವರನ ಈ ಸ್ಥಾನದಲ್ಲಿ ಧರ್ಮಕಾರ್ಯಗಳ ವ್ಯವಸ್ಥೆ ಗೊಳಿಸುವದಕ್ಕೆ ಯೋಗ್ಯವಿರುವದು. ಮಹಾ ಸಂಸ್ಥಾನದ ಖುದ್ದು ಸವಾರಿಯು ದಯಮಾಡಿ ಪರಾಮರ್ಶಿಸಿ ಅಪ್ಪಣೆ ಕೊಡಿಸಬೇಕೆಂದು ಈ ದೇವಸ್ಥಾನದ ಕಾರ್ಯ ಸಂಪಾದಕ ಮಂಡಲಿಯವರ ಪ್ರಾರ್ಥನೆಯನ್ನು ಅಂಗೀಕರಿಸಿ ಇಲ್ಲಿಗೆ ಸವಾರಿಯು ಚಿತ್ತೈಸಿ ವಿಮರ್ಶಿಸಿದ್ದಾಯಿತು.

ಆದರೆ ಶ್ರೀ ವೀರಭದ್ರ ದೇವಾಲಯದ ಈ ಸ್ಥಾನವು ಬಹು ರಮ್ಯವಾಗಿಯೂ ನಿರ್ಮಲಸ್ಥಾನವಾಗಿಯೂ ಪವಿತ್ರ ಕ್ಷೇತ್ರವಾಗಿಯೂ ಕಂಡುಬಂದಿರುವದರಿಂದ ಈ ಕಾರ್ಯನಿರ್ವಾಹಕ ಮಂಡಲಿಯ ಅಭಿಪ್ರಾಯದಂತೆ ಶಿವಯೋಗಿಗಳ ವಾಸಸ್ಥಾನಕ್ಕೆ ಯೋಗ್ಯವೆಂದೆನಿಸಿಕೊಂಬ ಈ ವೀರಭದ್ರೇಶ್ವರ ಸ್ಥಾನದಲ್ಲಿ ಶಿವಯೋಗ ನಿಷ್ಣಾತರಾದ ಶಿವಶಾಸ್ತ್ರಪಾರಂಗತರಾದ ಯೋಗ್ಯರಾದೊಬ್ಬ ಪಟ್ಟಾಧಿ ॥ ॥ ಕಾರಿಗಳನ್ನಾಗಲಿ ಅಥವ ಒಬ್ಬ ಚರಾಧಿಕಾರಿಗಳನ್ನಾಗಲಿ ಈ ಸ್ಥಾನದಲ್ಲಿದ್ದು ಶಿವಯೋಗಸಾಧಕರನ್ನು ತಯಾರಿಸಿ ತದ್ವಾರಾ ಸಾಕ್ಷಾತ್ ಶಿವಭಕ್ತರನ್ನು (ಬಂದ ಭಕ್ತಮಾಹೇಶ್ವರರನ್ನು) ಧರ್ಮಬೋಧೆಯಿಂದ ಉದ್ಧಾರಗೊಳಿಸಲಿಕ್ಕೆ ಮಹಾ ಸಂಸ್ಥಾನದಿಂದ ಕಳುಹಿಸೋಣವಾಗುತ್ತದೆ. ಇತಿ ಶಿವಂ.

ತಾರೀಖು
೧೧—೧೧—೧೯೩೩ } ಮುಕ್ಕಾಂ ಸಿಂಗಟಾಲೂರು ದೇವಾಲಯ.

ಈ ಪ್ರಕಾರ ವೀರಶೈವ ಸಮಾಜಾಭ್ಯುದಯಕ್ಕೂ, ಗುರುವರ್ಗ ಸುಧಾರಣೆಗೂ ಅತ್ಯಂತೋಪಯುಕ್ತವಾದ ಶುಭಸಂದೇಶವನ್ನು ಲಿಖಿಸಿ ಮಾರನೇ ದಿವಸ ಶಿವಪೂಜಾನುಷ್ಠಾನಾದಿಗಳಂ ಪೂರೈಸಿಕೊಂಡು ಪುನಃ ಗಜಾರೋಹಣಮಾಡಿ ಹೊರಟು ಹುವ್ವಿನ ಹಡಗಲಿಗೆ ಆಗಮನಮಾಡಿದರು. ಮುಂದೆ ತುಸು ದಿವಸಗಳಲ್ಲಿ ಕಲ್ಲಹಳ್ಳಿ ಎಂಬ ಗ್ರಾಮಕ್ಕೆ ತಾ. ೧೦—೧೧—೩೩ ನೇ ದಿವಸ ಸವಾರಿ ದಯಮಾಡಿಸಿತು.

ಈ ಗ್ರಾಮದಲ್ಲಿಯೂ ಅಶಿಕ್ಷಿತ ಜನರಿಗೆ ಲಿಂಗಧಾರಣ, ಭಸ್ಮಧಾರಣ ಮಾಡಿಕೊಳ್ಳುವದು ಮುಂತಾದ ವಿಷಯಗಳನ್ನು ಅನೇಕ ಲೌಕಿಕ ದೃಷ್ಟಾಂತಗಳಿಂದ ಹೇಳುತ್ತ ಅಜ್ಞಾನಾಂಧಕಾರವನ್ನು ನಿವಾರಣೆಮಾಡುತ್ತಿದ್ದರು. ಇವರ ವಾಕ್ಯಾಮೃತ ಪಾನಮಾಡಿ ಸರ್ವರೂ ಆಹಾ! ಇಂದಿಗೆ ನಮ್ಮ ಮೂಢತನ ಹೋಯಿತು. ಈ ವರೆಗೂ ಇಂತಹ ಮಹಾತ್ಮರೇ ದಯಮಾಡಿಸಿರಲಿಲ್ಲಾ! ನಾವು ಧನ್ಯರಾದೆವೆಂದು ಕೊಂಡಾಡುತ್ತಿದ್ದರು.

ಹೀಗಿರಲಾಗಿ ಧಾರವಾಡ ಜಿಲ್ಹಾ ಗದಗಿನಲ್ಲಿ ಕೆಲವು ಪ್ರಮುಖರು ಸೇರಿ ಆಲೋಚಿಸಿ ನಮ್ಮ ಸಮಾಸದಲ್ಲಿ ನಡೆದಿರುವ ಗುರು-ವಿರಕ್ತರ ಕಲಹದ ನಿಜಾಂಶವನ್ನು ಉಜ್ಜಯಿನೀ ಶ್ರೀ ಜಗದ್ಗುರುಗಳವರಿಂದ ತಿಳಿದು ಸಮಾಜದಲ್ಲಿ ಶಾಂತತೆ ನೆಲೆಗೊಳ್ಳುವಂತೆ ಮಾಡಬೇಕೆಂದಾಲೋಚಿಸಿ ಅಲ್ಲಿಂದ ಕೆಲವರು ಅಂದರೆ– ಶ್ರೀ. ಅಬ್ಬಿಗೇರಿ ಸಂಗನಗೌಡ ವಕೀಲರೂ ವೇ. ಕಜ್ಜರಿ ಗುರುಮೂರ್ತಿ ಶಾಸ್ತ್ರಿಗಳೇ ಮುಂತಾದ ಮಂಡಳಿ ಹೊರಟು ತಾ. ೧೯–೧೧–೧೯೩೩ ನೇ ದಿವಸ ಆ ಕಲ್ಲಹಳ್ಳಿ ಮುಕ್ಕಾಮಿಗೆ ಬಂದು ಈ ಜಗದಾಚಾರ್ಯರವರಲ್ಲಿ ವಂದಿಸಿ ವಿನಯ-ಭಯ-ಭಕ್ತಿಯಿಂದ ತಮ್ಮ ಮನದಲ್ಲಿದ್ದ ಸಕಲ ವಿಷಯಗಳನ್ನು ಅರಿಕೆಮಾಡಿಕೊಂಡು ಮಹಾಸನ್ನಿಧಿಯವರಿಂದ ಅಪ್ಪಣೆಕೊಡಿಸಿದ ಪ್ರಸಾದವಾಕ್ಯಗಳನ್ನು ಕೇಳಿ ಸಂತುಷ್ಟರಾಗಿ ಆಶೀರ್ವಾದಪಡೆದು ಪುನಃ ಹಿಂತಿರಳಿದರು.

(ತಾ. ೩೦-೧೨-೩೩ ನೇ ಮೈ. ಸ್ಟಾರಿನಿಂದ).

---

## ೪ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನವು

ಬೆಳಗಾಂವ ಜಿಲ್ಹಾ ಸವದತ್ತಿ ತಾಲೂಕ ಸತ್ತೀಗೇರಿಯಲ್ಲಿ ಬೃಹನ್ಮಠದ ಶ್ರೀ ಷ|| ಬ್ರ|| ಪಟ್ಟದಸ್ವಾಮಿಗಳವರು ಪಟ್ಟಚರಾಧಿಕಾರಿಗಳ ಸಮ್ಮೇಳನವನ್ನು ತಮ್ಮಲ್ಲಿ ಜರುಗಿಸಲು ನಿಶ್ಚಯಿಸಿ ಸಕಲ ಸಾಹಿತ್ಯಗಳನ್ನು ಸಿದ್ಧತೆಗೊಳಿಸಿ ಗಲಗಲಿ ಬೃ| ಮ| ಶ್ರೀ ಷ|| ಬ್ರ|| ಚರಮೂರ್ತಿಸ್ವಾಮಿಗಳವರ ಅಧ್ಯಕ್ಷತೆಯಿಂದ ತಾ. ೩೦–೪–೧೯೩೩ ನೇ ದಿವಸ ಅನೇಕ ಪಟ್ಟ-ಚರಾಧಿಕಾರಿಗಳ ಸಮೂಹವು ಕೂಡಿತು. ಪಂಡಿತರ ಭಾಷಣಗಳು ನಡೆದ ಬಳಿಕ ಸರ್ವಾನುಮತದಿಂದ ಈ ಕೆಳಗಿನ ಠರಾವುಗಳು ಪಾಸಾದವು.

೧. ಭರತಖಂಡದೊಳಗಿನ ಸಮಸ್ತ ಗುರುಸ್ಥಲದ ಮಠಾಧಿಕಾರಿಗಳು ತಮ್ಮ ತಮ್ಮೊಳಗಿನ ಭೇದಭಾವವನ್ನು ದೂರೀಕರಿಸಿ ಅತ್ಯಂತ ಐಕ್ಯದಿಂದಿರತಕ್ಕದ್ದು.

೨. ಗುರುವರ್ಗದ ಉದ್ಧಾರಾರ್ಥವಾಗಿ ಅದರ ನಿಜತತ್ವಗಳನ್ನು ಬೋಧಿಸುವ ಅನೇಕ ಭಾಷ್ಯಾದಿ ಪ್ರಾಚೀನ ಗ್ರಂಥಗಳನ್ನೂ ಹಾಗೂ ನೂತನ ಗ್ರಂಥಗಳನ್ನೂ ಮುದ್ರಿಸಲಿಕ್ಕೂ ಅಲ್ಲದೆ ಈ ವರ್ಗದ ದೆಶೆಯಿಂದ ಒಂದು ಸ್ವತಂತ್ರ ವರ್ತಮಾನಪತ್ರವನ್ನು ತೆಗೆಯುವದಕ್ಕೆ ಪ್ರಿಂಟಿಂಗ ಪ್ರೆಸ್ಸಿನ ಅವಶ್ಯಕತೆಯಿರುವದರಿಂದಲೂ ಈ ವಿಷಯದಲ್ಲಿ ಉಜ್ಜಯಿನೀ ಧರ್ಮಪೀಠದ ಜಗದ್ಗುರುಗಳವರ ಹುಕುಂ ಆಗಿರುವದರಿಂದಲೂ ಅದರಂತೆ ಪ್ರತಿಯೊಬ್ಬರು ಸಹಾಯಮಾಡಿ ಈ ಕಾರ್ಯವನ್ನು ಬೇಗನೆ ನೆರವೇರಿಸತಕ್ಕದ್ದು.

೩. ವಿಜಾಪೂರ ಜಿಲ್ಹಾ ಕಲಾದಿಗಿಯಲ್ಲಿ ನೆರವೇರಿದ ಗುರುವರ್ಗದ ಪ್ರಾಂತಿಕ ಪರಿಷತ್ತಿನಲ್ಲಿ ಪಾಸಾದ ಪ್ರಕಾರ ಧಾರವಾಡ ಜಿಲ್ಹಾ ಕುಂದಗೋಳದಲ್ಲಿ ಸ್ಥಾಪಿಸಲ್ಪಟ್ಟಿರುವ " **ಅಖಿಲ ಭಾರತೀಯ ಗುರುವರ್ಗೋತ್ತೇಜಕ ಸಂಘ** " ಕ್ಕೆ ಚರಪಟ್ಟಾಧಿಕಾರ ದೀಕ್ಷಾವಿವಾಹಾದಿ ಕಾರ್ಯಗಳಲ್ಲಿ ಯಜಮಾನನ ಯೋಗ್ಯತಾನುಸಾರವಾಗಿ ದ್ರವ್ಯಸಹಾಯ ಮಾಡತಕ್ಕದ್ದೆಂದು ಈ ಸಮ್ಮೇಲನವು ನಿರ್ಣಯಿಸುತ್ತದೆ.

೪. ಗುರುವರ್ಗದ ಉದ್ಧಾರಕ್ಕಾಗಿ ಗುರುಕುಲದ ಅವಶ್ಯಕತೆಯು ಮುಖ್ಯವಾಗಿರುತ್ತದೆ. ಆದಕಾರಣ ಇದರ ಸ್ಥಾಪನೆಯ ವಿಷಯದಲ್ಲಿ ಪ್ರತಿಯೊಬ್ಬರೂ ಸಾಹಸಪಡತಕ್ಕದ್ದು.

೫. ವೀರಶೈವ ಮತದ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳೆಂಬ ಚತುರಾಶ್ರಮಿಗಳಿಗೆ ಗುರುವರ್ಗದವರೇ ಮುಖ್ಯ ಗುರುಗಳಾಗುವರೆಂದು ಧರ್ಮಶಾಸ್ತ್ರವು ಶಾಸನಮಾಡುವದರಿಂದಲೂ ಈ ಶಾಸನದಂತೆಯೇ ಈ ಪವಿತ್ರ ಮತಸ್ಥಾಪಕರಾದ ಜಗದ್ಗುರು ಪಂಚಾಚಾರ್ಯ ಪೀಠಾಧಿಕಾರಿಗಳ ಕಡೆಯಿಂದ ಹುಕುಂ ಜಾರಿಯಾಗಿರುವದರಿಂದಲೂ ಗುರುವರ್ಗದವರು ಪ್ರತಿಯೊಂದು ಆಶ್ರಮದ ಮೇಲೆ ತಮ್ಮ ಗುರುತ್ವವನ್ನು ಪ್ರಕಾಶಿಸತಕ್ಕದ್ದು.

೬. ಹೋದ ಪುಷ್ಯಮಾಸದಲ್ಲಿ ಕಲ್ಯಾಣದೊಳಗೆ ಸಭೆಯು ಆಗದೇ ಇದ್ದಾಗ್ಯೂ ಸುಮ್ಮ ಸುಮ್ಮನೆ ಒಂದು ಅಸತ್ಯ ಲೇಖವನ್ನು ಬರೆದು ಮೈಸೂರು ಸ್ಟಾರಿಗೆ ಕೊಟ್ಟು, ವೇ. ಪಂ. ಕಾಶೀನಾಥ ಶಾಸ್ತ್ರಿಗಳವರ ವಿಷಯದಲ್ಲಿಯೂ ಹಾಗೂ ಶ್ರೀ ಜಗದ್ಗುರು ರಂಭಾಪುರೀ ಪೀಠದ ವಿಷಯದಲ್ಲಿಯೂ ನಿರರ್ಥಕವಾಗಿ ಗದ್ದಲವನ್ನೆಬ್ಬಿಸಿದ ಕುಟಿಲರನ್ನೂ ಹಾಗೂ ಇಂಥ ಲೇಖಗಳಿಗೆ ಆಶ್ರಯವನ್ನು ಕೊಡುವ ಪತ್ರಗಳನ್ನೂ ಈ ಸಮ್ಮೇಲನವು ಅತಿ ತೀವ್ರವಾಗಿ ನಿಷೇಧಿಸುತ್ತದೆ.

೭. ಶ್ರೀ ಜಗದ್ಗುರು ರಂಭಾಪುರೀ ಪೀಠಾಧ್ಯಕ್ಷರಾದ ಮಹಾಸ್ವಾಮಿಗಳು ಈಗ ಒಂದು ವರ್ಷದ ಪೂರ್ವದಲ್ಲಿ ಶಿವೈಕ್ಯರಾದ ಕಾರಣ ಆ ಧರ್ಮಪೀಠಕ್ಕೆ ಅತಿ ಕುಶಲ ವಟುಗಳನ್ನು ಅಧಿಕಾರಿಗಳನ್ನಾಗಿ ಮಾಡಬೇಕೆಂದು ಆ ಪೀಠಾಭಿಮಾನಿಗಳು ಸಾಹಸಪಟ್ಟಾಗ್ಯೂ ಇಂಥ ಸತ್ಕಾರ್ಯಕ್ಕೆ ಅನೇಕರೀತಿಯಿಂದ ವಿಘ್ನಗಳನ್ನು ತರುತ್ತಿರುವ ದುರ್ಗದ ಸನ್ಯಾಸಿಗಳನ್ನು ಈ ಸಮ್ಮೇಲನವು ನಿಷೇಧಿಸುತ್ತದೆ.

೮. ಈ ವರ್ಷ ಮದ್ರಾಸ ಕಾಯಿದೇ ಕೌನ್ಸಿಲ್‌ದಲ್ಲಿ ದೇವಾಲಯ ಹಾಗೂ ಮಠಗಳ ಇನಾಮುಗಳ ಬಗ್ಗೆ ಮನೋವೇಧಕವಾದ ಠರಾವು ಪಾಸುಮಾಡಿದ್ದನ್ನು ಈ ಸಮ್ಮೇಲನವು ನಿಷೇಧಿಸುವದಲ್ಲದೆ ಈ ವಿಷಯವನ್ನು ಮದ್ರಾಸ ಸರಕಾರಕ್ಕೆ ಸೂಚಿಸಬೇಕೆಂದು ತೀರ್ಮಾನಿಸುತ್ತದೆ.

ಈ ಠರಾವುಗಳು ಶ್ರೀ ಜ. ಪಂಚಪೀಠಾಧೀಶ್ವರರಿಗೆ ಕಳುಹಿಸಲ್ಪಟ್ಟವು.

---

ತರುವಾಯ ಮಹಾಸವಾರಿಯು ಸಮೀಪದಲ್ಲಿ ಇರುವ ಅಂಬಳಿ ಗ್ರಾಮಕ್ಕೆ ದಯಮಾಡಿಸಿ, ಸಂಸ್ಥಾನದ ಕಾರ್ಯಕ್ರಮಗಳನ್ನು ನಡೆಯಿಸುತ್ತಿದ್ದರು. ಇಷ್ಟರಲ್ಲಿ ಶ್ರೀಮದ್ರಂಭಾಪುರೀ ಜಗದ್ಗುರು ಪೀಠಾಭಿಮಾನಿಗಳಾದ ಯಜಮಾನ್ ಯಡೆಹಳ್ಳಿ ಶಾಂತಪ್ಪ ಶೆಟ್ಟರು ಇನ್ನೂ ಕೆಲವು ಪ್ರಮುಖರು ಮಹಾಸನ್ನಿಧಿಗೆ ಆಗಮಿಸಿ, ೨-೩ ವರ್ಷಗಳಿಂದಲೂ ಅನಾಯಕವಾಗಿರುವ ರಂಭಾಪುರೀ ಪೀಠಕ್ಕೆ ಆದಷ್ಟು ಬೇಗನೆ ಅಧಿಕಾರವನ್ನು ತಮ್ಮ ಸುಹಸ್ತದಿಂದ ನೆರವೇರಿಸಿ, ಸಮಾಜಕ್ಕೆ ಆನಂದವನ್ನುಂಟುಮಾಡಬೇಕೆಂತಲೂ, ಆಲಸ್ಯಮಾಡಿದರೆ ಪೀಠವು ಅನ್ಯಾಕ್ರಾಂತವಾಗಿ, ಮುಂದೆ ಬಹು ತೊಂದರೆಯುಂಟಾಬಹುದೆಂತಲೂ ನಾನಾವಿಧವಾಗಿ ಪ್ರಾರ್ಥನೆಮಾಡಿಕೊಂಡರು.

ಈ ಮಹಾನುಭಾವರು ಅವರ ಪರಿಮುಖದಿಂದ ಆ ಪ್ರಾಂತದ ಸಕಲ ವಿಷಯಗಳನ್ನು ಗ್ರಹಣಮಾಡಿಕೊಂಡು, ಈ ಸಮಯದಲ್ಲಿ ಆಲಸ್ಯಮಾಡುವದು ಯುಕ್ತವಲ್ಲವೆಂದು ಆಲೋಚನೆಮಾಡಿ, ಆಕೂಡಲೇ ಮೈಸೂರು ದೇಶಕ್ಕೆ ಪ್ರಯಾಣಮಾಡಲು ಸರ್ವ ಸಿದ್ಧತೆ ಮಾಡಿಸಿದರು. ಹಾಗು ಶಾಂತಪ್ಪ ಶೆಟ್ಟರಿಗೆ ಅಪ್ಪಣೆಯನ್ನಿತ್ತು, ಮುಂದಕ್ಕೆ ಕಳುಹಿಸಿದರು.

---

## ॥ ಶ್ರೀ ಜಗದ್ಗುರು ಸಿದ್ಧಲಿಂಗ ಪಂಚಕಂ ॥

### ॥ ವೃತ್ತ ॥

ಪೂರ್ವಂ ಚೆನ್ನವೃಷಾಭಿಧಾನ ಗುರುಸಿದ್ಧಾಂಬಾ ಸುಗರ್ಭೋದ್ಭವಂ ।
ಪಶ್ಚಾದುಜ್ಜಯಿನೀ ಪುರೇ ಗುರು ಮಹಾಪೀಠಾಧಿಪತ್ಯೋತ್ಸವಂ ॥
ಮುಕ್ತಿಃ ಶ್ರೀರಮಣ ತ್ವ ರಂಜಿತ ಮಹಾ ವೈರಾಗ್ಯ ಸದ್ವೈಭವಂ ।
ವಂದೇ ಶ್ರೀಗುರು ಸಿದ್ಧಲಿಂಗಯಮಿನಂ ಸದ್ಭಕ್ತ ಸಂಭಾವನಂ ॥೧॥

ಧರ್ಮಾಚಾರ ಸುಶೇಖರಂ ಪ್ರಜಪಿತ ಶ್ರೀಶೈವ ಪಂಚಾಕ್ಷರಂ ।
ಸಾರಾಸಾರ ವಿಚಾರಣೈಕ ಚತುರಂ ಧೀರಂ ಗಭೀರಂ ಪರಂ ॥
ಕಾಮ ಕ್ರೋಧ ಹರಂ ಮಹಾ ಚರವರಂ ಶಂಭುಪ್ರಭಾ ಭಾಸುರಂ ।
ವಂದೇ ಶ್ರೀಗುರು ಸಿದ್ಧಲಿಂಗಯಮಿನಂ ಸದ್ಭಕ್ತ ಸಂಭಾವನಂ ॥೨॥

ನಿತ್ಯಾನಂದ ಚಿದಾಲಯಂ ಗತಮಯಂ ನಿರ್ಧೂತ ಲೋಕಾಮಯಂ ।
ಮಾಯಾಮೋಹ ಲಯಂ ಸುಶಿಷ್ಯನಿಚಯಂ ತತ್ವಾರ್ಥ ಬೋಧಪ್ರಿಯಂ ॥
ನಿತ್ಯಾನಿತ್ಯ ಪದಾರ್ಥ ಬೋಧನ ಮಹಾಕಾರ್ಯೈ ಮನೋನಿಶ್ಚಯಂ ।
ವಂದೇ ಶ್ರೀಗುರು ಸಿದ್ಧಲಿಂಗಯಮಿನಂ ಸದ್ಭಕ್ತ ಸಂಭಾವನಂ ॥೩॥

ರುದ್ರಾಕ್ಷಾಭರಣಂ ವಿಪನ್ನಶರಣಂ ಲಿಂಗಾಂಗ ಸಂಯೋಜನಂ ।
ಮುದ್ರಾಪಂಚಕ ಧಾರಿಣಂ ಶಮ-ಧನ-ಪ್ರಾಣಂ ಕ್ಷಮಾ ಭೂಷಣಂ ॥
ಕ್ಷೋದ್ರೋಪದ್ರವ ನಾಶನಂ ವರಗಣಂ ಯೋಗೀಂದ್ರ ಚಿಂತಾಮಣಿಂ ।
ವಂದೇ ಶ್ರೀಗುರು ಸಿದ್ದಲಿಂಗಯಮಿನಂ ಸದ್ಭಕ್ತ ಸಂಘಾವನಂ ॥೪॥

ಶ್ರೀ ರುದ್ರಾರ್ಚನ ಸುವ್ರತಂ ಬುಧನುತಂ ಸಚ್ಛೀಲ ಸಂರಾಜಿತಂ ।
ಮಾಹೇಶಾಲಿ ವಿಭೂಷಿತಂ ಸುಚರಿತಂ ಶಾಸ್ತ್ರಾರ್ಥ ಶೋಭಾವೃತಂ ॥
ಕ್ರೂರಾಚಾರ ನಿವಾರಣಾತ್ಸುಲಲಿತಂ ಸಾರಕ್ರಿಯಾ ರಂಜಿತಂ ।
ವಂದೇ ಶ್ರೀಗುರು ಸಿದ್ಧಲಿಂಗಯಮಿನಂ ಸದ್ಭಕ್ತ ಸಂಘಾವನಂ ॥೫॥

ಸಿದ್ಧಲಿಂಗ ಶಿವಾಚಾರ್ಯ । ಸ್ತವನಂ ಲೋಕಪಾವನಂ ॥
ಗುರುಸಿದ್ಧಬುಧಪ್ರೋಕ್ತಂ । ಯಃಪಠೇತ್ಸೋಽಶ್ನುತೇ ಗತಿಂ ॥

ಎಂಬಲ್ಲಿಗೆ ಹಿರೇಹಡಗಲಿ ಪುರಾಣಿಕ ಮಠಾಧಿಪ ಶ್ರೀ ಚೆನ್ನವೀರಪಂಡಿತ ವಂಶಾಬ್ಧಿ
ರಾಕಾಶಶಾಂಕ ಸಮಾನ ವೇ॥ ವಿರೂಪಾಕ್ಷಶಾಸ್ತ್ರಿಯಿಂದ ವಿರಚಿತವಾದ
ಜಗದ್ಗುರು ಶ್ರೀ ಸಿದ್ಧಲಿಂಗೇಶ ವಿಜಯದೊಳು
೩ ನೇ ಅಧ್ಯಾಯ ಸಮಾಪ್ತವಾದುದು.





ಉಜ್ಜಯಿನಿ ಜ॥ ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು

॥ ಶ್ರೀ ಜಗದ್ಗುರು ದಾರುಕಾಚಾರ್ಯಾಯ ನಮಃ ॥

# ೪ನೆಯ ಅಧ್ಯಾಯ

## ಶ್ರೀ ಜಗದ್ಗುರು ರಂಭಾಪುರೀ ಪೀಠಾಧಿಕಾರ ಮಾಡಲು ಪ್ರಯತ್ನ

### ಮೈಸೂರು ದೇಶಕ್ಕೆ ದಿಗ್ವಿಜಯ ಮಾಡಿಸಿದ್ದು

ಶ್ರೀ ಮಹಾಸವಾರಿಯು ಆನೆ, ಕುದುರೆ, ಗಾಡಿಗಳು, ಛಡಿಯವರು, ಜವಾನರೇ ಮುಂತಾದ ಸಕಲ ಸಿಬ್ಬಂದಿಯೊಡಗೂಡಿ, ಪಶ್ಚಿಮಾಭಿಮುಖದಿಂದ ಹೊರಟು, ಗ್ರಾಮಾನುಗ್ರಾಮಗಳಲ್ಲಿ ಮುಕ್ಕಾಂ ಮಾಡುತ್ತಲೂ, ಸದ್ಭಕ್ತಿಯುತರಾದ ಶಿವಭಕ್ತ ಸಮೂಹಕ್ಕೆ ಧರ್ಮೋಪದೇಶಮಾಡುತ್ತಲೂ, ಸರ್ವರನ್ನು ಆನಂದಪಡಿಸುತ್ತ ಮುಂದೆ ಹೊನ್ನಾಳಿ, ಹೊಳೆಹೊನ್ನೂರು ವಗೈರೆ ಸಂಚರಿಸಿ, ಕಡೂರ ಡಿ। ಭದ್ರಾವತಿ, ಕೂಡ್ಲ ಗಿರಿ ಮುಕ್ಕಾಮು ಮಾಡಿ, ಅಲ್ಲಿಯ ಭಕ್ತವೃಂದದಿಂದ ಕಾಣಿಕಾದಿಗಳಂ ತೆಗೆ ದುಕೊಳ್ಳುತ್ತಿರಲು, ಸಮಾಜ ಪ್ರಮುಖರಾದ ಶ್ರೀಯುತ ಬೀರೂರು ಪತ್ರೆ ಚೆನ್ನ ವೀರಪ್ಪನವರೂ, ಯಡೆಹಳ್ಳಿ ಶಾಂತಪ್ಪ ಶೆಟ್ಟರೂ, ಬೀರೂರು ಮರುಳಸಿದ್ಧಪ್ಪನವರೇ ಮುಂತಾದ ಮಂಡಳಿಯು ಸನ್ನಿಧಿಗೆ (೨೪–೯–೨೪) ಬಂದು, ಶ್ರೀಮದ್ರಂಭಾಪುರೀ ಪೀಠಾಧಿಕಾರದ ವಿಷಯದಲ್ಲಿ ಮುಂದಿನ ಪ್ರಯತ್ನ ವಿಶೇಷಗಳನ್ನು ಯಾವ ಯಾವ ರೀತಿಯಿಂದ ನಡೆಯಿಸತಕ್ಕದ್ದೆಂದು ಆಲೋಚನೆ ಮಾಡಿದರು.

### ತರೀಕೆರೆ ಮುಕ್ಕಾಮು

ಮಹಾ ಶ್ರೀಗಳವರು ರಂಭಾಪುರೀ ಪೀಠಾಧಿಕಾರಮಾಡಲು ಪ್ರಯಾಣಬೆಳೆಯಿ ಸಿದ ನಂತರ ಮಾರ್ಗದ ಗ್ರಾಮಗಳಲ್ಲಿ ಅನೇಕ ವಿಧದಿಂದ ತೊಂದರೆಗಳುಂಟಾದವು. ಈ ಮಹಾತ್ಮರು ಅವುಗಳನ್ನೆಲ್ಲಾ ತಮ್ಮ ಶಾಂತಮುದ್ರೆಯ ಬಲದಿಂದಲೂ, ಸಹನ ಶಕ್ತಿಯಿಂದಲೂ ನಿವಾರಣಮಾಡುತ್ತ ಬಂದರು. ತಾ. ೨೪–೯–೧೯೨೪ ನೇ ದಿವಸ ತರೀಕೆರೆ ಮುಕ್ಕಾಮಿನಲ್ಲಿ ನಿಜವಾದ ಗುರುಭಕ್ತರು ಶೇವಾಸತ್ಕಾರ ನಡೆಯಿಸಿ ರಕ್ತಾಕ್ಷಿ ಸಂವತ್ಸರ ಆಶ್ವೀಜಮಾಸದ ವಿಜಯದಸ್ಮಿ ದಸರಾ ಮಹೋತ್ಸವವನ್ನು ಅಸಾಧಾರಣ ವಾದ ನಿಷ್ಠೆಯಿಂದ ನೆರವೇರಿಸಿ ಕೃತಕೃತ್ಯರಾದರು.

ತದನಂತರ ಮಹಾಸನ್ನಿಧಿಯವರ ಆಲೋಚನೆಯ ಮೇರೆಗೆ ಈ ಸಂಸ್ಥಾನದ ಏಜಂಟರಾದ ಟಿ. ಯಂ. ಸಿದ್ಧಯ್ಯನವರು ಮೈಸೂರು ಗೌರಮೆಂಟನಲ್ಲಿ ತಂಮ

ಸದ್ಧರ್ಮ ಪೀಠದ ಜಗದ್ಗುರುಗಳವರು ಮೈಸೂರು ದೇಶದಲ್ಲಿ ಸಂಚಾರಮಾಡಲು ಬಿರುದು-ಬಾವಲಿ ಮೊದಲಾದ ಗೌರವಗಳು ದೊರೆಯಬೇಕೆಂದು ಅರ್ಜಿಯನ್ನು ಹಾಕಿಕೊಂಡರು.

ಈ ಸಮಾಚಾರವನ್ನು ತಿಳಿದು, ಕೆಲ ವಿರೋಧಿ ಜನರು ಆಕೂಡಲೇ ಇವರಿಗೆ ರಹದಾರಿ ಹುಕುಂ ಕೊಡಲಾಗದೆಂದು ತಟಸ್ಥ ಅರ್ಜಿಯನ್ನು ಹಾಕಿಕೊಂಡಿದ್ದರು. ಈ ವಿಚಾರದಲ್ಲಿ ಮೆ॥ ಮುಜರಾಯಿ ಕಮಿಷನ್ ಸಾಹೇಬರವರು ತಮ್ಮ ಕಚೇರಿಯಲ್ಲಿ ಸರಿಯಾದ ವಿಚಾರಣೆಯನ್ನು ನಡೆಯಿಸುತ್ತಿದ್ದರು.

ಮತ್ತೆ ಕೆಲವರು ರಂಭಾಪುರೀ ಪೀಠಕ್ಕೆ ಅಧಿಕಾರ ಮಾಡಲು, ಉಜ್ಜಯಿನೀ ಸ್ವಾಮಿಗಳು ಒಬ್ಬರೇ ಕಾರಣವಿಲ್ಲ. ಸರ್ವ ಸಮ್ಮತಿಯಿಂದ ಮಾಡತಕ್ಕದ್ದೆಂತಲೂ, ಮತ್ತು ಮೈಸೂರು ರಾಜ್ಯದಲ್ಲಿರುವ ರಂಭಾಪುರೀ ಪೀಠಕ್ಕೆ ಇದೇ ರಾಜ್ಯದಲ್ಲಿ ಮೆರೆ ಯುವ ಚಿತ್ರದುರ್ಗದ ಮಹಾಜಗದ್ಗುರುಗಳವರು ಸಂಬಂಧವಲ್ಲದೆ ಬೇರೆಯವರು ಬರ ಲಿಕ್ಕೆ ಕಾರಣವಿಲ್ಲವೆಂತಲೂ ವಿಧವಿಧದಿಂದ ದೇಶದಲ್ಲಿ ಕೋಲಾಹಲವನ್ನೆಬ್ಬಿಸಿದರು.

ಬೇರೊಂದು ಕಡೆಯಲ್ಲಿ ಗುರುಭಕ್ತಿಪರಾಯಣರು ಶ್ರೀಮದ್ವೀರಶೈವ ಮತಸ್ಥಾ ಪನ ಕರ್ತೃಗಳಾದ ಜಗದ್ಗುರು ಪಂಚ ಸಿಂಹಾಸನಗಳೊಳಗೆ ಸಧ್ಯಃ ಉಜ್ಜಯಿನೀ ಸದ್ಧರ್ಮ ಪೀಠದ ಶ್ರೀ ಜ॥ ಸಿದ್ಧಲಿಂಗ ಮಹಾಸ್ವಾಮಿಗಳವರು ದಿವ್ಯ ತೇಜೋಭರಿತ ರಾಗಿ ಪಂಚ ಪೀಠಗಳನ್ನೆಲ್ಲಾ ಉದ್ಧಾರಮಾಡುವ ಸಮರ್ಥರಾಗಿದ್ದಾರೆ. ಇವ ರಿಂದಲೇ ರಂಭಾಪುರೀ ಪೀಠಾಧಿಕಾರ ನೆರವೇರತಕ್ಕದ್ದಲ್ಲದೆ, ಬೇರೆ ಅನಾಧಿಕಾರಿಗಳು ಮುಂತಾದವರು ಸಂಬಂಧವಿಲ್ಲಾ. ಹೀಗೆಂದೂ ಕೆಲವರು ಅರ್ಜಿಮೂಲಕ, ತಾರು ಮೂಲಕ ಅರಿಕೆಮಾಡಿಕೊಂಡರು.

ಇತ್ತಕಡೆ ತರೀಕೆರೆ ಪ್ರಾಂತದಲ್ಲಿ ಉಜ್ಜಯಿನೀ ಮಹಾ ಶ್ರೀಗಳವರು ಸಂಚರಿ ಸುತ್ತಿರಲು, ಎದುರು ಪಾರ್ಟಿಯ ಕೆಲವು ಧೂರ್ತರು ಇವರನ್ನು ನಿಂದೆಮಾಡುತ್ತಾ, ಸುಮ್ಮನೆ ದ್ವೇಷಾಸೂಯ ತೋರಿಸುತ್ತ ಅಕ್ಕಿ, ಬೇಳೆ, ಹೊಟ್ಟು, ಸೊಪ್ಪೆ ಮೊದಲಾದ ಯಾವ ಸಾಮಾನೂ ಕೊಡಬೇಡಿರೆಂದು ಜನರಿಗೆ ದುರ್ಬೋಧಮಾಡುತ್ತಿದ್ದರು. ಗುರು ಕಾಣಿಕಾ ಕೊಡದಂತೆ ಮಾಡಿದರು. ಈ ಪ್ರಕಾರ ಬಹು ಪರಿಯಿಂದ ಮಹಾತ್ಮರಿಗೆ ತೊಂದರೆಪಡಿಸಹತ್ತಿದ್ದರು.

ವಾಚಕ ಮಹಾಶಯರೇ, ಆ ಸಮಯದಲ್ಲಿ ಈ ಮಹಾನುಭಾವರಿಗೆ ಬಂದೊದ ಗಿದ ಕಷ್ಟ-ನಿಷ್ಠುರಗಳನ್ನೂ, ವಿಘ್ನಪರಂಪರೆಗಳನ್ನೂ ವಿವರಿಸಲು ಈ ಲೇಖನಿಯು ಅಸಮರ್ಥವೇ ಸರಿ! ಬೇರೆ ಯಾರಾದರೊಬ್ಬ ಹೇಡಿ ಸ್ವಾಮಿಗಳಾಗಿದ್ದರೆ ಆ ಕಾಲ ದಲ್ಲಿ ಬರುತ್ತಿರುವ ಬಾಧೆಗಳನ್ನು ಸಹಿಸಲಾರದೆ, "ಶೀಘ್ರಬುದ್ಧಿಃ ಪಲಾಯನಃ" ಎಂಬಂತೆ ಹಿಂದಕ್ಕೆ ತೆರಳಿಬಿಡುತ್ತಿದ್ದರು.

ಆಪರೆ ಈ ತೇಜೋಮೂರ್ತಿಯು ವಿರೋಧಿಗಳು ಮಾಡುವ ದುಷ್ಕೃತಿಗಳಿಗೆ ತಿಲಾಂಶವಾದರೂ ಭಯ-ಭೀತರಾಗದೆ, ಅಖಂಡ ಧೈರ್ಯದಿಂದ ಶಾಂತಚಿತ್ತರಾಗಿದ್ದು, "ಆಗುವದೆಲ್ಲಾ ಒಳ್ಳೇಯದಕ್ಕೆ" ಎಂಬ ನಾಣ್ಣುಡಿಯಂತೆ ದುರ್ಜನರು ಮಾಡುವ ವಿಘ್ನ, ನಿಂದೆ, ಅನಾದರಗಳಿಗೆ ಮನಗೊಡದೆ, ತಮ್ಮ ಶಿವಪೂಜಾ, ತಪೋನುಷ್ಠಾನ, ಸದ್ಬೋಧ ಮುಂತಾದವುಗಳಲ್ಲಿಯೇ ಕಾಲಕಳೆಯುತ್ತಿದ್ದರು.

ಆಪರೆ ಹುಳಿ, ಬೂದಿ, ಮಣ್ಣು ಮುಂತಾದ ಅಲ್ಪ ಪದಾರ್ಥಗಳಿಂದ ಭಂಗಾರ, ಬೆಳ್ಳಿ ಮೊದಲಾದ ಉತ್ತಮ ಸಾಮಾನುಗಳು ಸ್ವಚ್ಛವಾಗಿ ಹೊಳೆಯುವಂತೆ ಆ ಕ್ಷುದ್ರರಾದ ದುರ್ಜನರ ತೊಂದರೆಯಿಂದ ಈ ಮಹಾತ್ಮರ ದಿವ್ಯಪ್ರಭಾವವು ದೇಶದಲ್ಲೆಲ್ಲಾ ಅತ್ಯಂತ ಪ್ರಕಾಶದಿಂದ ಬೆಳಗುತ್ತಬಂದಿತು.

( ವಿಚಾರಮಾಡಿ ನೋಡಿದರೆ, ಈ ಮಹಿಮರ ಕ್ರಿಯಾಸಿದ್ಧಿ, ತಪಃಪ್ರಭಾವದಿಂದ ರಂಭಾಪುರೀ ಪೀಠಾಧಿಕಾರ ಬೇಗನೇ ನೆರವೇರಬೇಕಾಗಿತ್ತು. ಆದರೆ ಕೆಲವು ಕಾಲ ತೊಂದರೆ ಸಂಭವಿಸಿ, ಕಾರ್ಯ ದಿಗ್ವಿಜಯವಾಗಬೇಕೆಂಬ ಸಂಕಲ್ಪವಿದ್ದಿತೋ ಅಥವಾ ಈ ಮಹಿಮರೇ ತಮ್ಮ ಪ್ರಭಾವವು ಜಗತ್ತಿಗೆ ಗೋಚರವಾಗಲೆಂಬ ಕಾರಣದಿಂದ ಮೌನತಾಳಿದ್ದರೋ ಎಂಬಂತೆ ಆಲಸ್ಯವಾಗಹತ್ತಿತು. )

ಆ ದೇಶದಲ್ಲಿ ಯಾವ ಕಡೆ ಹೋದರೂ ಉಜ್ಜಯಿನೀ ಜ॥ ಸಿದ್ಧಲಿಂಗ ಮಹಾಸ್ವಾಮಿಗಳವರು ತಪೋನಿಧಿಗಳೂ, ಮಹಿಮಾಶಾಲಿಗಳೂ ಎಂದು ಅತ್ಯಂತ ಪ್ರಸಿದ್ಧಿ ಹೊಂದಿದರು.

---

## ಮೈಸೂರಲ್ಲಿ ವೀರಶೈವ ಮಹಾಜನರ ಮೀಟಿಂಗು

ಉಜ್ಜಯಿನೀ ಜಗದ್ಗುರು ಮಹಾಶ್ರೀಗಳವರು ಮೈಸೂರು ದೇಶದಲ್ಲಿ ಆಗಮನ ಮಾಡಿದನಂತರ ಇವರು ಮಹಾತ್ಮರು, ತಪೋನಿಧಿಗಳು, ಇಷ್ಟಾರ್ಥಪ್ರದಾಯಕರೆಂಬ ಸದ್ವಾರ್ತೆಯು ಸರ್ವತ್ರ ವ್ಯಾಪಕವಾಗುತ್ತ ಬಂದಿತು.

ಕೆಲವು ವಿರೋಧಿ ಜನರು ಇವರ ಸತ್ಕೀರ್ತಿಯನ್ನು ಕೇಳುತ್ತಲೂ ಪ್ರತ್ಯಕ್ಷ ನೋಡುತ್ತಲೂ ಮನಸ್ಸಿಗೆ ಸಹನವಾಗದೆ ದಿವಾಂಧ ಪ್ರಾಣಿಗಳಂತೆ ಕೆಲವು ಕಡೆಯಲ್ಲಿ ತಿರಸ್ಕಾರಮಾಡುತ್ತಿದ್ದರು. ಅನೇಕ ನಗರವಾಸಿಗಳಾದ ಗುರುಭಕ್ತರು ಈ ಮಹಾತ್ಮರ ವಿದ್ಯಮಾನಗಳನ್ನೆಲ್ಲಾ ಅರಿತುಕೊಂಡು ಶುದ್ಧವಾದ ಭಕ್ತಿಯಿಂದ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಮಹಾಪಾದ ಶೇವೆಯಲ್ಲಿ ತತ್ಪರರಾಗುತ್ತಿದ್ದರು.

ಆದರೆ ಮೈಸೂರು ರಾಜಧಾನಿಯ ನಿವಾಸಿಗಳಾದ ವೀರಶೈವ ಮಹಾಜನಗಳೆಲ್ಲಾ ಶೇರಿ ರಂಭಾಪುರೀ ಪೀಠಾಧಿಕಾರಕ್ಕೋಸ್ಕರ ಅಕಸ್ಮಾತ್ ನಮ್ಮ ದೇಶಕ್ಕೆ ಉಜ್ಜಯಿನೀ ಮಹಾಶ್ರೀಗಳವರಾಗಮನ ಮಾಡಿರುವದು ನಮ್ಮಗಳ ಭಾಗ್ಯೋದಯವೆಂತಲೂ

ನಾವೇ ಧನ್ಯಜೀವಿಗಳೆಂತಲೂ ಹರಸುತ್ತಾ ಈ ಮಹಾತ್ಮರ ವಿಷಯದಲ್ಲಿ ಪ್ರತಿಕಕ್ಷಿಗಳು ನಡೆಯಿಸುವ ನಿಂದ್ಯವಾದ ಕೃತಿಗಳನ್ನು ನಿಷೇಧಮಾಡುತ್ತಿದ್ದರಲ್ಲದೆ ಕೆಲವು ದಿವಸ ಗಳಾದ ಬಳಿಕ ತಮ್ಮ ನಗರದಲ್ಲಿ ಒಂದು ಮೀಟಿಂಗ ನಡೆಯಿಸಿದರು.

॥ ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು. ॥

ಸನ್ ೧೯೨೪ ನೇ ಇಸ್ವಿ ನವ್ಹಂಬರ ತಾ. ೨೨ ನೇ ಶನಿವಾರ ಸಾಯಂಕಾಲ ಆರು ಗಂಟೆಗೆ ಸರಿಯಾಗಿ ಶ್ರೀ ಶಂಕರವಿಲಾಸ ಸಂಸ್ಕೃತ ಪಾಠಶಾಲೆಯ ಕಟ್ಟಡದಲ್ಲಿ ಶ್ರೀ. ಟಿ. ಎಸ್. ಸಿದ್ಧಪ್ಪನವರ ಅಧ್ಯಕ್ಷತೆಯಲ್ಲಿ ಸೇರಿದ ಮೈಸೂರು ವೀರಶೈವ ಅಸೋಸಿಯೇಶನ್ನಿನ ವೀರಶೈವ ಮಹಾಜನಗಳ ಸಭೆಯಲ್ಲಿ ಈ ಕೆಳಗಿನ ಠರಾವನು ಮಾಡಿದರು.

೧. ಹಾಲಿ ಶ್ರೀ ಜಗದ್ಗುರು ಬಾಳೆಹೊನ್ನೂರು ಪೀಠಕ್ಕೆ ವಟುವನ್ನು ಚುನಾ ವಣೆ ಮಾಡುವದು ಅತ್ಯವಶ್ಯಕವಾಗಿರುವದರಿಂದಲೂ, ಸದರೀ ಚುನಾವಣೆಯ ಕಾರ್ಯ ಕ್ರಮದಲ್ಲಿ ಶಿಷ್ಯಮಂಡಳಿಯೊಳಗೆ ಭಿನ್ನಾಭಿಪ್ರಾಯಗಳುಂಟಾಗಿ ಒಂದಕ್ಕೊಂದು ವಿಷಮವಾಗಿರುವದರಿಂದಲೂ ಅಲ್ಲದೆ ಈ ವಟುವಿನ ಚುನಾವಣೆಯನ್ನು ಮಹಾಜನ ಗಳ ಬಹುಮತ (Votes) ಕ್ಕೆ ಬಿಡುವುದಾದರೆ ಸದರಿ ಮಹಾಜನಗಳಲ್ಲಿ ಅನೇಕರು ಸಂಸ್ಕೃತ ವಿದ್ಯಾಪರಿಶ್ರಮವಿಲ್ಲದವರಾಗಿ ವಟುಗಳ ಯೋಗ್ಯತೆಯನ್ನು ತಿಳಿಯತಕ್ಕ ಸಾಮರ್ಥ್ಯವಿಲ್ಲದೆ ಇರುವ ಸಾಮಾನ್ಯಜನಗಳೇ ವಿಶೇಷವಾಗಿರುವದರಿಂದ ಸರಿಯಾದ ಯೋಗ್ಯತೆಯುಳ್ಳ ವಟುವನ್ನೇ ಚುನಾಯಿಸುತ್ತಾರೆಂಬ ಭರವಸೆ ಇಲ್ಲದೆ ಇರುವದ ರಿಂದಲೂ ಶ್ರೀ ಜಗದ್ಗುರು ಬಾಳೆಹೊನ್ನೂರು ಪೀಠಕ್ಕೆ ಸಮಾನವಾದ ಇತರ ಉಜ್ಜಯಿನಿ, ಕಾಶಿ, ಹಿಮವತ್ಕೇದಾರ, ಶ್ರೀಶೈಲ ಪೀಠಾಧೀಶ್ವರರಿಂದ ಚುನಾಯಿಸ ಲ್ಪಟ್ಟು ಕಳುಹಿಸಲ್ಪಡುವ ವಟುಗಳ ಪಾಂಡಿತ್ಯವನ್ನು ಶ್ರೀ ಜಗದ್ಗುರು ಬಾಳೆ ಹೊನ್ನೂರು ಪೀಠದ ಸನ್ನಿಧಿಯಲ್ಲಿಯೇ ಪೂರ್ವಪದ್ಧತಿ ಪ್ರಕಾರ ವಿದ್ವಾಂಸರುಗಳು ಪರೀಕ್ಷಿಸಿ, ಉತ್ತಮ ತರಗತಿಯಲ್ಲಿ ತೇರ್ಗಡೆ ಹೊಂದಿದ ಶ್ರೀಮನ್ಮಹಾರಾಜರವರ ಘನವಾದ ಚಿತ್ತಕ್ಕೆ ಯೋಗ್ಯನೆಂದು ಕಂಡುಬರುವ ವಟುವಿಗೆ ಶ್ರೀ ಪಟ್ಟಾಧಿಕಾರ ವನ್ನು ಮಾಡುವ ಹಾಗೆ ಅಪ್ಪಣೆಮಾಡುವಂತೆ ಶ್ರೀಮನ್ಮಹಾರಾಜರವರನ್ನು ಪ್ರಾರ್ಥಿಸಿ ಕೊಳ್ಳತಕ್ಕದ್ದೆಂದು ನಿರ್ಧರಿಸಲ್ಪಟ್ಟಿತು.

೨. ಶ್ರೀಮದ್ವೀರಶೈವ ಮತಸ್ಥಾಪನಾಚಾರ್ಯ ಶ್ರೀ ಜಗದ್ಗುರು ದಾರುಕಾ ಚಾರ್ಯ ಪರಂಪರಾಗತ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಕಡೂರು ಡಿ. ಕಡೆ ಚಿತ್ತೈಸಿರುವದರಿಂದ ಅಸೂಯಾಳುಗಳಾದ ಕೆಲವರು ಸದರಿ ಮಹಾಸ್ವಾಮಿಯವರು ತಮ್ಮ ಬಿರುದಾವಳಿಗಳೊಡನೆ ಸಂಚಾರಮಾಡುವದಕ್ಕೆ ರಹದಾರಿಯನ್ನು ಕೊಡಕೂಡ ದೆಂಬುವದಾಗಿ ಮೈಸೂರು ಸರಕಾರದವರಿಗೆ ಅರ್ಜಿಕೊಟ್ಟಿರುವಂತೆ ತಿಳಿದುಬಂದಿರುವುದ

ರಿಂದ ಹೀಗೆ ಮಾಡುವದು ಕೇವಲ ಶೋಚನೀಯವಾದದ್ದೆಂತಲೂ ಮತ್ತು ಸರಕಾರದವರು ಇಂಥಾ ಅರ್ಜಿಗಳಿಗೆ ಗಮನಕೊಡದೆ ಸದರಿ ಸ್ವಾಮಿಯವರು ತಮ್ಮ ಬಿರುದಾವಳಿಗಳೊಡನೆ ನಿರಾತಂಕವಾಗಿ ಸಂಚಾರಮಾಡುವಹಾಗೆ ರಹದಾರಿಯನ್ನು ಕೊಡಬೇಕೆಂತಲೂ ಶ್ರೀಮನ್ಮಹಾರಾಜರವರನ್ನೂ ಮತ್ತು ಅವರ ಸರಕಾರದವರನ್ನೂ ಪ್ರಾರ್ಥಿಸಿಕೊಳ್ಳತಕ್ಕದ್ದೆಂದು ನಿರ್ಣಯಿಸಲ್ಪಟ್ಟಿತು.

ನಮ್ಮನ್ನಾಳುವ ಘನವನ್ನೈದಿದ ಶ್ರೀಮನ್ಮಹಾರಾಜರವರಿಗೂ ಮತ್ತು ಅವರ ಕುಟುಂಬವರ್ಗಕ್ಕೂ ಜಗದೀಶ್ವರನು ಆಯುರಾರೋಗ್ಯವನ್ನು ದಯಪಾಲಿಸಲೆಂಬ ಪ್ರಾರ್ಥನೆಯೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

ಈಪ್ರಕಾರ ಮುದ್ರಿಸಿದ ಪತ್ರಿಕೆಗಳನ್ನು ಪ್ರಸಿದ್ಧಪಡಿಸಿದರು.

---

## ದೊರನಾಳ ಗ್ರಾಮದಲ್ಲಿ ಮಹತ್ವ

ಈ ಮಹಾತ್ಮರು ಅಲ್ಲಿ ಸಂಚಾರ ನಡಿಸಿದಾಗ್ಗೆ "ದೊರನಾಳು" ಎಂಬಲ್ಲಿಗೆ ದಯಮಾಡಿಸಿದರು. ಆ ಊರಲ್ಲಿ ಭದ್ರಯ್ಯನೆಂಬಾತನು, ವಿರುದ್ಧ ಪಾರ್ಟಿಯವರ ಮಾತಿಗೊಳಗಾಗಿ ಇವರನ್ನು ಹಿಂದಕ್ಕೆ ಕಳಿಸಬೇಕೆಂಬ ದುರ್ಬುದ್ಧಿಯಿಂದ ಜನರಿಗೆ ನೀವು ಕಾಣಿಕಾ ಕೊಡಬೇಡಿರಿ; ಇವರು ನಮ್ಮ ದೇಶಕ್ಕೆ ಸಂಬಂಧವಿಲ್ಲ; ನಮ್ಮ ಗುರುಗಳು ಬೇರೆ ಇದ್ದಾರೆ. ಹೀಗೆಂದು ನಿರ್ಭಯದಿಂದ ಹೇಳುತ್ತ ಜಗದ್ಗುರುಗಳವರ ಸಂಗಡಲೂ ಚರ್ಚೆಮಾಡಿದನು.

ಇವನಾಡುವ ಮಾತುಗಳ ಕೇಳಿ, ಜ್ಞಾನಿಗಳಾದ ಜನರು ಅಯ್ಯೋ ಇದೇನು ಮಹನೀಯರ ಸಂಗಡ ಎಷ್ಟು ವಿರುದ್ಧ ಮಾತನಾಡುವನಲ್ಲ. ಇವನಿಗೇನು ಕೇಡು ಬರುವದೋ ಎಂದು ಮಾತಾಡುತ್ತಿರಲು ಮಹಾ ಶ್ರೀಗಳವರು ಅವನ ಮಾತುಗಳನ್ನು ಕೇಳುತ್ತ ಸುಮ್ಮನೇ ಇದ್ದು (ಮನನೊಂದು) ಹಾಗೇ ಆಗಲಪ್ಪ ನಿನ್ನ ಮಾತಿನಂತೆ ಹೊರಟುಹೋಗುತ್ತೇವೆ. ನೀನೇ ಸುಖವಾಗಿರು ಎಂದು ನುಡಿದರು.

ಸಾಯಂಕಾಲವಾಯಿತು; ರಾತ್ರಿ ಇವನಿಗೆ ನಿದ್ರೆಬಾರದೆ ಒಂದು ವಿಧವಾಗಿ ಸಂತಾಪವಾಗಹತ್ತಿತ್ತು. ಮತ್ತು ಮನೆಯಲ್ಲಿದ್ದ ಎಮ್ಮೆ-ಆಕಳು ೪-೬ ಪ್ರಾಣಿಗಳು ಸಂಕಟಪಡುತ್ತ ಚಟಪಡಿಸುತ್ತ ವದ್ದಾಡಹತ್ತಿದವು. ಸೂರ್ಯೋದಯಕ್ಕೆ ೨-೩ ಪ್ರಾಣಿಗಳು ಮೃತಪಟ್ಟವು.

ಆ ಊರ ಜನರೆಲ್ಲಾ ಕೂಡಿ ನೋಡಿ ಬಹುವ್ಯಥೆಪಡುತ್ತ ಅಯ್ಯನವರೇ! ನಿನ್ನಿನ ದಿವಸ ನಮ್ಮಲ್ಲಿ ದಯಮಾಡಿಸಿರುವ ಮಹಿಮರಾದ ಉಜ್ಜನೀ ಸ್ವಾಮಿಗಳವರ ಸಂಗಡ ಕಲಹಮಾಡಿ ದೊಡ್ಡವರ ಮನನೊಯ್ಸಿದಿ; ಗುರುಗಳೆಂದರೆ ಸಾಮಾನ್ಯರೆಂದು ತಿಳಿ

ಯುವದು ಮೂರ್ಖತನವಲ್ಲವೇ ಹೀಗೆಂದು ನಾನಾ ರೀತಿಯಾಗಿ ಸ್ತ್ರೀ-ಪುರುಷರು ಹೀಯಾಳಿಸಿದರು.

( ವಾಚಕರೇ, ಅಯ್ಯನು ತಾನು ಯಾರು, ತನ್ನ ಮತವಾವುದು ತಾನು ಯಾರ ಗೋತ್ರ-ಸೂತ್ರಗಳ ಹೇಳುವನು; ಯಾರಿಂದ ಲಿಂಗಪಡೆದನು ಎಂಬ ವಿಚಾರವಿಲ್ಲದೆ ಮಾತುಗಳಾಡಿದನು. ಇವನಂತೆ ಕೆಲವರು ಸ್ವಾರ್ಥಸಾಧಕರಾಗಿಯೋ, ಧನಕನ ಕಾದಿ ಆಶೆಯಿಂದಲೋ, ಧರ್ಮಶಾಸ್ತ್ರದ ನಿಜತತ್ವವನ್ನು ತಿಳಿಯದರಿಂದಲೋ, ಕಲಿ ಕಾಲದ ಪ್ರಭಾವದಿಂದಲೋ ಜಗದ್ಗುರುಗಳವರ ವಿಷಯದಲ್ಲಿ ವಿರೋಧದಿಂದ ತಿರ ಸ್ಕಾರ ಮಾಡುವರು. ಇದು ಕೇವಲ ಮೂರ್ಖತನವೆನಿಸುವದಿಲ್ಲವೇ ? )

ಆಗ ರುದ್ರಯ್ಯನಿಗೆ ಎಚ್ಚರಹುಟ್ಟಿ ನಾಲ್ಕಾರು ಜನರೊಡನೆ ಫಲ-ಪುಷ್ಪ-ಕಾಣಿ ಕಾತೆಗೆದುಕೊಂಡು ಬಂದು ಈ ಮಹಾತ್ಮರಿಗೆ ಸಾಷ್ಟಾಂಗಮಾಡಿ, ಮಹಾಗುರುವೇ ನನ್ನ ಸಹಸ್ರ ಅಪರಾಧಗಳನ್ನು ಕ್ಷಮಿಸಿ ಕಾಪಾಡಬೇಕೆಂದು ಪ್ರಾರ್ಥಿಸಿದನು. ಆಗ ದಯಾಳುವಾದ ಈ ಗುರುಪುಂಗವನು, ಇರಲಿ ಬಾರಪ್ಪಾ, ನೀನು ಸ್ವಬುದ್ಧಿಯಿಂದ ಮಾತಾಡಿರಲಿಕ್ಕಿಲ್ಲ. ಪರರ ದುರ್ಬೋಧೆಗೆ ಮನಗೊಟ್ಟು ಈ ರೀತಿ ಮಾಡಿದಿ; ಆಗಲಿ ಇನ್ನು ಮುಂದೆ ಆ ದುಷ್ಟ ಮನಸ್ಸನ್ನು ಬಿಡು. ಗುರು-ಹಿರಿಯರಲ್ಲಿ ವಿಧೇಯನಾ ಗಿರು. ಪೂರ್ವಾಪರ ವಿಚಾರವಿಲ್ಲದೆ ಮದಾಂಧನಾಗಿ ನಡೆಯಬಾರದು. ಪ್ರತಿಯೊಬ್ಬ ಮಠಾಧಿಕಾರಿಯು ಮತಸ್ಥಾಪಕರಾದ ಜಗದ್ಗುರುಗಳಲ್ಲಿ ಭಕ್ತಿ-ವಿಶ್ವಾಸಗಳನ್ನಿಡ ಬೇಕು. ಅಜ್ಞಾನದಿಂದ ವಿರೋಧ ಮಾಡಿದವರಿಗೆ ಮುಂದೆ ದುರ್ಗತಿಯಾಗುವದು. ಹೀಗೆ ಸದ್ಬೋಧ ಮಾಡಿ ಆಶೀರ್ವದಿಸಿ ಕಳುಹಿಸಿದರು. ಮುಂದೆ ಸರ್ವರೂ ಭಕ್ತಿ ಯಿಂದ ಸೇವಾ ಮಾಡಿದರು. ಈ ವಾರ್ತೆಯು ಆ ಪ್ರಾಂತದಲ್ಲಿ ಪಸರಿಸಿ ಇವರ ಮಹಿಮಾಪ್ರಭಾವ ಬೆಳೆಯಿತು.

## ಬುಕ್ಕಾಂಬುಧಿ ಗಿರಿಯಲ್ಲಿ ಉಗ್ರ ತಪವನ್ನಾಚರಿಸಿದ್ದು

ಮಹಾಶ್ರೀಗಳವರು ತರೀಕೆರೆ ಪ್ರಾಂತದಲ್ಲಿ ಸರ್ಕೀಟು ನಡೆಸುತ್ತ ಬುಕ್ಕಾಂಬುಧಿ ಎಂಬ ಗ್ರಾಮಕ್ಕೆ ದಯಮಾಡಿಸಿದರು. ಆ ಊರೊಳಗಿನ ಜನರು ಪರರ ದುರ್ಬೋ ಧೆಗೆ ಕಿವಿಗೊಟ್ಟಿದರಿಂದ ಕರೆಯಿಸಿದರೆ ಬಾರದೆ ಅನಾದರ-ಆಲಸ್ಯಮಾಡಿದರು. ಕೆಲ ವರು ಬಂದು ವಂದಿಸಿದರು.

ಈ ಜನರ ಮನೋಭಿಪ್ರಾಯವನ್ನು ಜ್ಞಾನದ್ರಿಷ್ಟಿಯಿಂದ ತಿಳಿದು ೨-೩ ದಿವಸ ಮೌನತಾಳಿ ಶಾಂತರಾಗಿದ್ದು. ಮೂರನೇ ದಿವಸ ಆ ಬುಕ್ಕಾಂಬುಧಿಗೆ ಸಮೀಪದಲ್ಲಿ ರಾರಾಜಿಸುವ ಗುಡ್ಡದಲ್ಲಿ ಕೆಲಕಾಲ ತಪವನ್ನಾಚರಿಸಬೇಕೆಂದಾಲೋಚನೆ ಮಾಡಿ ತಮ್ಮ ಅಲ್ಪ ( ಶಿಬ್ಬಂದಿ ) ಸರ್ಕೀಟನ್ನು ಅದೇ ಗ್ರಾಮದಲ್ಲಿರುವಂತೆ ಅಪ್ಪಣೆ ಮಾಡಿ ದರು. ಬಳಿಕ ಸಾಯಂಕಾಲವಾಗುತ್ತಲೇ ತಾವೊಬ್ಬರೇ ಪಾದಚಾರಿಗಳಾಗಿ ಆ ಗಿರಿ



ಉಜ್ಜಯಿನಿ ಶ್ರೀ ಜ|| ಸಿದ್ಧಲಿಂಗ ಶಿವಯೋಗಿಗಳು ಬುಕ್ಕಾಂಬುಧಿ ಗವಿಯಲ್ಲಿ ತಪಸ್ಸನ್ನಾಚರಿಸುವದು.

ಯನ್ನಾರೋಹಣಮಾಡುತ್ತ ಅಲ್ಲಲ್ಲಿ ತೋರುವ ಗಿಡ-ಬಳ್ಳಿಗಳನ್ನೂ, ನವಿಲು-ಗಿಳಿ-ಕೋಗಿಲೆ-ಕಪೋತ ಮೊದಲಾದ ಪಕ್ಷಿಗಳ ಮಂಜುಲ ಧ್ವನಿಯನ್ನು ಲಾಲಿಸುತ್ತಲೂ ಆ ಗಿರಿಯ ಸುತ್ತಲೂ ಬಹುದೂರ ಕಾಣಿಸುವ ಸೃಷ್ಟಿ-ಸೌಂದರ್ಯವನ್ನು ನೋಡಿ ನೋಡಿ ಹರ್ಷಚಿತ್ತರಾಗಿ ಅಲ್ಲಲ್ಲಿಗೆ ನಿಂತು - ಕುಳಿತು ವಿಶ್ರಾಂತಿ ಹೊಂದಿ ಪುನಃ ಗಮನಮಾಡಿದರು.

(ಮನದೊಳು) ಈ ಗಿರಿಯಲ್ಲಿ ಶಿವಯೋಗಾನುಷ್ಠಾನಗೈಯಲು ನಮಗೆ ಉತ್ತಮವಾದ ಸ್ಥಲವು ಎಲ್ಲಿರಬಹುದೆಂದು ನೋಡುತ್ತ ಹೋಗುತ್ತಿರಲು ಒಂದು ಗುಹೆಯು ಕಾಣಿಸಿತು. ಅದರೊಳಗೆ ಪ್ರವೇಶಮಾಡಿ ನೋಡುತ್ತಲೇ ಕತ್ತಲೆಯಾಗಲು ಇವರು ಯಾವದೊಂದು ಆಲೋಚಿಸದೆ ಭಯಪಡದೆ ಗವಿಯ ಒಳಗೆ ಹಿಂಭಾಗದಲ್ಲಿ ಸುಮ್ಮನೆ ಕುಳಿತುಬಿಟ್ಟರು.

ತುಸುಹೊತ್ತಿನಲ್ಲಿಯೇ ಎರಡು ಹುಲಿಗಳು 'ಗುಡು ಗುಡು' ಎಂದು ಅದ್ಭುತ ಶಬ್ದಮಾಡುತ್ತ ಅದೇ ಗವಿಯಲ್ಲಿ ಹೊಕ್ಕು ಬಾಗಿಲದೊಳಗೆ ಅಡ್ಡಾಡುತ್ತ ಒಂದೆ ಕ್ಕೊಂದು ವಿನೋದದಿಂದ ಮೈಗೆ ಮೈ ಹಚ್ಚಿ ತಿಕ್ಕಾಡುತ್ತ ಕುಳಿತುಕೊಂಡವು.

ಈ ಕ್ರೂರ ಪ್ರಾಣಿಗಳನ್ನೂ ಅವುಗಳ ಭಯಂಕರ ಶಬ್ದವನ್ನೂ ಲಾಲಿಸುತ್ತಲೇ ಮಹಾಶ್ರೀಗಳವರು ಹಿಂಭಾಗದಲ್ಲಿ ಕುಳಿತುನೋಡಿ ಕಿಂಚಿತ್ ಭಯವಾಗಲು- ಇರಲಿ: "ಸರ್ವಂ ಶಿವಮಯಂ ಜಗತ್" ಎಂಬ ಭಾವನೆಯ ತಂದುಕೊಂಡು ತೆಲುವಾದ ಕಾಷಾಯಾಂಬರವನ್ನು ಹೊದ್ದುಕೊಂಡು ಆನಂದದಿಂದ ಶಯನಮಾಡಿದರು. ಕೂಡಲೆ ನಿದ್ರಾರಂಭವಾಯಿತು.

ಆದರೆ ಮಾನವರಿಗೆ ಚಿಂತಾಭಯ-ಆಲೋಚನೆ-ವ್ಯಸನಗಳು ಇದ್ದರೆ ಸುಖವಾದ ನಿದ್ರೆಯು ಬರುವದೇ ಇಲ್ಲ. ನಿದ್ರೆಯು ಎಲ್ಲಿಯೋ ಹೊರಟುಹೋಗಿಬಿಡುತ್ತದೆ. ಮೇಲಿನ ಚಿಂತಾ-ಭಯಾಲೋಚನೆಗಳಿಲ್ಲದೆ ಆನಂದದಿಂದ ಇರುವವರಿಗೆ ತಕ್ಷಣವೇ ನಿದ್ರಾರಂಭವಾಗಿ (ಸುಷುಮ್ನಾವಸ್ಥೆಯಲ್ಲಿದ್ದು) ಉದಯಕ್ಕೆ ಎಚ್ಚರವಾಗುವದು. ಆದುದರಿಂದ ಈ ಮಹಾನುಭಾವರು ನಿರ್ಭೀತರಾಗಿ ಆನಂದದಿಂದ ಶಯನಮಾಡಲು ನಿದ್ರಾಂಗನೆಯು ಆಗಮಿಸಿ ಈ ಶಿವಯೋಗಿಯ ಸೇವೆಯನ್ನು ಮಾಡಿದಳು.

ಆರಾತ್ರಿ ಆವೆರಡು ಹುಲಿಗಳು ಅಲ್ಲಿಯೇ ವಾಸವಾಗಿದ್ದು ಉದಯಕ್ಕೆ ಎಲ್ಲಿಗೋ ಹೊರಟುಹೋಗಿದ್ದವು. ಪ್ರಾತಃಕಾಲಕ್ಕೆ ಆ ಊರ ಜನರೂ, ಸಿಬ್ಬಂದಿಯವರೂ ಮಹಾಶ್ರೀಗಳವರು ನಿನ್ನೆ ಸಾಯಂಕಾಲಕ್ಕೆ ಪರ್ವತಾರೋಹಣಮಾಡಿದವರು ಪುನಃ ಸೂರ್ಯೋದಯವಾದರೂ ಆಗಮಿಸಲಿಲ್ಲವಲ್ಲಾ! ಈ ನಮ್ಮ ಮಲೆನಾಡು ಪ್ರಾಂತದಲ್ಲಿ ಮತ್ತು ಗಿರಿ-ಗಂಹ್ವರಗಳಲ್ಲಿ ಹುಲಿ, ಹೊನ್ನಿಗ, ಚಿರತೆ, ಕರಡಿ ಮುಂತಾದ ದುಷ್ಟ ಮೃಗಗಳು ವಿಶೇಷವಾಗಿರುತ್ತವೆ. ಎಲ್ಲಿಗೆ ಹೋದರೋ ಎಂದು ಚಿಂತಾಕ್ರಾಂತರಾಗಿ

ಆ ಗಿರಿಯೊಳಗೆ ಬಂದು ಹುಡುಕುತ್ತಿರಲು ಸದಾವಕಾಲ ಹುಲಿಗಳು ವಾಸಮಾಡುವ ಗವಿಯಲ್ಲಿಯೇ ಈ ಮಹಾತ್ಮರು ಎದ್ದು ಕುಳಿತುಕೊಂಡಿದ್ದರು.

ಆಗ ಜನರು ಹೋಗಿ ಸಾಷ್ಟಾಂಗಪ್ರಣಾಮಗೈದು ಕರಕಂಜಗಳನ್ನೊಡ್ಡಿ ಮಹಾಗುರುವೇ, ಇದೇನು? ತಾವು ಇಲ್ಲಿಯೇ ಮೂರ್ತಮಾಡಿರುವಿರಲ್ಲಾ! ಗ್ರಾಮಕ್ಕೆ ದಯಮಾಡಿಸಬೇಕೆಂದು ಬೇಡಿಕೊಂಡರು. ಆಗ ಮಹಾಶ್ರೀಗಳವರು— ಅಪ್ಪಾ! ನಿನ್ನಿನ ದಿವಸ ಇಲ್ಲಿಯೇ ನಮಗೆ ವಿಶ್ರಾಂತಿ ಆಯಿತು; ಸುಮ್ಮನೆ ಮಲಗಿದ್ದೆವು. ಎರಡು ಹುಲಿಗಳು ಮಾತ್ರ ಬಂದು ಕುಳಿತಿದ್ದವು; ಉದಯಕ್ಕೆ ಹೊರಟು ಹೋಗಿರ ಬಹುದು ಎಂದು ನುಡಿದರು.

ಗುರುದೇವ! ಇಲ್ಲಿರಲಾಗದು; ಊರೊಳಗೆ ದಯಮಾಡಿಸಬೇಕೆಂದು ಪುನಃ ಬೇಡಿಕೊಳ್ಳಲು— ಇರಲಿ ಬಿಡಿರೋ ನಮಗೆ ತೊಂದರೆ ಕೊಡಬೇಡಿರಿ ಇದೇ ಗಿರಿಯಲ್ಲಿ ನಾವು ಕೆಲಕಾಲ ತಪಶ್ಚರಣೆಮಾಡುತ್ತೇವೆ ಹೋಗಿರಿ ಎಂದು ಅಲ್ಲಿರುವ ಒಂದು ಸಣ್ಣ ದೇವಾಲಯದಲ್ಲಿ ತಪೋನುಷ್ಠಾನ ಮಾಡಲು ಬೇಕಾದ ಸಾಮಾನುಗಳನ್ನು ತರಿಸಿ ಕೊಂಡು ಉಗ್ರವಾದ ತಪಸ್ಸನ್ನಾಚರಿಸಲು ಪ್ರಾರಂಭಮಾಡಿದರು.

ಮಹಾಶ್ರೀಗಳವರಿಗೆ ಸಮೀಪ ಬಂಧುವಾದ ಕೇವಲ ಪ್ರೀತಿಪಾತ್ರನಾದ ಚುಕ್ಕಾನಹಳ್ಳಿ ಹಿರೇಮಠದ ರೇವಣಸಿದ್ಧಯ್ಯನೆಂಬ ಶಿವಪೂಜಾ ಮರಿಯಿದ್ದನು. ಆತನಿಗೆ— ಎಲಾ, ನಮ್ಮ ಸ್ಥಾನಕ್ಕೆ ಯಾರೂ ಬರಕೂಡದು. ನಮ್ಮ ಅಪ್ಪಣೆಯಿಲ್ಲದೆ ಯಾವ ಕೆಲಸ ನಡಿಸಲಾಗದು. ಆದರೆ ನೀನು ೪—೮ ದಿವಸಕ್ಕೊಂದುಸಾರೆ ಉದ ಯಕ್ಕೆ ಇಲ್ಲಿಗೆ (ಗವಿಗೆ) ಬಂದು ೪ ಕೊಡ ನೀರು ಹಾಕಿ ಪತ್ರಿ-ಪುಷ್ಪಾದಿಗಳ ಸಂಗ್ರ ಹಿಸಿಕೊಟ್ಟು ಹೋಗತಕ್ಕದ್ದೆಂದು ಆಜ್ಞಾಪಿಸಲು ಅದೇಪ್ರಕಾರ ಶಿವಪೂಜಾ ಮರಿಯು ಸೇವಾಸತ್ಕಾರ ಮಾಡುತ್ತ ಬಂದನು.

ಈ ಪ್ರಕಾರ ಬುಕ್ಕಾಂಬುಧಿಗಿರಿಯಲ್ಲಿ ಘೋರ ತಪಶ್ಚರಣೆಯು ನಡೆಯಿತು. ೧-೨ ತಿಂಗಳು ಜರಗಿದವು. ಒಂದಾನೊಂದು ದಿವಸ ಶಿವಪೂಜಾ ಮರಿಯಾದ ರೇವಣಸಿದ್ಧಯ್ಯನು ಪದ್ಧತಿಯಂತೆ ನೀರುತುಂಬಿದ ಕೊಡವನ್ನು ಹೊತ್ತುಕೊಂಡು ಉದಯ ೭ ಗಂಟೆಗೆ ಆ ಗುಡ್ಡದಮೇಲೆ ಹೋದನು. ಅಷ್ಟರಲ್ಲಿ ಮಹಾಶ್ರೀಗಳವರು ಆ ದಿವಸ ಬ್ರಾಹ್ಮೀ ಮುಹೂರ್ತದಲ್ಲಿಯೇ ಅನುಷ್ಠಾನ ಮುಗಿಸಿಕೊಂಡು ಅರುಣೋ ದಯ ಸಮಯಕ್ಕೆ ಗವಿಯ ಹೊರಗೆ ಬಂದು ಮುಂಭಾಗದಲ್ಲಿರುವ ಕಲ್ಲುಮೇಲೆ ಭಸಿತ ರುದ್ರಾಕ್ಷಮಾಲಾಲಂಕೃತರಾಗಿ, ಕಾಷಾಯಾಂಬರವೇಷ್ಟಿತರಾಗಿ ಪ್ರಶಾಂತಮಾನಸ ದಿಂದ ಜಗತ್ತಿನ ಸೃಷ್ಟಿಸೌಂದರ್ಯವನ್ನು ಅವಲೋಕನ ಮಾಡುತ್ತ, ಪ್ರಾತಃಕಾಲದ ತಂಪಾದ ವಾಯುಸೇವನೆ ಮಾಡುತ್ತ ಏನೊಂದು ಆಲೋಚನಾದಿಗಳಿಗೆ ಆಸ್ಪದ ಕೊಡದೆ, ಮೌನದಿಂದ ಕುಳಿತುಕೊಂಡಿದ್ದಾರೆ. ಮುಂಭಾಗದ ೨—೩ ಮೊಳ ಸಮೀ ಪದಲ್ಲಿ ಒಂದು ಹುಲಿಯು ಈ ಮಹಾತ್ಮರನ್ನು ನೋಡುತ್ತ ತನ್ನ ಬಾಲವನ್ನು ಅಲ್ಲಾ

ಡಿಸುತ್ತ "ಗುಡುಗುಡು" ಶಬ್ದಮಾಡುತ್ತ ಸುಮ್ಮನೆ ಕುಳಿತುಕೊಂಡಿದೆ. ಅಷ್ಟರಲ್ಲಿ
ಈ ಶಿವಪೂಜಾಮರಿಯು ನೀರುಕೊಡ ಹೊತ್ತುಕೊಂಡು ಬರುತ್ತಲೇ ಶ್ರೀಗಳವರ
ಮುಂಭಾಗದಲ್ಲಿರುವ ಹುಲಿಯನ್ನು ನೋಡಿದನು. ಕೂಡಲೇ ಕೈ-ಕಾಲು ಥಣ್ಣಗಾಗಿ
ಭಯಗ್ರಸ್ತನಾಗಿ ದೂರದಿಂದಲೇ, ಬುದ್ಧೀ; ಗುರುವೇ ಅದೇನು? ಹುಲಿಯು
ನಿಮ್ಮ ಹತ್ತಿರವೇ ಇರುವದಲ್ಲಾ! ಅಲ್ಲಿಗೆ ನಾನು ಹೇಗೆ ಬರಲಿ? ನನಗೆ ಬಹಳ
ಭಯವಾಗುತ್ತದೆ; ಅಲ್ಲಿಗೆ ಬರಲಾರೆ. ಇಲ್ಲಿಯೇ ಕೊಡವಿಟ್ಟು ಓಡಿಹೋಗಿಬಿಡು
ತ್ತೇನೆ. ಎಂದು ಘಟ್ಟಿಯಾಗಿ ಕೂಗಿ ಹೇಳಿದನು.

ಮಹಾಶ್ರೀಗಳವರು ಇವನ ಆರ್ತಸ್ವರವನ್ನು ಲಾಲಿಸಿ, ಎಲಾ ನೀನು ಭಯ
ಪಡಬೇಡ; ತಾಳು ತಾಳು ಎಂದು ಹಸ್ತವನ್ನೆತ್ತಿ ಸೂಚಿಸಿ, ಅತ್ತ ಹುಲಿಯನ್ನು
ನೋಡಿ– "ಎಲಾ ನಮ್ಮ ಶಿವಪೂಜಾಮರಿಯು ಬರುತ್ತಾನೆ. ನೀನಿಲ್ಲಿರದೆ ಹೊರಟು
ಹೋಗು." ಎಂದು ಬೆರಳಿನಿಂದ ಸಂಜ್ಞೆ ಮಾಡಿದರು. ಆಕೂಡಲೇ ವ್ಯಾಘ್ರವು
ಎದ್ದು ಹೊರಟು ಹೋಯಿತು. ಇದನ್ನು ಶಿ. ಮರಿಯು ದೂರದಿಂದಲೇ ನೋಡು
ತ್ತಿದ್ದು, ಅಹಾ ಇದೇನಾಶ್ಚರ್ಯ! ನಮ್ಮ ಮಹಾಸ್ವಾಮಿಗಳವರಿಗೆ ಇಂತಹ ಕ್ರೂರ
ಪ್ರಾಣಿಗಳು ಅತ್ಯಂತ ನಮ್ರಭಾವದಿಂದ ವರ್ತಿಸುವವಲ್ಲಾ! ಎಂದು ಹರ್ಷಿತನಾಗಿ
ಬಂದು ಗವಿಯೊಳಗೆ ಕೊಡವನ್ನಿಟ್ಟು ವಂದಿಸಿದನು.

ಎಲಾ ರೇವಣಸಿದ್ಧಯ್ಯ, ಒಳಗಿನ ಭಾಗವನ್ನು ಸ್ವಚ್ಛಮಾಡು ಹೋಗು ಎಂದ
ಪ್ಪಣೆಯಾಯಿತು. ಆಗ ಒಳಗೆ ಹೋಗಿ ಅನುಷ್ಠಾನಕ್ಕೆ ಕುಳಿತ ಸ್ಥಾನ ನೋಡು
ತ್ತಾನೆ– ಗದ್ದುಗೆ ಹತ್ತರ ಒಂದು, ಎಡಭಾಗದಲ್ಲಿ ಒಂದು ಎರಡು ದೊಡ್ಡ ಸರ್ಪಗಳು
ಸುರಳಿ ಸುತ್ತಿ ಹೆಡೆಯನ್ನೆತ್ತಿಕೊಂಡು ಕುಳಿತಿದ್ದಾವೆ. ಇವನಂ ನೋಡಿದಾಕ್ಷಣವೇ
ಭುಸ್ ಭುಸ್ ಎಂದು ಹೆಡೆಯಿಂದ ನೆಲಕ್ಕಪ್ಪಳಿಸಿದವು. ಕೂಡಲೇ ಇವನು ಹೆದರಿ
ಹೊರಗೆ ಓಡಿ ಬಂದು, ಮಹಾಗುರುವೇ, ಒಳಗೆರಡು ಸರ್ಪಗಳು ಭೋರ್ಗರೆಯುತ್ತಿ
ರುವವು. ನಾನು ಹೇಗೆ ಸೇವಾ ಮಾಢಲಿ? ಎಂದು ಹೇಳಿಕೊಂಡನು. ಎಲಾ ಈಗ
ತುಸು ದಿವಸಗಳಿಂದ ನಮ್ಮ ಸನ್ನಿಧಿಯಲ್ಲಿ ಒಳಗೆ ಸರ್ಪಾದಿಗಳೂ, ಹೊರಗೆ ಹುಲಿ,
ಹೊನ್ನಿಗ ಕ್ರೂರ ಜಂತುಗಳು ವಾಸಮಾಡುತ್ತಿರುವವು. ಅವು ನಮ್ಮನ್ನೇನೂ
ಮಾಡುವದಿಲ್ಲ. ನಮ್ಮ ದರ್ಶನ ಮಾಡಿಕೊಂಡು ಮತ್ತು ಹೋಗುವವು. ಆದುದ
ರಿಂದ ನೀನು ಭಯಪಡಬೇಡ. ಬಾ ಒಳಗೆ ಹೋಗೋಣ, ಎಂದು ಎದ್ದು ಹೋಗಿ
ಫಣಿರಾಜಾ ಹೋಗಪ್ಪ, ನಮ್ಮ ಶಿ. ಮರಿಯು ಹೆದರುತ್ತಾನೆ. ಎಂದು ಬೆತ್ತದಿಂದ
ಸಂಜ್ಞೆಮಾಡಿದರು. ಆಕೂಡಲೇ ಎರಡೂ ಸರ್ಪಗಳು ಹೊರಗೆ ಹೋದವು. ತರು
ವಾಯ ಶಿವಪೂಜಾಮರಿಯು ತನ್ನ ಕೆಲಸಗಳನ್ನೆಲ್ಲಾ ಪೂರೈಸಿ ಪುನಃ ಕೆಳಭಾಗಕ್ಕಿ
ಳಿದು ಬುಕ್ಕಾಂಬುಧಿಯೊಳಗೆ ಬಂದನು. ಈ ಪ್ರಕಾರ ಮಹಾಶ್ರೀಗಳವರು ಅನ್ನ
ಪಾನಾದಿಗಳ ತೊರೆದು ಘೋರವಾದ ತಪಸ್ಸನ್ನಾಚರಿಸುತ್ತ ೬–೭ ತಿಂಗಳು
ಕಳೆದುಹೋದವು.

ಈ ಮೊದಲು ಶ್ರೀಮದುಜ್ಜಯಿನೀ ಜ॥ ಮಹಾ ಸಂಸ್ಥಾನದ ಏಜಂಟರಾದ ಟಿ. ಎಂ. ಸಿದ್ಧಯ್ಯನವರು ಮೈಸೂರು ದೇಶದಲ್ಲಿ ಸಂಚಾರಕ್ಕೂ ಉತ್ಸವಕ್ಕೂ ಗೌರವಾರ್ಥ ರಹದಾರಿ ದೊರೆಯಬೇಕೆಂದು ಮೈಸೂರು ಗೌರ್ನಮೆಂಟಿನಲ್ಲಿ ಅರ್ಜಿ ಹಾಕಿಕೊಂಡ ಬಾಬತು ಅದರ ವಿಮರ್ಶೆ ನಡೆದು ಮತ್ತು ಮೈಸೂರು ವೀರಶೈವ ಮಹಾಜನಗಳ ಅಭಿಪ್ರಾಯದ ಮೇರೆಗೆ ತಾರೀಖು ೧೧—೬—೧೯೨೫ ನೇ ಇಸ್ವಿ ದಿವಸ ಮೈಸೂರು ಸೀಮೆಯ ಮುಜರಾಯಿ ಕಮೀಶನ್‌ರವರ ಕಚೇರಿಯಿಂದ ರಹದಾರಿ ಆರ್ಡರು ಕೊಡಲ್ಪಟ್ಟಿತು.

ಅದರ ನಕಲು ಪ್ರಿಂಟಾದಂತೆ ಈ ಕೆಳಗೆ ಉದಾಹರಿಸಿದೆ—

Office of the
Muzarai Commissioner
IN MYSORE.
R. Dis. No. 4 of
1925 - 26
11 June 1925

ಮೈಸೂರು ಸೀಮೆಯ ಮುಜರಾಯಿ ಕಮೀಶನ್‌ರವರ
ಕಚೇರಿಯಿಂದಾ—

ಬಳ್ಳಾರಿ ಜಿಲ್ಲಾ ಕೂಡ್ಲಿಗಿ ತಾಲೂಕು ವುಜ್ಜಯಿನಿ ಮಠದ ಏಜಂಟ್ ತೂಲಹಳ್ಳಿ ಮಠದ ವೇದಮೂರ್ತಿ ಸಿದ್ದಯ್ಯನವರಿಗೆ—

ಮೈಸೂರು ಸೀಮೆಯಲ್ಲಿ ಶ್ರೀ ಸ್ವಾಮಿಗಳವರ ಸಂಚಾರ ಸೌಕರ್ಯಕ್ಕಾಗಿ ರಹದಾರಿ ಕೊಡಿಸಿಕೊಡಬೇಕೆಂದು ನೀವು ಅರ್ಜಿ ದಾಖಲ್ಮಾಡಿದ್ದರ ಮೇಲೆ ನಡವಳಿಕೆ ನಡೆದದ್ದು ಸರಿಯಷ್ಟೆ.

ಗವರ್ನಮೆಂಟ ರೆವೆನ್ಯೂ ಸೆಕ್ರೆಟರಿಯವರಿಂದ ತಲ್ಪಿದ ೪—೫—೧೯೨೫ ನೇ ಮರ್ಸ್ಕಿ $\frac{೧೫೪೫}{ಮು.ನಂ. ೩೫೦-೨೪-೧೫}$ ಮತ್ತು ೨—೬—೨೫ನೇ ಮರ್ಸ್ಕಂ $\frac{೬}{ಮು.ನಂ. ೩೫೦-೨೪-೧೬}$ ನೇ ನಂಬರು ಲೆಟರುಗಳನ್ನನುಸರಿಸಿ ತಯಾರಾದ ರಹದಾರಿ ಒಂದನ್ನು ಇದರೊಡನೆ ಕಳುಹಿಸಿರುತ್ತೆ. ಮೇಲ್ಕಂಡ ರಹದಾರಿಯ ನಕಲನ್ನು ಎಲ್ಲಾ ಡಿಸ್ಟ್ರಿಕ್ಟ ಡೆಪುಟಿ ಕಮೀಶನರವರಿಗೂ, ಅಲಾಯಿದಾ ರವಾನಿಸಿರುತ್ತದಾಗಿ ಶ್ರೀ ಸ್ವಾಮಿಗಳವರು ಯಾವ ಯಾವ ಡಿಸ್ಟ್ರಿಕ್ಟಗಳಲ್ಲಿ ಎಷ್ಟೆಷ್ಟನೆ ತಾರೀಖುಗಳಲ್ಲಿ ಸಂಚಾರಮಾಡುತ್ತಾರೆಂಬ ತಪಶೀಲನ್ನು ಆಯಾಯ ಡಿಸ್ಟ್ರಿಕ್ಟ ಅಧಿಕಾರಿಗಳಿಗೆ ಮುಂಚಿತವಾಗಿ ತಿಳಿಸಬೇಕೆಂಬ ವಿವರ ಸೂಚಿಸಿದೆ.

ನೀವು ಹಾಜರಪಡಿಸಿರತಕ್ಕ ವಿಶಿಷ್ಟ ದಾಖಲೆಗಳು ಲಗತ್ತಿರುತ್ತವೆ.

ಬೆಂಗಳೂರು,
ತಾ. ೧೧—೬—೧೯೨೫

*(Sd.)* ಸಿ. ಎಸ್. ಬಾಲಸುಂದರಂ ಐಯ್ಯರ್,
ಮುಜರಾಯಿ ಕಮೀಶನರ.

Office of the
Muzarai Commissioner
IN MYSORE.
R. Dis. No. 4 of
1925 - 26
11 June 1935

## ಮೈಸೂರು ಸೀಮೆಯ ಮುಜರಾಯಿ ಕಮೀಶನ್‌ರವರ ಕಚೇರಿಯಿಂದಾ—

ಮೈಸೂರು ಸೀಮೆಯ ಎಲ್ಲಾ ತಾಲೂಕು ಅಮೀಲರಿಗೂ ಮತ್ತು ಡೆಪ್ಯುಟಿ ಅಮೀಲರಿಗೆ ಬರೆಸಿ ಕಳುಹಿಸಿದ ನಿರೂಪು ಅದಾಗಿ—

ಬಳ್ಳಾರಿ ಜಿಲ್ಲಾ ಕೂಡ್ಲಗಿ ತಾಲೂಕು ಉಜ್ಜಯಿನಿ ಸದ್ಧರ್ಮ ಸಿಂಹಾಸನ ಮಠದ ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗ ಶಿವಾಚಾರ್ಯಸ್ವಾಮಿಗಳವರು ಮೈಸೂರು ಸೀಮೆಯಲ್ಲಿ ವೀರಶೈವ ಮತದ ಆಚಾರ ವಿಚಾರ ಮತ್ತು ಶಿಷ್ಯಾರ್ಜನೆ ಉದ್ದಿಶ್ಯ ಸಂಚಾರಮಾಡುವದರಿಂದ ಸದರಿ ಸ್ವಾಮಿಗಳವರು ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಬಂದಲ್ಲಿ ಉಕ್ಕಡ ಕಣಿವೆಗಳಲ್ಲಿ ಅಟಕಾಯಿಸದೆ ಬಿಟ್ಟು ಬಿಡುವುದು ಮತ್ತು ಗುರುಗಳಿಗೂ ಇವರ ಪರಿವಾರಕ್ಕೂ ಸಹ ಜನಗಳಿಂದ ಸರಬರಾಯಿ ಆದ ಜೀನಸುಗಳಿಗೆ ವಾಜಬಿ ಕ್ರಯ ಕೊಡಿಸಿಕೊಡತಕ್ಕದ್ದಲ್ಲದೆ ಖೈದುವಾರು ಜಾಗದಲ್ಲಿ ಇಳಿಸಿ ರಾತ್ರಿವೇಳೆ ಕಳ್ಳಕಾಕರ ಉಪದ್ರವವಿಲ್ಲದಂತೆ ವುಸ್ತುವಾರಿ ಮಾಡಿಸಿ ದರಮಜಲಿನಲ್ಲಿಯೂ ಮರ್ಯಾದೆಯಿಂದ ನಡೆದುಕೊಂಡು ಬರುವುದು.

ಇವರ ಮಠಹ ಈ ಕೆಳಗೆ ನಮೂದಿಸಿರುವಂತೆ ಬಿರುದು ಬಾವಲಿಗಳು ಇರುತ್ತಾಗಿ ನಿಮ್ಮ ನಿಮ್ಮ ಸರಹದ್ದುಗಳಲ್ಲಿ ತಡೆಯದೆ ಬಿಟ್ಟು ಬಿಡುವುದು.

ಪಾಲಕಿ ೨, ಮೇನ ೧, ಮಕರ ತೋರಣ, ಹಗಲು ದೀವಟಗೆ, ಚಾಮರ ಮತ್ತು ಮೂರ್ಛಾಲು ೪, ವಾಲುಗಳು ೨, ಬಿಳೀ ಮತ್ತು ಕೆಂಪು ಚತ್ರಿ ೨, ಭೂಚಕ್ರದ ಕೊಡೆ ೨, ಆಪ್ತಗಿರಿ ೨, ಪಂಚದೀವಟಗೆ ೨, ಬೆಳ್ಳಿ ಬೆತ್ತ ೨, ಬೆಳ್ಳಿ ಚೊಟ ೨, ಭಲ್ಲೆ ಮತ್ತು ಗಗ್ಗರ ಕಟ್ಟಿಗೆ ೪, ಕಾವಿ ನಿಶಾನಿ ೨, ತ್ರಿಶೂಲ, ನಂದಿಧ್ವಜ, ನಿಸಾನಿ ಸಹಿತ ಆನೆ ೨, ಕುದುರೆ ಮೇಲೆ ಡಂಕ, ಭೇರಿ, ಕಹಳೆ, ಕರ್ನೆ, ನಪೂರಿ, ನಗಾರಿ, ಜಾಗಟೆ, ಘಂಟೆ ೨, ಸೂರ್ಯವಾದ್ಯ ಚಂದ್ರವಾದ್ಯ ವಗೈರೆ, ನಾನಾತರಹದ ವಾದ್ಯಗಳು, ರಥ ೧, ಕುದುರೆ ೪, ಗೋವು ೮, ಎತ್ತು ೧೦, ಬಂದೂಕು ೨, ಹತ್ಯಾರು ೪, ಭೋವಿಯವರು ೮, ಬಿಲ್ಲೇ ಜವಾನರು ೧೨, ಫೌಜುದಾರರು ೨, ಚಡಿಯವರು ೮, ಪಂಡಿತರು ೪, ವೇದಘೋಷಕರು ೪, ಅಂಗರಕ್ಷಕರು ೪, ಇತರ ಸಿಬ್ಬಂದಿಜನ ೪೦.

ಬೆಂಗಳೂರು,
ತಾ. ೧೧—೭—೧೯೩೫

(Sd.) ಸಿ. ಎಸ್. ಬಾಲಸುಂದರಂ ಐಯ್ಯರ್,
ಮುಜರಾಯಿ ಕಮೀಶನರ್.

## ಉಜ್ಜಯಿನೀ ದೇವಸ್ಥಾನದ ತೀರ್ಪು ಬಂದದ್ದು

ಮಹಾಶ್ರೀಗಳವರು ಬುಕ್ಕಾಂಬುಧಿ ಗಿರಿಯಲ್ಲಿ ಉಗ್ರ ತಪೋನುಷ್ಠಾನ ತತ್ಪರ ರಾಗಿರಲು ೧-೨ ತಿಂಗಳಲ್ಲಿಯೇ ಶುಭಸೂಚನೆಗಳು ತೋರುತ್ತಬಂದವು. ಮೈಸೂರು ದೇಶದಲ್ಲಿ ಸಂಚರಿಸಲು ಗೌರವಯುಕ್ತವಾದ ರಹದಾರಿ ಹುಕುಂ ದೊರೆಯಿತು. ಬಳಿಕ ತುಸುದಿವಸಗಳಲ್ಲಿಯೇ ಅತ್ತ ಶ್ರೀ ಮರುಲಸಿದ್ಧೇಶ್ವರ ದೇವಸ್ಥಾನದ ಸಂಬಂಧ ಅರ್ಜ ಕರ ಸಂಗಡ ನಡೆದ ವ್ಯಾಜ್ಯವು ವಿಚಾರಣೆಯಲ್ಲಿರುತ್ತಿರಲು ಈ ಮಹಾತ್ಮರ ತಪೋ ಬಲದಿಂದಲೂ, ಶ್ರೀ ಮರುಳಸಿದ್ಧೇಶನ ಕೃಪೆಯಿಂದಲೂ ಶ್ರೀ ಜ. ಸಿದ್ಧಲಿಂಗ ಮಹಾ ಸ್ವಾಮಿಗಳವರೇ ಕರ್ತರಾಗಿಯೂ, ಅವರ ಸ್ವಾಧೀನದಲ್ಲಿಯೇ ಸಮಸ್ತ ಚರ-ಚಿರಾಸ್ತಿ ಗಳು ಇರತಕ್ಕದ್ದೆಂತಲೂ ಮದ್ರಾಸ ಹೈಕೋರ್ಟಿನಲ್ಲಿ ತೀರ್ಪಾದ ಸಮಾಚಾರವು ಮಹಾಸನ್ನಿಧಿಯ ಮುಕ್ಕಾಮಿಗೆ ಬರುವಂಥಾದ್ದಾಯಿತು.

ಇತ್ತಕಡೆ ರಂಭಾಪುರೀ ಪೀಠಾಧಿಕಾರ ಮಾಡುವ ವಿಷಯದಲ್ಲಿ ಮೈಸೂರು ಗವ್ಹರ್ನಮೆಂಟಿನಲ್ಲಿ ನಡೆಯಿಸಿದ್ದ ವ್ಯಾಜ್ಯದ ವಿಚಾರವು ನಡೆದೇ ಇತ್ತು. ಆಗ ಮೈ. ಸರಕಾರದವರು ಯೋಚನೆಮಾಡಿ ಅಧಿಕಾರಕ್ಕೆ ವಟುಗಳ ಕುಲ-ಶೀಲಾದಿಗಳ ಬಗ್ಗೆ ಒಂದು ಪ್ರಸಿದ್ಧಪತ್ರಿಕೆಯನ್ನು ಹೊರಡಿಸಿ ದೇಶದಲ್ಲಿ ಪ್ರಕಟನೆಮಾಡಿದರು.

ಮೈಸೂರು ಶೀಮೆಯ ಮುಜರಾಯಿ ಕಮಿಷರ್ನರವರ ಆಫೀಸು.
ಬೆಂಗಳೂರು ತಾ. ೨೫ ನೇ ಜುಲೈ ೧೯೨೫.

## ಪ್ರಸಿದ್ಧ ಪತ್ರಿಕೆ

**ಸಮಸ್ತ ವೀರಶೈವ ಮಹಾಜನರಿಗೆ ಸೂಚಿಸುವದೇನಂದರೆ —**

ಕಡೂರು ಡಿಸ್ಟ್ರಿಕ್ಟ, ನರಸಿಂಹರಾಜಪುರ ತಾಲೂಕಿನಲ್ಲಿರುವ ಬಾಳೆಹೊನ್ನೂರು ಶ್ರೀಮದ್ರೇಣುಕಾಚಾರ್ಯರವರ ಸಿಂಹಾಸನದ ಪಟ್ಟಾಧಿಕಾರಕ್ಕೆ ವಟು ಚುನಾವಣೆ ವಿಷಯದಲ್ಲಿ ಈ ಕೆಳಗೆ ಕಂಡ ಅಂಶಗಳೊಂದಿಗೆ ಅಪ್ಲಿಕೇಷನವನ್ನು, ಅಪೇಕ್ಷೆಯುಳ್ಳ ವರು ಬೆಂಗಳೂರಲ್ಲಿರುವ ಮೈಸೂರು ಶೀಮೆಯ ಮುಜರಾಯಿ ಕಮಿಷನರ್ ಮೆಹ ರ್ಬಾನ್ ಸಿ. ಎಸ್. ಬಾಲಸುಂದರಂ ಅಯ್ಯರ್, ಬಿ. ಎ., ಯವರಿಗೆ ೧೯೨೫ ನೆಯ ಆಗಸ್ಟು ತಾ. ೨೬ ನೆಯ ಬುಧವಾರದೊಳಗೆ ತಲುಪುವಂತೆ ಕಳುಹಿಸಿಕೊಡತಕ್ಕದ್ದು. ಅನಂತರ ಬಂದ ಅರ್ಜಿಗಳನ್ನು ಅಂಗೀಕರಿಸುವದಿಲ್ಲಾ.

ವಟುಗಳು ತಾವೇ ಅಪ್ಲಿಕೇಷನ್ ಕಳುಹಿಸಲು ಸಂಕೋಚಪಟ್ಟಪಕ್ಷದಲ್ಲಿ ಯಾರಾ ದರು ಇಬ್ಬರು ದೊಡ್ಡಮನುಷ್ಯರು ವಟುವಿನ ವಿಚಾರದಲ್ಲಿ ಈ ಕೆಳಗೆ ಕಂಡ ಅಂಶಗ ಳನ್ನು ನಮೂದಿಸಿ ಅಪ್ಲಿಕೇಷನ್ ಕಳುಹಿಸಬಹುದು.

ಚುನಾಯಿಸಲ್ಪಟ್ಟ ವಟುಗಳು ಯಾವ ತಾರೀಖಿನಲ್ಲಿ ಮುಜರಾಯಿ ಕಮೀರ್ಷ ರವರ ಸಮಕ್ಷಮ ಹಾಜರಾಗಬೇಕೆಂಬ ವಿಷಯ ಮುಂದಕ್ಕೆ ತಿಳಿಸಲಾದೀತು. ಆ ತಾರೀಖಿನಲ್ಲಿ ತಮ್ಮ ಕಾಗದಪತ್ರ (ಚಪ್ಪನ್ನಪಟ್ಟಿ) ಸಮೇತ ತಮ್ಮ ಸ್ವಂತ ಖರ್ಚಿನಿಂದ ಬೆಂಗಳೂರಿನಲ್ಲಿ ಮುಜರಾಯಿ ಕಮೀಷನರರವರ ಸಮಕ್ಷಮ ಹಾಜರಾಗತಕ್ಕದ್ದು.

ಸಿ. ಎಸ್. ಬಾಲಸುಂದರಂ ಅಯ್ಯರ,
ಮುಜರಾಯಿ ಕಮೀಷನರ್ ಮತ್ತು
ಕಮೀಟ ಚೇರರ್ಮರವರು.

## ಅಪ್ಲಿಕೇಷರ್ಷ ಫಾರಂ

೧. ವಟುವಿನ ಪೂರ್ತಿಯಾದ ಹೆಸರು ೨. ತಂದೆ ತಾಯಿಗಳ ಪೂರ್ತಿಯಾದ ಹೆಸರು ೩. ವಟುವಿನ ಜನ್ಮಸ್ಥಳ, ವಾಸಸ್ಥಳ, ಅಡ್ರೆಸ್ ೪. ಮಾಹೇಶ್ವರ ವರ್ಗಕ್ಕೆ ಸೇರಿದವರೇ? ಅಹುದೇ, ಅಲ್ಲವೇ? ೫. ಮಾಹೇಶ್ವರ ವರ್ಗದಲ್ಲಿ ವಳಭೇದ ೬. ಗೋತ್ರ, ಸೂತ್ರ, ಶಾಖಾ ೭. ಜನನ ಕಾಲ (ಜಾತಕವಿದ್ದರೆ ಕಳುಹಿಸುವದು) ೮. ವಟುವಿನ ಸ್ವಂತ ಮಠದ ಹೆಸರು, ಸ್ಥಳ ೯. ವಟುವಿನ ಚರ-ಸ್ಥಿರ ಪಟ್ಟಾಧಿಕಾರ ವಾಗಿದ್ದರೆ ಯಾವ ಮಠಕ್ಕೆ, ಯಾವ ಕಾಲದಲ್ಲಿ, ಯಾರಿಂದ ೧೦. ದೀಕ್ಷಾ ಸಂಸ್ಕಾರ ಯಾವಾಗ, ಯಾರಿಂದ, ಎಲ್ಲಿ ನಡೆದದ್ದು ೧೧. ವಟುವಿನ ಗುರುಗಳ ಮಠದ ಹೆಸರು, ಅವರ ಹೆಸರು, ಸ್ಥಳ ೧೨. ಉಪದೇಶವಾಗಿದ್ದರೆ ಯಾರಿಂದ, ಯಾವಾಗ ೧೩. ವಟು ವಿನ ಮೂರು ತಲೆಯ ವಂಶವೃಕ್ಷ- ವಿಶದವಾಗಿ ೧೪. ಶಿಷ್ಯರ ಚಪ್ಪನ್ನಪಟ್ಟಿ (ಕಾಗದ ಪತ್ರ) ಇದೆಯೇ ಹ್ಯಾಗೆ ೧೫. ವಟುವಿನ ಗುರುಗಳು, ಶಿಷ್ಯರು, ಸ್ಥಳೀಯ ಮುಖಂಡರು, ಇಂಥಾವರಿಂದ ಪ್ರತ್ಯೇಕ ಪ್ರತ್ಯೇಕವಾಗಿ ಸತ್ಕುಲ, ಸದುತ್ಪನ್ನತೆ, ಸದಾ ಚಾರ, ಸದ್ವರ್ತನೆ, ಬ್ರಹ್ಮಚರ್ಯಯೆಂಬ ಬಗ್ಗೆ ಸರ್ಟಿಫಿಕೇಟುಗಳು ೧೬. ಸಂಸ್ಕೃತ, ಕನ್ನಡವಿದ್ಯಾ ಪಾಂಡಿತ್ಯ ಎಷ್ಟರಮಟ್ಟಿಗೆ ಆಗಿದೆ ಎಂಬ ವಿಷಯ, ಎಲ್ಲಿ ವಿದ್ಯಾವ್ಯಾ ಸಂಗ, ಸರ್ಟಿಫಿಕೇಟುಗಳು ಇದ್ದರೆ ನಕಲು ಕಳುಹಿಸುವದು, ಇಂಗ್ಲೀಷ್ ಭಾಷೆ ಎಷ್ಟು ಮಟ್ಟಿಗೆ ಪರಿಚಯವುಂಟು ೧೭. ವಟುವಿನ ಕಸಬು, ವಾರ್ಷಿಕ ಉತ್ಪತ್ತಿ ೧೮. ತಂದೆ ತಾಯಿಗಳ ಕಸಬು, ವಾರ್ಷಿಕ ಉತ್ಪತ್ತಿ ೧೯. ಹೆಚ್ಚು ವಿಷಯಗಳು ಏನಾದರೂ ಇದ್ದರೆ ಸೂಚಿಸುವದು.

( ಷರಾ :— ಅಪ್ಲಿಕೇಷರ್ಗಳು ಸ್ಪಷ್ಟವಾದ ಬರವಣಿಗೆಯಲ್ಲಿರಬೇಕು. ) ವಟುವಿನ ಅಥವಾ ಶಿಫಾರಸ್ಸುಮಾಡುವವರ ರುಜು

ಈ ಪ್ರಕಾರ ಮೈಸೂರು ಸರಕಾರದವರು ವಟುಚುನಾವಣೆಯ ವಿಷಯದಲ್ಲಿ ಪ್ರಸಿದ್ಧ ಪತ್ರಿಕೆಗಳು ದೇಶದಲ್ಲಿ ಪ್ರಕಟವಾದವು. ಆರ್ಡರಪ್ರಕಾರ ಕುಲ-ಶೀಲ-ವಿದ್ಯಾ-ವಯಸ್ಸು-ವಿನಯಾದಿ ಸದ್ಗುಣಗಣಯುತರಾದ ೫೭ ಮಾಹೇಶ್ವರ ವಟುಗಳಿಂದ ಬೆಂಗಳೂರು ಮುಜರಾಯಿ ಕಮಿಶನರ ಆಫೀಸಿಗೆ ಬಂದು ಸೇರಿದವು.

ಈಗ ಬಂದ ೫೭ ಅರ್ಜಿಗಳ ಪೈಕಿ ೭ ಅರ್ಜಿಗಳನ್ನು ಮಾತ್ರ ಪಾಸುಮಾಡಿ ಉಳಿದ ೫೦ ಅರ್ಜಿಗಳನ್ನು ವಜಾಮಾಡಿದ್ದರು. ಪುನಃ ಗವ್ಹರ್ನಮೆಂಟಿನ ಆರ್ಡರ ಹೊರಟಪ್ರಕಾರ ಮುಂಜೂರಾದ ೭ ಅರ್ಜಿಯ ವಟುಗಳು ಮಾತ್ರ ತಾ. ೧೦-೧೦-೫೫ ನೆಯ ದಿವಸಕ್ಕೆ ಸರಿಯಾಗಿ ಹಾಜರ ಆದರು. ತರುವಾಯ ಸರ್ವಸಮ್ಮತಿ ಪ್ರಕಾರ ವಿದ್ವಾಂಸರೂ, ಸನ್ಮಾನ್ಯರೂ, ಪದವೀಧರರೂ, ಮುಖಂಡರೂ ಆದ ೧೧ ಜನರ ದೊಂದು ಕಮೀಟಿಯು ಈಕೆಳಗಿನಂತೆ ಏರ್ಪಾಡು ಮಾಡಲ್ಪಟ್ಟಿತು.

೧. ಮೆ॥ ಸಿ. ಎಸ್. ಬಾಲಸುಂದರಂ ಅಯ್ಯರ್, ಮುಜರಾಯಿ ಕಮಿಶನರ
೨. ಎಚ್. ಲಿಂಗರಾಜ ಅರಸರು, ಅರಮನೆಯ ಭಕ್ಷೀಸರು
೩. ದಿವಾನಬಹಾದ್ದೂರ, ಸರ್ ಕೆ. ಪಿ. ಪುಟ್ಟಣ್ಣಶೆಟ್ಟರವರು
೪. ,, ಧಾರವಾಡ ಮೆಣಶಿನಕಾಯಿ ಶಾಂತವೀರಪ್ಪನವರು, ರಿ. ಡಿಸ್ಟ್ರಿಕ್ಟ ಡೆ. ಕಲೆಕ್ಟರರು
೫. ಸಿದ್ಧರಾಮಪ್ಪ ಪಾವಟೆ, ಹೈಕೋರ್ಟ ವಕೀಲರು, ಹುಬ್ಬಳ್ಳಿ
೬. ಆಸ್ಥಾನ ವಿದ್ವಾನ್ ಶಿರಶಿ ಗುರುಶಾಂತಶಾಸ್ತ್ರಿಗಳು, ಮೈಸೂರು
೭. ಟಿ. ಮಲ್ಲೇಶಪ್ಪನವರು, ಎಂ. ಎಲ್. ಸಿ., ಬಳ್ಳಾರಿ
೮. ವೇ॥ ಪಂಡಿತ ಚಂದ್ರಶೇಖರ ಶಾಸ್ತ್ರಿಗಳು, ದಾವಣಗೆರೆ
೯. ವೇ॥ ವಿರೂಪಾಕ್ಷಶಾಸ್ತ್ರಿಗಳು, ತಿಪಟೂರು
೧೦. ರಾ. ರಾ. ಶಾಂತಪ್ಪಶೆಟ್ಟರು, ನರಸಿಂಹರಾಜಪೂರ
೧೧. ,, ಚಿಕ್ಕನಂಜಪ್ಪನವರು ಕೋಲಾರ

ಈ ಪ್ರಕಾರ ಹನ್ನೊಂದುಜನ ಮೆಂಬರರು ಸಮ್ಮಿಳಿತರಾಗಿ ಬೆಂಗಳೂರಲ್ಲಿ ಏಳು ಜನ ವಿದ್ಯಾರ್ಥಿ (ವಟು) ಗಳು ವಿದ್ಯಾ-ವಿನಯಾದಿ ಸದ್ಗುಣಗಳನ್ನು ಪರೀಕ್ಷೆ ಮಾಡ ಲಾಗಿ ಶ್ರೀ ಕಾಶೀ ಜಂಗಮವಾಡೀ ಮಠದಿಂದಾಗಮಿಸಿದ ವೇ॥ ಪಂಡಿತ ಸದಾಶಿವ ಶಾಸ್ತ್ರಿಗಳು ವ್ಯಾಕರಣತೀರ್ಥ ಇವರಿಗೆ ೬ ಹೋಟ್ಸುಗಳು ದೊರೆತು ಇವರೇ ಸರ್ವಸಮ್ಮತದಿಂದ ಆರಿಸಿ ಬಂದು ರಂಭಾಪುರೀ ಪೀಠಾಧಿಕಾರಕ್ಕೆ ಠರಾವುಮಾಡ ಲ್ಪಟ್ಟಿತು.

ತದನಂತರ ಮೈಸೂರು ಗವ್ಹರ್ನಮೆಂಟನವರು ವಟುಚುನಾವಣೆ ಕಮೀಟಿ ಯವರಿಂದ ಚುನಾಯಿಸಲ್ಪಟ್ಟ ವಟುವನ್ನೇ ಉಜ್ಜಯಿನೀ ಜ. ಸಿದ್ಧಲಿಂಗ ಶಿವಾ ಚಾರ್ಯ ಮಹಾಸ್ವಾಮಿಗಳವರು ರಂಭಾಪುರೀ ಪೀಠಕ್ಕೆ ಪಟ್ಟಾಧಿಕಾರ ಮಾಡತಕ್ಕದ್ದು ಎಂಬ ಅಭಿಪ್ರಾಯವುಳ್ಳ ಆರ್ಡರು ಬರುವದಾಯಿತು. ಆ ಕೂಡಲೇ ಸರ್ವರಿಗೂ ಪರಮ ಸಂತೋಷವಾಯಿತು. ವಿರೋಧಿಗಳು ವ್ಯಾಕುಲಚಿತ್ತರಾಗಿ, ಮೌನದಿಂದ ಸ್ವಗ್ರಾಮಗಳಿಗೆ ತೆರಳಿದರು.

ಉಜ್ಜಯಿನೀ ಜಗದ್ಗುರುಗಳವರ ದಿವ್ಯ ತಪಃಪ್ರಭಾವದಿಂದ ಕೈಕೊಂಡ ಕಾರ್ಯಗಳು ನೆರವೇರುತ್ತ ಬಂದವು. ಈ ಮಹಾನುಭಾವರಿಂದಲೇ ರಂಭಾಪುರೀ ಪೀಠಾಧಿಕಾರವು ಜರುಗುವದೆಂಬ ಸದ್ವಾರ್ತೆಯು ಚತುರ್ದಿಕ್ಕುಗಳಲ್ಲಿಯೂ ಸರ್ವತೋಮುಖವಾಗಿ ವ್ಯಾಪಕವಾಯಿತು. ಎತ್ತ ನೋಡಿದರೂ ಉಜ್ಜಯಿನೀ ಮಹಾ ಶ್ರೀಗಳವರು ಮಹಾತ್ಮರು, ಪರಶಿವಾವತಾರಿಗಳು ಎಂದು ಕೊಂಡಾಡುವವರಾದರು.

ತರುವಾಯ ಶ್ರೀ ಜಗದ್ಗುರು ಪೀಠಾಭಿಮಾನಿಗಳೂ, ಕಾರ್ಯದಕ್ಷರಾದ ಮುಖಂಡರೆಲ್ಲಾ ಸಮ್ಮಿಲಿತರಾಗಿ, ಮೈಸೂರು ಮಹಾರಾಜರವರ ಆರ್ಡರನ್ನು ತೆಗೆದುಕೊಂಡು, ಬುಕ್ಕಾಂಬುಧಿ ಗಿರಿಯಲ್ಲಿರುವ ಮಹಾ ಶ್ರೀಗಳವರ ಸನ್ನಿಧಿಗೆ ಹೋಗಬೇಕು, ಮುಂದಿನ ಕಾರ್ಯಕ್ರಮಗಳನ್ನು ಆದಷ್ಟು ಶೀಘ್ರದಿಂದ ನಡೆಯಿಸಬೇಕೆಂದಾಲೋಚಿಸಿ ಹೊರಟರು.

---

## ತಪಸ್ಸಮಾಪ್ತಿಮಾಡಿ ಬಂದದ್ದು

ಗುರುಭಕ್ತಿಪರಾಯಣರಾದ ಪ್ರಮುಖರು ಸಮ್ಮಿಳಿತರಾಗಿ ಮೈಸೂರು ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಆರ್ಡರನ್ನು ತೆಗೆದುಕೊಂಡು ಅನೇಕ ವಾದ್ಯವಿಶೇಷಗಳಿಂದಲೂ ಗುರುಭಜನ ಮಂಡಳಿಯಿಂದಲೂ ಬುಕ್ಕಾಂಬುಧಿ ಗ್ರಾಮದೊಳಗಿಂದ ಹೊರಟು ಗುರುಸ್ಮರಣೆಯಿಂದ ಆ ಗಿರಿಯನ್ನು ಆರೋಹಣ ಮಾಡುತ್ತ ತಪಶ್ಚರಣೆಯಲ್ಲಿರುವ ಮಹಾಶ್ರೀಗಳವರ ಸನ್ನಿಧಿಗೆ ಹೋಗಿ ಸರ್ವರೂ ದೀರ್ಘದಂಡ ನಮಸ್ಕಾರಗಳನ್ನು ಮಾಡಿದರು.

ಮಹಾಶ್ರೀಗಳವರು ಬಹು ಶಾಂತಚಿತ್ತದಿಂದ ಸರ್ವರಿಗೂ ಕೂಡ್ರಲು ಅಪ್ಪಣೆಯನ್ನಿತ್ತ ಬಳಿಕ, ಈ ಪ್ರಮುಖರು ಆನಂದತುಂದಿಲಮಾನಸರಾಗಿ ಅಂದಿಗೆ ೩-೪ ತಿಂಗಳಿಂದಲೂ ನಡೆದ ಸಮಸ್ತ ವಿಷಯಗಳನ್ನೂ ಆಮೂಲಾಗ್ರವಾಗಿ ಅರಿಕೆಮಾಡಿಕೊಂಡರು.

ಆ ಸಮಯದಲ್ಲಿ ಮಹಾಮೂರ್ತಿಯು ಭಸ್ಮಲೇಪನದಿಂದಲೂ ರುದ್ರಾಕ್ಷಾಲಂಕಾರದಿಂದಲೂ ಜಟಾ-ಮುಕುಟ-ಕಾಷಾಯಾಂಬರ ಧಾರಣದಿಂದಲೂ ಅತ್ಯಂತ ತೇಜೋಮಯವಾಗಿ ತೋರುತ್ತಿದ್ದಿತು. ಆಹಾ, ಸಾಕ್ಷಾತ್ಪರಶಿವನ ದಿವ್ಯರೂಪವೇ ಇದು! ನಿಶ್ಚಯ ನಿಶ್ಚಯ! ಬೇರೆಯಿಲ್ಲ. ಎಂದು ಕೊಂಡಾಡುತ್ತ ಮನದಣಿಯುವಂತೆ ಅನಿಮಿಷದೃಷ್ಟಿಯಿಂದ ಪಾದಾದಿಮಸ್ತಕಪರ್ಯಂತರ ಪುನಃ ಪುನಃ ನೋಡಿ ನೋಡಿ ಸರ್ವರ ನೇತ್ರಗಳಲ್ಲಿ ಆನಂದಬಾಷ್ಪಗಳು ತುಂಬಿ ಹರಿಯುತ್ತಿದ್ದವು. ಕೆಲವರು ಹಸ್ತಾಂಜಲಿಬದ್ಧರಾಗಿ ಸ್ತುತಿಮಾಡಿದರು—

ಕಂದ– ಜಯಸಿದ್ಧಲಿಂಗದೇವನೇ । ಜಯ ಶಂಕರನಣುಗನಾದಿದಾರುಕಮಹಿಮಾ ॥
ಜಯ ಗುಣಮಣಿರತ್ನಾಕರ । ಜಯ ಜಗದಾಚಾರ್ಯ ಸಿದ್ಧಸರಸಿಜ
ಸೂರ್ಯ ॥ ೧ ॥

ಈ ಪ್ರಕಾರ ಸ್ತುತಿಮಾಡಿದ ಬಳಿಕ ಮಹಾಗುರುವೇ, ತಮ್ಮ ದಿವ್ಯ ತಪೋಬಲದಿಂದ ನಾನಾವಿಧವಾಗಿ ಪ್ರಾಪ್ತವಾದ ಸರ್ವ ವಿಘ್ನಗಳು ನಿವಾರಣೆಯಾಗಿ ಶ್ರೀಮನ್ ಮಹಾರಾಜರವರ ಹುಕುಂ ದೊರೆಯಿತು. ಮಹಾನುಷ್ಠಾನವನ್ನು ಸಮಾಪ್ತಿಗೊಳಿಸಿ ರಂಭಾಪುರೀ ಪೀಠಾಧಿಕಾರವನ್ನು ನೆರವೇರಿಸಲು ದಯಮಾಡಿಸಬೇಕು. ಇತ್ಯಾದಿ ಪ್ರಾರ್ಥನೆ ಮಾಡಿದರು.

ಈ ಮಹಾತ್ಮರು ಸಮಸ್ತ ವಿಧ್ಯಮಾನಗಳನ್ನು ಕೇಳಿ ಸಂತಸಗೊಂಡು ಸದ್ಭಕ್ತ ಶಿಖಾಮಣಿಗಳೇ, ನಿಮ್ಮೆಲ್ಲರ ಶಕ್ತಿ-ಯುಕ್ತಿ-ಸಾಹಸಗಳಿಂದಲೂ ಶ್ರೀ ರೇಣುಕರ ಕೃಪಾಶೀರ್ವಾದಬಲದಿಂದಲೂ ಮುಂಧೆ ಕಾರ್ಯಾರಂಭಮಾಡಲು ಆಸ್ಪದವಾಯಿತು. ಒಳ್ಳೇದು. ನಿಮ್ಮಿಷ್ಟದಂತಾಗಲಿ. ಹೋಗೋಣ ನಡೆಯಿರಿ. ಎಂದಪ್ಪಣೆಯಾಯಿತು. ಮಹಾ ಶ್ರೀಗಳವರು ತಪಸ್ಸನ್ನು ಪೂರ್ಣಮಾಡಿದರು. ಮುಂದೆ ರಂಭಾಪುರೀ ಪೀಠಾಧಿಕಾರವಾಗುವದೆಂಬ ಸದ್ವಾರ್ತೆಯನ್ನು ಕೇಳಿ ಅನೇಕಜನ ಸಮುದಾಯವು ಬುಕ್ಕಾಂಬುಧಿಗೆ ಸೇರಿತು. ತಾರೀಖು ೨೫—೧೦—೧೯೨೫ ನೇ ದಿವಸ ಸಕಲ ಬಿರುದಾವಳಿಗಳೊಡನೆ ಬುಕ್ಕಾಂಬುಧಿ ಗ್ರಾಮದಲ್ಲಿ ಉಜ್ಜಯಿನೀ ಜಗದ್ಗುರು ಮಹಾ ಶ್ರೀಗಳವರ ಮಹೋತ್ಸವವು ಬಹು ಸಂಭ್ರಮದಿಂದ ನೆರವೇರಿತು.

---

## ಗುರುಕಾಣಿಕಾರ್ಪಣ ಸಮಾರಂಭ

ಮಹಾ ಶ್ರೀಗಳವರು ಬುಕ್ಕಾಂಬುಧಿ ಗಿರಿಯಲ್ಲಿ ಉಗ್ರವಾದ ತಪಸ್ಸನ್ನಾಚರಿಸಿದರು. ಮೈಸೂರು ಮಹಾರಾಜರವರು ಭಯಭಕ್ತಿಯುಳ್ಳವರಾಗಿ ಘನವಾದ ಹುಕುಂ ದಯಪಾಲಿಸಿದರು. ಜಗದ್ಗುರುಗಳವರು ತಪಾನುಷ್ಠಾನವನ್ನು ಸಮಾಪ್ತಿಗೊಳಿಸಿ, ಬುಕ್ಕಾಂಬುಧಿ ಗ್ರಾಮದಲ್ಲಿ ಮುಕ್ಕಾಂ ಮಾಡಿರುತ್ತಾರೆಂಬ ಸದ್ವಾರ್ತೆಗಳು ಸರ್ವತ್ರ ಪ್ರಸಿದ್ಧವಾದವು. ದೇಶಾಂತರಗಳಿಂದ ತಂಡೋಪತಂಡವಾಗಿ ಗುರುಭಕ್ತಿಪರಾಯಣ ಸ್ತ್ರೀ-ಪುರುಷರೆಲ್ಲರೂ ಸನ್ನಿಧಿಗೆ ದರ್ಶನಾಪೇಕ್ಷೆಯಿಂದ ಬರುತ್ತಿದ್ದರು. ಆ ಗ್ರಾಮದಲ್ಲಿ ಕೆಲವರು ಗುರುಪ್ರಭಾವವನ್ನರಿಯದೆ ಪರಪ್ರೇರಣೆಯಿಂದ ಅನಾದರ ಮಾಡಿದವರೆಲ್ಲಾ ಈಗ ತಮ್ಮ ಮನಸ್ಸಿನ ದುರ್ಭಾವನೆಗಳನ್ನು ದೂರಮಾಡಿ ಹಗಲಿರುಳೂ ಕಟಿಬದ್ಧರಾಗಿ ನಿಂತು ತಾ. ೩೦—೧೦—೨೫ ನೇ ದಿನ ಗುರುಕಾಣಿಕಾ, ದರ್ಶನ ಕಾಣಿಕಾ, ಬಿನ್ನಕಾಣಿಕಾ, ಅಪರಾಧ ಕಾಣಿಕಾದಿಗಳನ್ನು ತ್ರಿಕರಣಶುದ್ಧವಾದ ಭಕ್ತಿಯಿಂದರ್ಪಣಮಾಡಿದರು.

ಈ ಪ್ರಕಾರ ಆ ಗ್ರಾಮದಲ್ಲಿ ಕೆಲವು ದಿವಸಗಳ ವರೆಗೆ ಮುಕ್ಕಾಂ ಆಯಿತು. ಮುಂದೆ ಶ್ರೀಮದ್ರಂಭಾಪುರೀ ಪೀಠಕ್ಕೆ ಪಟ್ಟಾಧಿಕಾರವನ್ನು ಜರಗಿಸುವ ಕಾರ್ಯಕ್ರಮಗಳ ಲಿಸ್ಟನ್ನು ತಯಾರಮಾಡಿಸಿ ಕೆಲವು ಗುರುಭಕ್ತ ಧುರೀಣರನ್ನು ಅಲ್ಲಿಂದ ರಂಭಾಪುರೀ ( ಬಾಳೆಹೊನ್ನೂರಿಗೆ ) ಹೋಗಲಪ್ಪಣೆಯಿತ್ತು, ನಾವು ಹಿಂದಿನಿಂದ ಆಗಮಿಸುವೆವು, ನೀವು ಅಲ್ಲಿಯ ಸಕಲವಿಧವಾದ ಸಿದ್ಧತೆಗಳನ್ನು ಬಹು ಶ್ರದ್ಧೆಯಿಂದಲೂ ತ್ವರಿತದಿಂದಲೂ ನೆರವೇರಿಸತಕ್ಕದ್ದೆಂದು ಕಳುಹಿಸಿದರು.

---

## ಮೃತನಾದ ಬಾಲಕನ ಪ್ರಾಣ ಪ್ರತಿಷ್ಠೆ ಮಾಡಿದ್ದು

ಆ ಗ್ರಾಮದಲ್ಲಿ ಒಬ್ಬ ಗುರು-ಭಕ್ತನು ಗುಣಾಢ್ಯಳಾದ ಹೆಂಡತಿ ಮತ್ತು ೪-೫ ವರುಷದ ಮಗನೊಡನೆ ಸಂಸಾರ ಮಾಡಿಕೊಂಡಿರಲು, ಈ ಮಹಾಗುರು ಸನ್ನಿಧಿಗೆ ಒಂದೆರಡು ದಿವಸ ಮಗನನ್ನು ಕರೆದುಕೊಂಡು ಹೋಗಿಬರುತ್ತಿದ್ದನು. ಬಳಿಕ ಮನದಲ್ಲಿ ಈ ಮಹಾತ್ಮರಿಗೆ ನಾನೂ ಬಿನ್ನಹಮಾಡಿ, ಪಾದಸೇವೆ ಮಾಡಬೇಕೆಂದು ಯೋಚನೆ ಮಾಡುತ್ತ ನಿಂತಿರಲು, ಮಹಾ ಶ್ರೀಗಳವರು ಏನಪ್ಪಾ ಭಕ್ತಾ, ನಮಗೆ ಬಿನ್ನಹಮಾಡಬೇಕೆಂದಾಲೋಚನೆ ಮಾಡುವಿಯೇನು? ಎಂದು ಕೇಳಲು, "ಹೌದು ಗುರುವೇ, ದಯವಿರಬೇಕು." "ಹಾಗೆ ಆಗಲಿ, ನಿನ್ನ ಮನೆಗೆ ಬರುವೆವು. ನಾಳೆಗೆ ಸಿದ್ಧತೆ ಮಾಡಿಕೋ" ಎಂದಪ್ಪಣೆಕೊಟ್ಟರು.

ಆ ಕೂಡಲೇ ಸಂತುಷ್ಟನಾಗಿ ಬಂದು, ಹೆಂಡತಿಗೆ ತಿಳಿಸಿ, ಸರ್ವ ಸಾಹಿತ್ಯ ಸಂಗ್ರಹಮಾಡಿದನು. ಆ ದಿವಸವೇ ಮಗನಿಗೆ ಜ್ವರ ಹುಟ್ಟಿದವು. ಅದನ್ನು ಲಕ್ಷಿಸದೆ, ಭಕ್ತಿಯಿಂದ ಮಾರನೆ ದಿವಸ ಶಾಕ-ಪಾಕಾದಿಗಳನ್ನೆಲ್ಲಾ ಸಿದ್ಧಮಾಡಿ ಬೇಗನೆ ಮಹಾಗುರುಗಳನ್ನು ಕರೆತರುವೆನೆಂದು ಹೇಳಿ ಹೋದನು.

ಅಷ್ಟರಲ್ಲಿ ಬಾಲಕನಿಗೆ ಜಾಡ್ಯ ಹೆಚ್ಚಾಗಿ, ಬಹು ಸಂತಾಪಗೊಳ್ಳುತ್ತಿರಲು, ತಾಯಿಯು ಬಂದು— ತಮ್ಮಾ ಮಗುವೇ ಏಳಪ್ಪಾ, ಈಗ ನಮ್ಮ ಮನೆಗೆ ಉಜ್ಜಯಿನೀ ಮಹಾಸ್ವಾಮಿಗಳವರು ದಯಮಾಡಿಸುತ್ತಾರೆ; ತಾತನ ಸೇವೆಮಾಡು ಏಳೆಂದು ಹೇಳುತ್ತಿರುವಷ್ಟರಲ್ಲಿಯೇ, ಬಾಲನು ಕುಳಿತದ್ದು ಹಿಂದಕ್ಕೆ ಬೀಳುತ್ತ ಕಣ್ಣುಮುಚ್ಚಿ ಮಾತಾಡಲಿಲ್ಲ. ನಿಶ್ಚೇಷ್ಟಿತವಾಯಿತು. ನೋಡಿ ಘಾಬರಿಗೊಂಡು, ಅಯ್ಯೋ ಮಗನೇ, ಕೈಬಿಟ್ಟು ಹೋದೆಯಾ ಎಂದು ಎದೆ ಬಡಕೊಂಡು ದುಃಖಮಾಡಹತ್ತಿದಳು.

ಆಗ ಪತಿಯು ಬಂದು ನೋಡಿ, ಬಹಳ ದುಃಖಮಾಡಿದನು. ಬಳಿಕ ಧೈರ್ಯ ತಾಳಿ, ಪ್ರೀಯೆ ಇರಲಿ, ಈ ಸಮಯದಲ್ಲಿ ನಮ್ಮ ಸಂಕಟವನ್ನು ಬಯಲಿಗೆ ತೋರಿಸ

ಬಾರದು ಶಾಂತಳಾಗು; "ಹರ ಮುನಿದರೂ, ಗುರು ಕಾಯುವ" ನೆಂದು ಹೇಳು ವರು. ಈಗ ಗುರು ಕೃಪೆ ಇದ್ದಂತಾಗಲಿ; ಎನ್ನುತ್ತಾ ಬಟ್ಟೆಯನ್ನು ತುಂಬಾ ಹೊದಿಸಿ ಆ ಹುಡುಗನನ್ನು ಇಬ್ಬರೂ ಕೂಡಿ ಒಂದು ಕಡೆ ಮಲಗಿಸಿಬಿಟ್ಟರು.

ಅಷ್ಟರಲ್ಲಿ ಮಹಾಸವಾರಿಯು ಡಮಣಿಗಾಡಿಯಲ್ಲಿ ಮನೆಗೆ ದಯಮಾಡಿಸಿತು. ಸ್ನಾನ, ಶಿವಾರ್ಚನೆ ನಡೆದು, ಪಾದತೀರ್ಥ ಸ್ವೀಕಾರಕ್ಕೆ– ಎಲಾ ನಿನ್ನ ಮಗನೆಲ್ಲಿರು ವನು? ಕರೆದುಕೊಂಡು ಬಾರೋ ಎನ್ನಲು, ಈ ದಂಪತಿಗಳಿಗೆ ಮಹಾದುಃಖ ಉಂಟಾಗಿ– ಮಹಾಗುರುವೇ, ಇನ್ನೆಲ್ಲಿ ಮಗನು! ಅವನು ಶಿವನಲ್ಲಿಗೆ ಹೋದನು. ಒಂದು ತಾಸಾಯಿತೆಂದು ರೋದಿಸಿದರು.

ಎಲಾ ದುಃಖಿಸಬೇಡಿರಿ, ಸಮಾಧಾನ ತಾಳಿರಿ. ಆ ಬಾಲಕನನ್ನು ಇಲ್ಲಿಗೆ ತೆಗೆದುಕೊಂಡು ಬಾರೆಂದು ಹೇಳಲು, ಅವರು ಆ ಹುಡುಗನನ್ನು ತಂದು ಮುಂದಿರಿಸಿ ದರು. ಆಗ ಮಹಾ ಶ್ರೀಗಳವರು ಪಾದೋದಕವನ್ನು ಸಿಂಪಡಿಸಿ, ಜಲಭಸ್ಮವನ್ನು ಸರ್ವಾಂಗಕ್ಕೂ ಲೇಪನಮಾಡಿ, ತಮ್ಮ ಅಮೃತಹಸ್ತದಿಂದ ೧ ಘಳಿಗೆವರೆಗೆ ಕೈಯಾಡಿ ಸುತ್ತಿರಲು, ಆ ಹುಡುಗನು ಮೆಲ್ಲಗೆ ಕಣ್ಣುಗಳ ತೆರೆದು ನೋಡಲಾರಂಭಿಸಿ, ಹೊರ ಳಾಡಿ, ಅವ್ವಾ ಅವ್ವಾ ಎಂದು ಕರೆದನು.

ಇದನ್ನೆಲ್ಲಾ ನೋಡುತ್ತ ಭೀತಿಗೊಂಡ ಜನರು ಅತ್ಯಾಶ್ಚರ್ಯಭರಿತರಾದರು. ತಾಯಿಯು ಅತ್ಯಾನಂದದಿಂದ ಮಗುವನ್ನೆತ್ತಿಕೊಂಡು ಮಹಾ ತಂದೆಯೇ ಇಂದಿಗೆ ನೀನೆ ಸಾಕ್ಷಾತ್ ಪರಶಿವನು! ನಿನ್ನ ಕೃಪೆಯಿಂದ ಮಗ ಬದುಕಿದನು. ನಾವು ಧನ್ಯ ರಾದೆವೆಂದು ಕೊಂಡಾಡಿ ಹಾಡಿಹರಿಸಿದರು. ಈ ಸದ್ವಾರ್ತೆಯು ದೇಶದಲ್ಲೆಲ್ಲಾ ವ್ಯಾಪಿಸಿ ಉಜ್ಜಯಿನೀ ಶ್ರೀ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳವರು ಘನಮಹಿಮಾಶಾಲಿ ಗಳೆಂದು ಪ್ರಸಿದ್ಧವಾಯಿತು.

---

## ಶ್ರೀ ರಂಭಾಪುರೀ ಪೀಠದ ಪಟ್ಟಾಧಿಕಾರದ ನೋಟೀಸು

ಶ್ರೀಮದುಜ್ಜಯಿನೀ ಜಗದ್ಗುರು ಮಹಾ ಶ್ರೀಗಳವರ ಅಪ್ಪಣೆ ಪ್ರಕಾರ ರಂಭಾ ಪುರೀ ಪೀಠದ ಮಹಾ ಸಂಸ್ಥಾನದ ಎಜಂಟರಾದ **ಯಸ್. ಕೆ. ಯಂ. ರುದ್ರಾ ರಾಧ್ಯರವರು** ಸಮಸ್ತ ಜನರ ತಿಳುವಳಿಕೆಗಾಗಿ ಪಟ್ಟಾಧಿಕಾರ ನೆರವೇರುವ ಜಾಹೀರ ನೋಟೀಸನ್ನು ಕೆಳಗೆ ಕಾಣಿಸಿದಂತೆ ಮುದ್ರಿಸಿ ಪ್ರಸಿದ್ಧಮಾಡಿದರು.

॥ ಶ್ರೀ ಜಗದ್ಗುರು ರೇಣುಕಾಚಾರ್ಯಃ ಪ್ರಸೀದತು ॥

# ಶ್ರೀ ಜಗದ್ಗುರು ರೇಣುಕಾಚಾರ್ಯ ಪೀಠ ಪಟ್ಟಾಭಿಷೇಕ ಮಹೋತ್ಸವಾಹ್ವಾನ ಪತ್ರಿಕಾ

................ ಗ್ರಾಮದ ಶ್ರೀ ಪಟ್ಟ-ಚರಾಧಿಕಾರಿಗಳು, ಮಠಸ್ಥರು, ಶೆಟ್ಟರು, ಯಜಮಾನರು, ದೇಸಾಯರು, ದೇಶಪಾಂಡೆಯರು, ಗೌಡರು, ನಾಡಗೌಡರು, ಬಣಕಾರರು, ಬುದ್ಧಿವಂತರು ಮುಂತಾದ ವೀರಶೈವ ಮಹಾಜನರಿಗೆ ಕುಶಲಪೂರ್ವಕ ಶ್ರುತಪಡಿಸುವದೇನಂದರೆ —

ಯುಗಯುಗಾಂತರಗಳಲ್ಲಿ ಶ್ರೀ ಸೋಮನಾಥಲಿಂಗದಿಂದವತರಿಸಿ ಭೂಮಂಡಲದಲ್ಲಿ ವೀರಶೈವ ಸಿದ್ಧಾಂತವನ್ನು ಸ್ಥಾಪಿಸಿದ ಶ್ರೀ ಜಗದ್ಗುರು ರೇಣುಕಾಚಾರ್ಯರು ವೀರಶೈವ ಮತದ ದೀಕ್ಷಾ-ಶಿಕ್ಷಾ-ರಕ್ಷಾ-ಮೋಕ್ಷಾದಿಗಳ ಬಗ್ಗೆ ಮಲಯಾದ್ರಿ ಮಧ್ಯ ವಿದ್ಯೋತಮಾನ ಶ್ರೀಮದ್ರಂಭಾಪುರೀ ಮಹಾಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿರುವ ವಿಷಯವು ಶಾಸ್ತ್ರಪ್ರಸಿದ್ಧವೂ, ಲೋಕ ಪ್ರಸಿದ್ಧವೂ ಅದೆ. ಸಧ್ಯಃ ಈ ಮಹಾ ಪೀಠದ ಉತ್ತರಾಧಿಕಾರವು ಪರಮ ತಪಸ್ವಿಗಳಾದ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರಿಂದ ಅನುಗ್ರಹಿಸಲ್ಪಡತಕ್ಕದ್ದಾಗಿದೆ. ಇಂಥ ಜಗತ್ಪೂಜ್ಯವಾದ ಧರ್ಮಪೀಠಕ್ಕೆ ಸಾಕ್ಷಾದ್ಧರ್ಮಾವತಾರಿಗಳಾದ ನಮ್ಮ ಶ್ರೀಮನ್ಮಹಾರಾಜರವರು ಕಮೀಟಿಯ ಏರ್ಪಾಟಿನ ಮೇರೆಗೆ ವ್ಯಾಕರಣತೀರ್ಥ, ವಿದ್ಯಾಭೂಷಣ ಬಿರುದಾಂಕಿತರಾದ ಪಂಡಿತ ಶ್ರೀ ಸದಾಶಿವಶಾಸ್ತ್ರಿಗಳವರನ್ನು ಪಟ್ಟಾಧಿಕಾರಿಗಳನ್ನಾಗಿ ಮಾಡಲಿಕ್ಕೆ ಮಂಗಲಕರವಾದ ಹುಕುಮನ್ನು ದಯಪಾಲಿಸಿದ್ದಾರೆ. ಈ ಪಟ್ಟಾಭಿಷೇಕ ಮಹೋತ್ಸವ ಕಾರ್ಯವು ಇದೇ ಕ್ರೋಧನನಾಮ ಸಂವತ್ಸರ ಮಾರ್ಗಶೀರ್ಷ ಶು. ೭ ಭಾನುವಾರ ಪ್ರಾತಃಕಾಲ ೮ ಘಂಟೆ, ೪೫ ನಿಮಿಷಕ್ಕೆ ಸಲ್ಲುವ ಧನುರ್ಲಗ್ನ ಶುಭಾಂಶದಲ್ಲಿ ತಾ. ೨೨-೧೧-೧೯೨೫ ರಲ್ಲಿ ನೆರವೇರುವಂತೆ ನಿಶ್ಚಯಿಸಲ್ಪಟ್ಟಿರುತ್ತದೆ. ಈ ಮಹಾ ಕಾರ್ಯಕ್ಕೆ ತಾವು ತಮ್ಮ ಸಕಲ ಪರಿವಾರದೊಡನೆ ಭಕ್ತಿಪೂರ್ವಕವಾಗಿ ಆಗಮಿಸಿ, ಜಗದಾಚಾರ್ಯರ ಕೃಪೆಗೆ ಪಾತ್ರರಾಗಬೇಕೆಂದೂ, ಸಾಕ್ಷಾದ್ಭೂಕೈಲಾಸದಂತೊಪ್ಪುತ್ತಿರುವ ಶ್ರೀ ರೇಣುಕಾಶ್ರಮದ ದರ್ಶನ-ವಾಸಾದಿಗಳಿಂದ ಭವತಾಪವನ್ನು ದೂರಮಾಡಿಕೊಳ್ಳಬೇಕೆಂದೂ ಹಾರೈಸುತ್ತೇನೆ.— ಶಿವಂಭೂಯಾತ್ !

ತಾ. ೨೮-೧೦-೧೯೨೫.
ಟೆಲಿಗ್ರಾಫ್ ಅಂಡ್ ಪೋಸ್ಟ್:
ಬಾಳೇಹೊನ್ನೂರು, ಜಿ. ಕಡೂರು

ಶ್ರೀಮದ್ರಂಭಾಪುರೀ ಮಹಾಸಂಸ್ಥಾನದ ಏಜಂಟ್,
ಯಸ್. ಕೆ. ಯಂ. ರುದ್ರಾರಾಧ್ಯ.

ಈ ಪತ್ರಿಕೆಗಳು ಕರ್ನಾಟಕಾಂಧ್ರ, ಮಹಾರಾಷ್ಟ್ರ ನೈಜಾಂ ದೇಶಗಳಲ್ಲಿರುವ ಗ್ರಾಮಾನುಗ್ರಾಮಗಳ ಸಮಸ್ತ ವೀರಶೈವ ಮಂಡಲಿಗೂ ಇನ್ನಿತರರಿಗೂ ರವಾನೆ ಮಾಡಲ್ಪಟ್ಟವು. ಬಳಿಕ ಆ ಮಹಾಸಂಸ್ಥಾನ ಮಠವನ್ನೂ ಇನ್ನಿತರ ಭಾಗಗಳನ್ನೂ ತಳಿರು-ತೋರಣಾದಿಗಳಿಂದಲೂ ರಂಭಾಸ್ತಂಭ ಧ್ವಜಪತಾಕೆಗಳಿಂದಲೂ ಚಿತ್ರ ವಿಚಿತ್ರಗಳಾದ ಮೈಸೂರು ಕಲಾಕೋವಿದರು ರಚಿಸಿದ ಮಂಟಪಾದಿಗಳಿಂದಲೂ ನಾನಾವಿಧವಾಗಿ ಪ್ರೇಕ್ಷಕರ ಕಣ್ಮನಾದಿಗಳಿಗೆ ಪರಮೋಲ್ಲಾಸವಾಗುವಂತೆ ಶೃಂಗರಿಸಲ್ಪಟ್ಟಿತು.

## ಮಹಾಶ್ರೀಗಳವರು ರಂಭಾಪುರಿಗೆ ಆಗಮಿಸಿದ್ದು

ಮಹಾಶ್ರೀಗಳವರು ಬುಕ್ಕಾಂಬುಧಿ ಗ್ರಾಮದ ಭಕ್ತಾವಲಿಯಿಂದ ಸೇವಾದಿಗಳಂ ಸ್ವೀಕರಿಸಿದ ನಂತರ ಸಕಲ ಸಿಬ್ಬಂದಿಯೊಡಗೂಡಿ ಪ್ರಯಾಣ ಬೆಳೆಯಿಸಿ ಮಧ್ಯಮಾರ್ಗದಲ್ಲಿ ಅಲ್ಲಲ್ಲಿ ಮುಕ್ಕಾಂ ಮಾಡುತ್ತ ತಮ್ಮ ಪ್ರೋಗ್ರಾಂ ಪ್ರಕಾರ ತಾರೀಖು ೨೦-೧೧-೧೯೩೩ ಕ್ಕೆ ರಂಭಾಪುರೀ ಮಹಾಕ್ಷೇತ್ರಕ್ಕೆ ದಿಗ್ವಿಜಯ ಮಾಡಲಾಯಿತು.

---

## ಶ್ರೀ ಪಟ್ಟಾಧಿಕಾರ ಸಮಾರಂಭವು

ಶ್ರೀಮದುಜ್ಜಯಿನೀ ಜಗದ್ಗುರು ಮಹಾಸನ್ನಿಧಿಯವರಿಂದ ರಂಭಾಪುರೀ ಪೀಠದ ಪಟ್ಟಾಧಿಕಾರವು ನೆರವೇರುವದೆಂಬ ಮಂಗಲಕರವಾರ್ತೆಯು ಪ್ರಸಿದ್ಧಪತ್ರಿಕೆ, ವಾರ್ತಾಪತ್ರಿಕೆ, ಮಾಸಪತ್ರಿಕೆ, ವಾರಪತ್ರಿಕೆಗಳ ದ್ವಾರಾ ಜಗತ್ತಿನಲ್ಲಿರುವ ಸರ್ವ ಮಾನವಸಮುದಾಯಕ್ಕೆ ತಿಳಿಯುವದಾಯಿತು. ಅನೇಕ ದೇಶಾಂತರಗಳಿಂದ ಜನ ಸಂದಣಿಯು ಸತಿ-ಪುತ್ರ-ಮಿತ್ರಾದಿಗಳೊಡಗೂಡಿ ೨-೩ ದಿವಸ ಮುಂಚಿತವಾಗಿಯೇ ರಂಭಾಪುರೀ ( ಬಾಳೆಹೊನ್ನೂರಿಗೆ ) ಬರಲಾರಂಭಿಸಿದರು.

ಹುಬ್ಬಳ್ಳಿ, ಬೆಂಗಳೂರು ರೈಲ್ವೆ ಮಧ್ಯದಲ್ಲಿರುವ ಕಡೂರು ರೈಲ್ವೆ ಸ್ಟೇಶನ್ನಿಗಿಳಿದ ಜನರು ಮೋಟಾರ ಬಸ್ಸು, ಕಾರು, ಟಾಂಗಾ, ಜಟಕಾ, ಲಾರಿ, ಬಂಡಿ ಮುಂತಾದವುಗಳಲ್ಲಿ ನಿಬಿಡವಾಗಿ ತುಂಬಿ ತುಂಬಿ, ಹಗಲಿರುಳು ಬಂದು ಬಂದು ಬಾಳೆಹೊನ್ನೂರಿಗೆ ಸೇರಿದರು.

ಈ ಮಹಾ ಸಮಾರಂಭದ ಸುಸಮಯದಲ್ಲಿ ಮಹಾಪಾದಸೇವೆಯನ್ನು ಮಾಡಿ ಪುನೀತರಾಗಬೇಕೆಂದು ಕೆಲವರು ಧನಿಕರೂ ಬಡವರೂ ಸ್ವತಃ ಕೈಮುಟ್ಟಿ ಸಣ್ಣಪುಟ್ಟ ಕೆಲಸಗಳನ್ನು ನಿರಭಿಮಾನ ನಿರ್ವಂಚನೆಯಿಂದ ಮಾಡಿ ಮಾಡಿ ದಣಿಯುತ್ತಿದ್ದರು.

ಈ ಮಹಾಸಮಾರಂಭಕ್ಕೆ ಮೈಸೂರು ಸರಕಾರದ ಪ್ರತಿನಿಧಿಗಳಾಗಿ ಮುಜರಾಯಿ ಕಮಿಶನರ ಮೆ|| ಸಿ. ಎಸ್. ಬಾಲಸುಂದರಂ ಅಯ್ಯರರವರೂ, ಕಡೂರು ಡಿಸ್ಟ್ರಿಕ್ಟಿನ ಅಧಿಕಾರಿಗಳಾದ ಡೆಪುಟಿ ಕಮಿಶನರರವರೂ, ಸಬ್‌ಡಿವ್ಹಿಜನ್ ಆಫೀಸರರೂ, ಮುಂತಾದ ಮಂಡಲಿ ಜನರೂ, ಪೋಲೀಸ ಸುಪರಿಂಟೆಂಡೆಂಟರೂ, ಪೋಲಿಸ ಸಿಬ್ಬಂದಿಯೂ ಹಾಗು ಅನೇಕ ಕಾಫಿ ಪ್ಲಾಂಟರುಗಳೂ, ಶ್ರೀಯುತ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರು ದಂಪತಿಗಳೂ, ಸಬ್‌ಜಜ್ ಸಿ. ಮಹಾದೇವಯ್ಯನವರೂ, ದಿ. ಬ. ಧಾರವಾಡ ಮೆಣಸಿನಕಾಯಿ ಶಾಂತವೀರಪ್ಪನವರೂ, ಬೀರೂರು ಸಾಹುಕಾರ ಪತ್ರೆ ಚನ್ನವೀರಪ್ಪನವರೂ ಮತ್ತು ಬಳ್ಳಾರಿ, ಹೊಸಪೇಟೆ, ಹುಬ್ಬಳ್ಳಿ, ಸೊಲ್ಲಾಪುರ, ವಿಜಾಪುರ, ಬೆಳಗಾವಿ, ರಾಯಚೂರು, ಗುಲಬುರ್ಗಾ ಮುಂತಾದ ನಾನಾಪ್ರದೇಶಗಳಿಂದ ವೀರಶೈವ ಸಮಾಜದ ಪ್ರಮುಖ ಮಂಡಳಿಯು ಹಾಗು ಇನ್ನಿತರ ಸರ್ವಸಾಧಾರಣ ಜನಸ್ತೋಮವು ಅಸಂಖ್ಯಾತವಾಗಿ ಬಂದು ಸೇರಿತು.

ಈ ಮಹಾಕಾರ್ಯಕ್ಕೆ ಆಗಂತುಕ ಭಕ್ತಮಾಹೇಶ್ವರಾದಿ ವೃಂದಕ್ಕೆ ಯಾವ ವಿಧವಾದ ತೊಂದರೆ-ಕೊರತೆಗಳುಂಟಾಗಬಾರದೆಂದು ಉ. ಮಹಾ ಶ್ರೀಗಳವರು ತಮ್ಮ ಆನಂದ ಆಡಂಬರಗಳನ್ನೆಲ್ಲಾ ತ್ಯಾಜ್ಯಮಾಡಿ ಸ್ವತಃ ಪಾದಚಾರಿಗಳಾಗಿ ಅಲ್ಲಲ್ಲಿ ವಿಚಾರಮಾಡುತ್ತ, ಅವರವರ ವಸತಿ, ಸ್ನಾನ, ಶಿವಪೂಜಾದಿಗಳಿಗೂ ಅನ್ನ-ಪಾನಾದಿಗಳಿಗೂ ತೊಂದರೆಯಾಗದಂತೆ ವಾಲಂಟಿಯರುಗಳನ್ನು ನಿಯಮಿಸಿ ಯೋಗ್ಯವಾದ ಸುವ್ಯವಸ್ಥೆಯನ್ನು ಮಾಡಿಸಿ ಮುಂದಿನ ಕಾರ್ಯಕ್ರಮಗಳಿಗೆ ತೆರಳಿದರು.

ತರುವಾಯ ತಾರೀಖು ೨೧—೧೧—೧೯೩೪ನೇ ದಿವಸ ಕೆಲವು ಮಾಹೇಶ್ವರ ವಟುಗಳಿಗೆ ಶಿವದೀಕ್ಷಾಸಂಸ್ಕಾರ ಕಾರ್ಯವು ಸಕ್ರಮವಾಗಿ ಮಾಡಲ್ಪಟ್ಟಿತು. ಪೂರ್ವೋಕ್ತ ಕಾರ್ಯಗಳು ವಿದ್ಯುಕ್ತ ಜರಗಿದನಂತರ ಕ್ರೋಧನನಾಮ ಸಂ|| ದ ಮಾರ್ಗಶಿರ ಶು. ೭ ಭಾನುವಾರ ( ತಾರೀಖು ೨೫—೧೧—೧೯೩೪ ) ದಿವಸ ಉದಯ ೮—೪೫ ಕ್ಕೆ ಸಲ್ಲುವಂಥ ಧನುರ್ಲಗ್ನ ಶುಭಾಂಶದಲ್ಲಿ ಶ್ರೀಮದುಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳವರ ಸನ್ನಿಧಿಯಲ್ಲಿ ಪಂ. ಸದಾಶಿವಶಾಸ್ತ್ರಿಗಳವರಿಗೆ ಶ್ರೀ ಜಗದ್ಗುರು ರೇಣುಕಶಿವಾಚಾರ್ಯ ಮಹಾಪೀಠಕ್ಕೆ ಪಟ್ಟಾಧಿಕಾರವು ಸಕ್ರಮವಾಗಿ ನೆರವೇರಿಸಲ್ಪಟ್ಟಿತು.

## ಉ. ಮಹಾಶ್ರೀಗಳವರಿಂದ ಸುವರ್ಣರತ್ನಖಚಿತ ಕಿರೀಟಧಾರಣವು

ತರುವಾಯ ಮಹಾಸಂಸ್ಥಾನದಲ್ಲಿ ಶೋಭಿಸುವ ಭವ್ಯವಾದ ಸಭಾಮಂಟಪದೊಳಗೆ ಅಸಂಖ್ಯಾತ ಜನಸಂದಣಿ ನೆರೆಯಿತು. ನೂತನ ಜಗದ್ಗುರುಗಳವರು ಶ್ರೀ ಜಗದ್ಗುರು ರೇಣುಕಾಚಾರ್ಯರ “ ವೀರಸಿಂಹಾಸನ ”ದ ಮೇಲೆ ಮೂರ್ತಮಾಡಲು,

ಉಜ್ಜಯಿನೀ ಜ. ಸಿ. ಮಹಾಶ್ರೀಗಳವರು ತಮ್ಮ ವರದಹಸ್ತಗಳಿಂದ ಸುವರ್ಣರತ್ನ ಖಚಿತವಾದ ಕಿರೀಟವನ್ನು ಧಾರಣಮಾಡಿ ದಂಡ-ಕಂಥಾ-ಕಮಂಡಲು ಮುಂತಾದ ವುಗಳನ್ನು ಅನುಗ್ರಹಿಸಿ, ಆ ಶುಭ ಸಮಯದಲ್ಲಿ ಇವರಿಗೆ ಶ್ರೀ ಜಗದ್ಗುರು **ಶಿವಾನಂದರಾಜೇಂದ್ರ ಶಿವಾಚಾರ್ಯ**ರೆಂಬ ನೂತನ ನಾಮಾಂಕಿತವನ್ನು ಕರೆ ದರು. ಆಕೂಡಲೇ ಸಮಸ್ತ ಜನರು ಆನಂದಭರಿತರಾಗಿ ಶ್ರೀ ಜಗದ್ಗುರು ಶಿವಾನಂದ ಶಿವಾಚಾರ್ಯ ಮಹಾರಾಜಕೀ ಜೈ ! ಎಂಬ ಶುಭನಾಮ ಸಂಕೀರ್ತನದಿಂದ ೩ ಸಾರೆ ಜಯಘೋಷವನ್ನು ಮಾಡಿದರು.

ತದನಂತರ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾ ಸ್ವಾಮಿಗಳವರು ಪರಮಾನಂದಭರಿತರಾಗಿ ಅಲ್ಲಿ ನೆರೆದ ಸಭಿಕರಲ್ಲಿ ತಮ್ಮ ಅಮೃತ ಮಯವಾಣಿಯಿಂದ ಅಪ್ಪಣೆ ಕೊಡಿಸಿದರು— ಏನಂದರೆ—

ಸಭಿಕರೇ, ಈ ಜಗದ್ಗುರು ಮಹಾಪೀಠಾಧಿಕಾರಸ್ಥಾನಕ್ಕೆ ಯೋಗ್ಯರಾದವರನ್ನೇ ಅಧಿಕಾರ ಮಾಡಬೇಕೆಂಬ ನಮ್ಮ ಸತ್ಸಂಕಲ್ಪವು ಶ್ರೀ ರೇಣುಕರ ದಯದಿಂದ ಈದಿನ ನೆರವೇರಿದುದಕ್ಕಾಗಿ ನಾವು ಪರಮಸಂತುಷ್ಟರಾಗಿರುತ್ತೇವೆ. ಮುಂದೆ ಸಮಸ್ತ ಭಕ್ತ ಮಂಡಲಿಯು ಈ ಜಗದ್ಗುರುಗಳವರಲ್ಲಿ ಅಸಾಧಾರಣವಾದ ಭಕ್ತಿಯನ್ನಿಟ್ಟು ವರ್ತಿಸಿ ಗುರುಕೃಪೆಗೆ ಪಾತ್ರರಾಗಬೇಕು. ಮತ್ತು ಮುಂದೆ ನಿಮ್ಮ ನಿಮ್ಮ ಪ್ರಾಂತಗಳಿಗೆ ಸವಾರಿ ದಯಮಾಡಿಸಿಕೊಂಡು ಮಹೋತ್ಸವ ನೆರವೇರಿಸಿ ತನು-ಮನ-ಧನಗಳಿಂದ ಸೇವೆ ಸಲ್ಲಿಸಿ ಸದ್ಗುರು ಕೃಪೆಗೆ ಪಾತ್ರರಾಗಿರಿ. ಇತ್ಯಾದಿ ಬಹು ಸ್ವಾರಸ್ಯವಾಗಿ ಅಪ್ಪಣೆಮಾಡಿದರು.

ತರುವಾಯ ಶ್ರೀ ಜಗದ್ಗುರು ಶಿವಾನಂದ ಶಿವಾಚಾರ್ಯಮಹಾಸ್ವಾಮಿಗಳವರು ಆತ್ಮಾನಂದಭರಿತರಾಗಿ ನಮ್ಮನ್ನು ಈ ಪೀಠಾಧಿಕಾರಕ್ಕೆ ತರಲು ಪರಮ ತಪೋನಿಧಿಗಳೂ ಶಿವಯೋಗಿಪುಂಗವರೂ ಆದ ಈ ಶ್ರೀಮದುಜ್ಜಯಿನೀ ಜಗದ್ಗುರು **ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿ**ಗಳವರು ಮಹಾಪ್ರಯತ್ನಮಾಡಿ ಈ ಮಹಾಕಾರ್ಯವನ್ನು ದಿಗ್ವಿಜಯಗೊಳಿಸಿದುದಕ್ಕಾಗಿ ಶ್ರೀ ಮಹಾಸನ್ನಿಧಿಗೆ ತುಂಬಾ ಕೃತಜ್ಞರಾಗಿದ್ದೇವೆ. ಮತ್ತು ಮೈಸೂರು ಸರಕಾರದ ಪ್ರತಿನಿಧಿಗಳವರಿಗೂ ಆಭಾರಿ ಯಾಗಿದ್ದೇವೆ. ಈ ಭುವನಪ್ರಖ್ಯಾತ ಪೀಠದ ಪೂರ್ವ ಔನ್ನತ್ಯವನ್ನುಂಟುಮಾಡಲು ಶ್ರೀ ರೇಣುಕರ ಕೃಪೆಯಿಂದ ನಮ್ಮ ಕೈಲಾದಮಟ್ಟಿಗೆ ಸಾಹಸಮಾಡುವೆವು. ಇತ್ಯಾದಿ ಭಾಷಣ ಮಾಡಿದರು.

ಬಳಿಕ ಬೇರೆ ಪಂಡಿತರೂ ಶಾಸ್ತ್ರಿಗಳವರೂ ಪಟ್ಟಚರಾಧಿಕಾರಿಗಳೂ ಗುರುಭಕ್ತಿ ಮಾನವನ ಕರ್ತವ್ಯ, ಧರ್ಮಾಚರಣೆ ಮುಂತಾದ ವಿಷಯಗಳ ಮೇಲೆ ಅತ್ಯಂತ ಸ್ಫೂರ್ತಿದಾಯಕ ಭಾಷಣಗಳನ್ನು ಮಾಡಿ ಸರ್ವರನ್ನು ಆನಂದಗೊಳಿಸಿದರು. ಈ ರೀತಿಯಾಗಿ ಪಟ್ಟಾಧಿಕಾರ ಸಮಾರಂಭವು ಬಹು ಸಂಭ್ರಮದಿಂದ ಜರಗಿ, "ನ

## ಉಜ್ಜಯಿನಿ ಜ|| ಸಿದ್ಧಲಿಂಗಮಹಾಸ್ವಾಮಿಗಳವರು



ರಂಭಾಪುರೀ ಜ|| ಶಿವಾನಂದಮಹಾಸ್ವಾಮಿಗಳವರಿಗೆ ಪಟ್ಟಾಧಿಕಾರ ಸಮಯದಲ್ಲಿ ಕಿರೀಟಧಾರಣ ಮಾಡುತ್ತಿರುವುದು ೧೨೦

ಭೂತೋ ನ ಭವಿಷ್ಯತಿ" ಎಂಬಂತಾಯಿತು. ಸರ್ವರೂ ಆನಂದಾಂಬುಧಿಯಲ್ಲಿ ಲೋಲಾಡಿದರು. ಆ ದಿವಸದ ಕಾರ್ಯಕ್ರಮಗಳು ಸಮಾಪ್ತಿಯಾದವು.

## ಸಭಾಮಂಟಪದಲ್ಲಿ ನಡೆದ ಕಾರ್ಯಕ್ರಮಗಳು

ತಾ. ೨೪-೧೧-೧೯೨೫ ನೆಯ ದಿವಸ ಮಹಾಜಗದ್ಗುರುಗಳವರ ಸನ್ನಿಧಿಯಲ್ಲಿ ಅನೇಕ ಜನಸ್ತೋಮವು ಕಿಕ್ಕಿರಿದು ಕೂಡಿತು. ಶ್ರೀಮದ್ರಂಭಾಪುರೀ ಪೀಠಕ್ಕೆ ಪಟ್ಟಾಧಿಕಾರ ನೆರವೇರಿದ ಬಗ್ಗೆ ಪ್ರಾಚೀನ ಪದ್ಧತಿಯಂತೆ ಮಹಾಸಂಪುಟಕ್ಕೆ ಸಮಸ್ತ ಭಕ್ತ-ಮಾಹೇಶ್ವರಾದಿ ಮಂಡಲಿಯಿಂದ ಸಹಿ (ರುಜು) ಮಾಡಲ್ಪಟ್ಟವು. ಬಳಿಕ ಪಂಡಿತರೂ, ಶಾಸ್ತ್ರಿಗಳೂ ಗುರುಶೇವಾ, ಗುರುಭಕ್ತಿ, ಗುರು ಯಾತ್ರಾ, ಕ್ಷೇತ್ರ ಯಾತ್ರಾ, ತೀರ್ಥಯಾತ್ರಾ ವಿಷಯಗಳಲ್ಲಿ ಸರಸವಾದ ಉಪನ್ಯಾಸ ಮಾಡಿದರು.

ಅನಂತರ ಉಜ್ಜಯಿನೀ ಮಹಾ ಶ್ರೀಗಳವರು ಈ ಪಟ್ಟಾಧಿಕಾರ ಸ್ಮಾರಕವಾಗಿ ಬೆಂಗಳೂರುಪಟ್ಟಣದಲ್ಲಿ ಒಂದು ಸಂಸ್ಕೃತ ಕಾಲೇಜನ್ನು ಸ್ಥಾಪಿಸಬೇಕೆಂದಾಲೋಚಿಸಿ, ಸಭೆಯಲ್ಲಿ ಅಮೌಲ್ಯವಾದ ಭಾಷಣವನ್ನಪ್ಪಣೆಕೊಡಿಸಿ, ಮೊದಲು ತಾವು ೧೧ ಸಾವಿರ ರೂಪಾಯಿಗಳನ್ನು ಸಂಸ್ಕೃತ ಕಾಲೇಜ ಫಂಡಿಗೆ ಕೊಡಲು ವಾಗ್ದಾನ ಮಾಡಿದರು. (ಮುಂದೆ ಇದರ ವ್ಯವಸ್ಥೆ ನಡೆಯಿತು. ತಾ. ೧೬-೧೦-೧೯೩೪ ರ ಪಂ। ಪ್ರಭಾ ಪತ್ರಿಕೆಯಲ್ಲಿದೆ.)

---

## ಮೇಲುಪ್ಪರಿಗೆಯಿಂದ ಬಿದ್ದ ಶಿಶುವಿನ ಪ್ರಾಣ ರಕ್ಷಣೆ

ಈ ಮಹಾಸಮಾರಂಭವನ್ನು ಉತ್ಸುಕತೆಯಿಂದ ನೋಡಲು, ಜನಸಂದಣಿಯು ಕಿಕ್ಕಿರಿದು ತುಂಬಿಹೋಗಿತ್ತು. ಆ ಸಮಯದಲ್ಲಿ ೨-೩ ಮೇಲಂತಸ್ತಿನಮೇಲೆ ಪಂ। ಹರೀಶ್ವರ ಶಾಸ್ತ್ರಿಗಳವರ ಪತ್ನಿಯು ೩-೪ ವರುಷದ ಸಂಣ ಬಾಲಿಕೆಯನ್ನು ಮುಂದಿರಿಸಿಕೊಂಡು, ಕೆಳಭಾಗದ ಸಮಾರಂಭವನ್ನು ನೋಡುತ್ತ ಕುಳಿತಿರಲಾಗಿ, ಆ ಬಾಲಕಿಯು ಆ ಕಡೆ ಈ ಕಡೆ ಆಡುತ್ತ ಮುಂದಕ್ಕೆ ಬಂದು ಏಕಕಾಲಕ್ಕೆ ಮೇಲುಪ್ಪರಿಗೆ ಮೇಲಿಂದ ಕೆಳಕ್ಕೆ ದುಪ್ಪನೆ ಬಿದ್ದುಬಿಟ್ಟಿತು. ಆ ಶಬ್ದವನ್ನೂ, ಆ ಹುಡಗಿಯನ್ನೂ ಅಲ್ಲಿದ್ದ ಜನರು ನೋಡಿ, ಅತ್ಯಂತ ಘಾಬರಿಯಾಗಿ ಓಡಿಬಂದು ಅಯ್ಯೋ ಹುಡಗಿಯು ಬಿದ್ದು ಸತ್ತಿತು, ಸತ್ತಿತು; ಗುರುವೇ ಕಾಪಾಡು, ಕಾಪಾಡು ಎಂದೂ, ಇದೇನು ಮಂಗಲಕಾರ್ಯದಲ್ಲಿ ಅಮಂಗಲವುಂಟಾಯಿತಲ್ಲಾ! ಎಂದೂ ಮಾತಾಡುತ್ತ ತಕ್ಷಣವೇ ಗುಂಪಾಗಿ ಕೂಡಿ ನೋಡುತ್ತಿದ್ದರು.

ಅಷ್ಟರಲ್ಲಿ ಉಜ್ಜಯಿನೀ ಮಹಾ ಶ್ರೀಗಳವರಲ್ಲಿಗೆ ಈ ವಾರ್ತೆಯು ಮುಟ್ಟಿತು. ಆಗ ಮಹಾಸ್ವಾಮಿಗಳು ಆಹಾ ಭಯಪಡಬೇಡಿರಿ ಶಾಂತರಾಗಿರಿ, ಆ ಶಿಶುವಿಗೆ ಏನೂ

ಧಕ್ಕೆಯಾಗಿಲ್ಲಾ. ಶ್ರೀ ರೇಣುಕರೇ ಇದ್ದಾರೆ. ನೋಡಿರಿ! ಎಂದು ನುಡಿದರು. ಅಲ್ಲಿಗೆ ಹೋಗಿ ನೋಡುತ್ತಾರೆ, ಆ ಬಾಲಕಿಗೆ ಏನೊಂದೂ ಧಕ್ಕೆಯಾಗದೆ, ಕೈಯಲ್ಲಿರುವ ಬಳೆಗಳು ಸಹ ಒಂದಾದರೂ ಒಡೆಯದೆ, ರೋದನಮಾಡದೆ, ಎದ್ದು ಕುಳಿತು ಆಡುತ್ತಾಯಿದ್ದಿತು.

ಈ ರೀತಿ ಇರುವದನ್ನು ನೋಡಿ, ಜನರು ಬಹಳ ಆಶ್ಚರ್ಯಚಕಿತರಾದರು. ಈ ಸಂಗತಿಯನ್ನು ಉಭಯ ಜಗದ್ಗುರುಗಳವರು ಕೇಳಿದರು. ಆಗ ಉಜ್ಜಯಿನೀ ಮಹಾ ಶ್ರೀಗಳವರು ರಂಭಾಪುರೀ ಶ್ರೀಗಳವರಿಗೆ ಅನ್ನುತ್ತಾರೆ — ನೋಡಿರಿ, ನಿಮ್ಮ ವಿಜಯ ಯಾತ್ರೆಯಲ್ಲಿ ಇಂಥ ಶುಭ ಸೂಚನೆಯಾಯಿತು! ಇದರಂತೆ ಮುಂದೆ ನಿಮಗೆ ಸರ್ವತ್ರ ವಿಜಯ ಉಂಟಾಗುವದೆಂದು ನುಡಿದರು. ಸರ್ವರೂ ಆಶ್ಚರ್ಯ ಭರಿತರಾದರು.

---

## ರಂಭಾಪುರೀ ಪೀಠದ ಮುಂದಿನ ಏರ್ಪಾಟು ಮಾಡಿದ್ದು

ಶ್ರೀಮದ್ರಾಂಭಾಪುರೀ ಮಹಾಪೀಠ ಪಟ್ಟಾಧಿಕಾರ ಮಹೋತ್ಸವವು ನಿರ್ವಿಘ್ನವಾಗಿಯೂ, ಸಕ್ರಮವಾಗಿಯೂ, ಪರಮ ಸಂಭ್ರಮದಿಂದ ದಿಗ್ವಿಜಯವಾಯಿತು. ಬಳಿಕ ಆನೆ, ಕುದರೆ, ಜವಾನರು ಮೊದಲಾದ ಸರ್ಕೀಟು ಸಿಬ್ಬಂದಿ ಏರ್ಪಾಟಮಾಡಿ, ಅಪ್ಪಣೆಕೊಡಿಸಿದರು. —

**ಅಭಿನವ ಜಗದ್ಗುರುಗಳೇ,**

ಆದ್ಯ ಶ್ರೀ ರೇಣುಕಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಈ ವೀರ ಸಿಂಹಾಸನವು ಯುಗಯುಗಾಂತರಗಳಿಂದಲೂ ಮಹಾ ವೈಭವದಿಂದ ಮೆರೆಯುತ್ತ ಬಂದಿರುವದು ಪ್ರಸಿದ್ಧವಿದೆ. ಇಂಥಾ ಮಹಾ ಪೀಠಾರೋಹಣಮಾಡಿದ ತಾವು, ಇತಃಪರ ಕೇವಲ ಶಾಂತಿ, ಗಾಂಭೀರ್ಯ, ಧೈರ್ಯದಿಂದಲೂ, ಚತುರೋಪಾಯಗಳಿಂದಲೂ, ಈ ವೀರಶೈವ ಧರ್ಮಸಾಮ್ರಾಜ್ಯವನ್ನು ಪರಿಪಾಲನಮಾಡಬೇಕು. ನಿಮ್ಮ ಶಿವಪೂಜಾನುಷ್ಠಾನ, ಜಪ-ತಪಾದಿಗಳಿಂದಲೇ ನಿಮ್ಮ ಸಕಲ ಕಾರ್ಯಗಳು ನಿರ್ವಿಘ್ನದಿಂದ ಪರಿಪೂರ್ಣಹೊಂದುವವು. ಶಿಷ್ಯ-ಪ್ರಶಿಷ್ಯ ಮಂಡಲಿಗೆ ನಿಮ್ಮ ವಿದ್ಯಾ, ವಾಗ್ವೈಖರಿಯಿಂದ ಧರ್ಮ, ನೀತಿ, ಗುರುಭಕ್ತಿ, ಸದಾಚಾರ ಮುಂತಾದ ಧರ್ಮೋಪದೇಶವನ್ನು ಮಾಡುತ್ತ ದುಷ್ಟನಿಗ್ರಹ, ಶಿಷ್ಟಪಾಲನ ಮಾಡಿ, ಈ ಮಹಾಪೀಠಕ್ಕೆ ತುಂಬಾ ಗೌರವ, ಪ್ರತಿಷ್ಠೆಗಳನ್ನುಂಟುಮಾಡುವ ಭಾರವು ನಿಮ್ಮನ್ನು ಹೊಂದಿರುತ್ತದೆ. ಇನ್ನು ಮೇಲೆ ನೀವು ಸಕಲ ಸಿಬ್ಬಂದಿಯೊಡಗೂಡಿ, ದೇಶದಲ್ಲಿ ದಿಗ್ವಿಜಯ ಮಾಡಿರಿ. ನಿಮ್ಮ ಸಕಲ ಕಾರ್ಯಗಳಿಗೂ ಶ್ರೀ ರೇಣುಕರು ತುಂಬಾ ಸಹಾಯಕರಾಗಿರುವರು.

ಇತ್ಯಾದಿ ವಿಷಯಗಳನ್ನು ಶೃತಪಡಿಸಿ ಕೆಲವು ದಿವಸ ಆನಂದದಿಂದ ಶಿವಪೂಜಾ ಲೋಲರಾಗಿದ್ದರು. ಬಳಿಕ ಮಹಾ ಶ್ರೀಗಳವರು ಇನ್ನು ನಮ್ಮ ಪ್ರಾಂತಕ್ಕೆ ಸವಾರಿ ಬೆಳೆಯಿಸಬೇಕೆಂದು ಆಲೋಚನೆ ಮಾಡುತ್ತಿರಲು, ಕಡೂರು ಡಿ|| ಚಿಕ್ಕಮಗಳೂರು ಟವನ್ ನಿವಾಸಿಗಳಾದ ವೀರಶೈವ ಮಂಡಲಿಯವರು ಈ ಮಹಾತ್ಮರನ್ನು ತಮ್ಮ ಗ್ರಾಮಕ್ಕೆ ದಯಮಾಡಿಸಿಕೊಳ್ಳಬೇಕೆಂದು ಸನ್ನಿಧಿಗೆ ಬಂದು, ಪ್ರಾರ್ಥನೆಮಾಡಿದರು. ಮಹಾಪಾದವು ಅವರ ಸದ್ಭಕ್ತಿಭಾವಗಳನ್ನರಿತು, ಸಂತೋಷದಿಂದ ಒಳ್ಳೇದು ಆಗಲಿ ದಯಮಾಡಿಸುವೆವೆಂದಪ್ಪಣೆಯಿತ್ತರು.

## ಚಿಕ್ಕಮಗಳೂರಲ್ಲಿ ಮಹೋತ್ಸವವು

ಆಕೂಡಲೇ ವೀರಶೈವ ಮಂಡಲಿಯವರು ತಿರುಗಿ ಬಂದು, ಮಹೋತ್ಸವವನ್ನು ನಿಶ್ಚಯಿಸಿ, ಕೆಳಗೆ ಕಾಣಿಸಿದಂತೆ ಪ್ರಸಿದ್ಧ-ಪತ್ರಿಕೆಗಳನ್ನು ಮುದ್ರಣಗೊಳಿಸಿ ಸರ್ವತ್ರ ಪ್ರಚಾರಮಾಡಿದರು.

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

### ಸುವರ್ಣ - ರಜತ ನಿರ್ಮಿತ

## ಆಂದೋಲನ ಮಹೋತ್ಸವಾಹ್ವಾನ ಪ್ರಸಿದ್ಧ ಪತ್ರಿಕೆ

ಶ್ರೀಮದ್ವೇದಾಗಮೋಪನಿಷತ್ಪ್ರತಿಪಾದಿತ ಶ್ರೀಮದ್ವೀರಶೈವ ಮಹಾಮತ ಸ್ಥಾಪನಾಚಾರ್ಯ, ಶ್ರೀಮದುಜ್ಜಯನೀ ಸದ್ಧರ್ಮ ಸಿಂಹಾಸನಾಧೀಶ್ವರ, ಶ್ರೀ ೧೦೮ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ಸ್ವಾರಿಯು ಕಡೂರ ಡಿ|| ಚಿಕ್ಕಮಗಳೂರು ಟವನ್ನಿಗೆ ತಾರೀಖು ೨೧-೨-೧೯೩೬ ನೇ ಭಾನುವಾರ ಪ್ರಾತಃಕಾಲ ೮ ಗಂಟೆಗೆ ಮಹೋತ್ಸವದಿಂದ ಚಿತ್ತೈಸುತ್ತಾರಾದ ಪ್ರಯುಕ್ತ ಸಮಸ್ತ ಮಹಾಶಯರುಗಳೂ ಪರಿವಾರ ಸಮೇತ ಆಗಮಿಸಿ, ಶ್ರೀ ಜ|| ಉತ್ಸವ ಶೇವಾಕಾರ್ಯದಲ್ಲಿ ಭಾಗಿಗಳಾಗಿ, ಶ್ರೀ ಸನ್ನಿಧಿಯ ದರ್ಶನಾಶೀರ್ವಾದವನ್ನು ಹೊಂದುವುದರ ಮೂಲಕ, ನಮ್ಮಗಳಿಗಾನಂದಗೊಳಿಸಬೇಕಾಗಿ ಸವಿನಯಪೂರ್ವಕ ಕೋರುತ್ತೇವೆ.

ಚಿಕ್ಕಮಗಳೂರು } ಸಿ. ಆರ್. ಮಹಂತಯ್ಯಶೆಟ್ಟರು, ಕಾಫಿ ಪ್ಲಾಂಟರ
(ಸ್ವಾಗತಸಂಘಾಧ್ಯಕ್ಷರು)

ಈ ಮೇರೆಗೆ ಸಕಲ ವಿಧವಾದ ಸಿದ್ಧತೆಮಾಡಿ, ತಾ. ೨೧-೧೨-೧೯೩೬ ಭಾನುವಾರ ದಿವಸ ಆಂದೋಲಿಕಾ ಮಹೋತ್ಸವದೊಡನೆ ಸಭಾಮಂಟಪಕ್ಕೆ ಬಂದು, ವಿಶ್ರಮಿಸಲು ಪದ್ಧತಿಪ್ರಕಾರ ಮುಂದಿನ ಕಾರ್ಯಭಾಗಗಳು ನಡೆದವು. ಮುಂದೆ ಆಲ್ಪಾ

ವಧಿಯಲ್ಲಿಯೇ ಪುನಃ ಹೊರಟು, ಮಹಾಸವಾರಿಯು ಉಜ್ಜಯಿನೀ ಮಹಾ ಸಂಸ್ಥಾನಕ್ಕೆ ಆಗಮಿಸಲಾಯಿತು.

## ಮಹಿಮಾ ಪ್ರಶಂಸೆ

ಈ ಗುರುಪುಂಗವರು—

ಬುಕ್ಕಾಂಬುಧಿ ಗಿರಿಯಲ್ಲಿ ತಪಸ್ಸಾಚರಿಸಿದುದೂ, ವಿರೋಧಿಗಳ ಗರ್ವಭಂಗವಾದುದೂ, ಬಾಲಕನಿಗೆ ಪ್ರಾಣದಾನಮಾಡಿ ಉದ್ಧರಿಸಿದ್ದೂ, ರಂಭಾಪುರೀ ಪೀಠಾಧಿಕಾರ ನೆರವೇರಿಸಿದುದೂ, ಬೇರೆ ಕೆಲವು ಮಹಿಮಾತಿಶಯ ಮುಂತಾದವುಗಳು ದೇಶದ ತುಂಬಾ ಹಬ್ಬಿದವು.

ಯಾವ ಗ್ರಾಮ, ಪುರ, ನಗರಾದಿಗಳಲ್ಲಿ ಹೋದರೂ ಈ ಉಜ್ಜಯಿನೀ ಮಹಾ ಶ್ರೀಗಳವರ ಗುಣಗಾನಗಳೇ ಕೇಳಿಸುತ್ತಿದ್ದವು. ಹಾಗು ಕೆಲವು ವಾರ್ತಾಪತ್ರಿಕೆಗಳಲ್ಲಿಯೂ ಪ್ರಸಿದ್ಧಮಾಡಲ್ಪಟ್ಟವು. ಈ ಮಹಾತ್ಮರನ್ನು ನಿಂದಿಸುವ ದುರ್ಜನರ ನಾಲಿಗೆಗಳು ಬಂದಾದವು. ಕೋರ್ಟು-ಕಚೇರಿಗಳಲ್ಲಿಯ ವ್ಯಾಜ್ಯಗಳು ದಿಗ್ವಿಜಯ ಹೊಂದಿದವು. ವೀರಶೈವ ಜನಾಂಗವು ಇವರ ದರ್ಶನ, ವಂದನ ಮಾಡಿಕೊಂಡು, ಫಲಾಶೀರ್ವಾದ ಪಡೆಯಲು ಆತುರವುಳ್ಳವರಾಗಿ ಮಹಾಪಾದ ಸನ್ನಿಧಿಗೆ ಬರುತ್ತಿರುವವರ ಸಂಖ್ಯೆಯು ಬೆಳೆಯಿತು.

ಭಕ್ತಪ್ರೇಮಿಗಳಾದ ಈ ಮಹಾನುಭಾವರು ಮಹಾ ಸಂಸ್ಥಾನದಲ್ಲಿ ಶಿವಪೂಜಾನಂದ ಲೋಲರಾಗಿರುತ್ತಿದ್ದರು.

---

## ಕೇದಾರ ಜಗದ್ಗುರುಗಳವರ ಮಹಾಸಮಾರಾಧನೆ ಮಾಡುವ ಪ್ರಯತ್ನ

ಮಹಾ ಶ್ರೀಗಳವರು ಆಗಂತುಕ ಭಕ್ತವೃಂದಕ್ಕೆ ಸದ್ಬೋಧಾಮೃತ ಬಿಂದುಗಳಿಂದ ತೃಪ್ತಿಪಡಿಸುತ್ತ ವಿಶ್ರಾಂತಿ ಹೊಂದಿರಲಾಗಿ, ಮತ್ತೊಂದು ಮಹಾಕಾರ್ಯದ ಪ್ರಯತ್ನವನ್ನು ನಡೆಯಿಸಿದರು. ಏನಂದರೆ—

ಹಿಮವತ್ಕೇದಾರ ವೈರಾಗ್ಯ ಪೀಠಾಧೀಶರಾದ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯರು ಬಹುದೂರ ದೇಶದಿಂದ ನಮ್ಮ ದೇಶಕ್ಕೆ ಆಗಮಿಸಿ, ನಮ್ಮ ಮಠದಲ್ಲಿ ಲಿಂಗೈಕ್ಯರಾಗಿ ೫-೬ ವರುಷಗಳಾದವು. ಅವರ ಕೈಲಾಸಾರಾಧನೆಯನ್ನು ನಾವು ಪೂರೈಸಿ, ಅವರ ಭಾರವನ್ನು ಇಳುಹಲಿಲ್ಲಾ. ಆದಷ್ಟು ಬೇಗನೆ ಈ ಕಾರ್ಯವನ್ನು ನೆರವೇರಿಸಬೇಕೆಂತಲೂ, ಈ ಸಮಾರಾಧನೆಯನ್ನು ಅಸಂಖ್ಯಾತ ಭಕ್ತ-ಮಾಹೇಶ್ವರ ಸಂತೃಪ್ತಿಯಿಂದ ಅತ್ಯದ್ಭುತವಾಗಿ ಜರಗುವಂತೆ ಮಾಡಬೇಕೆಂತಲೂ ದೃಢವಾದ ಸಂಕಲ್ಪಮಾಡಿದರು.

ಕೇದಾರ ಜಗದ್ಗುರುಗಳ ಮಹಾಸಮಾರಾಧನೆಯ ಕಾಲಕ್ಕೆ ಸಮ್ಮಿಲಿತರಾದ ಜಗದ್ಗುರುಗಳು



ಕೇ. ನೀಲಕಂಠಲಿಂಗ ಮಹಾಸ್ವಾಮಿಗಳು    ಉ. ಸಿದ್ಧಲಿಂಗ ಮಹಾಸ್ವಾಮಿಗಳು    ಕೇ. ಚಿದ್ಘನಲಿಂಗ ಮಹಾಸ್ವಾಮಿಗಳು

ಬಳಿಕ ಈ ಮಹಾಸಮಾರಾಧನೆಯನ್ನು ಜರಗಿಸಲು, ಸಮಸ್ತ ಶಿಷ್ಯ-ಪ್ರಶಿಷ್ಯ ಮಂಡಲಿಗೆ ಶೃತಪಡಿಸಿ, ಒಬ್ಬೊಬ್ಬರನ್ನು ಒಂದೊಂದು ಕಾರ್ಯಭಾಗಗಳಲ್ಲಿ ನಿಯಮಿಸಿ, ತಾವು ಕೂಡ ಸಂಕ್ಷೇಪ ಸರಕೀಟನಿಂದ ಸಮೀಪ ಪ್ರದೇಶದಲ್ಲಿ ಸಂಚರಿಸುತ್ತ ಅಕ್ಕಿ, ಗೋಧಿ, ಬೆಲ್ಲಾ, ಬೇಳೆ ಮುಂತಾದ ಭೋಜನ ಸಾಹಿತ್ಯಗಳನ್ನು ಮಹಾ ಸಂಸ್ಥಾನ ಮಠದಲ್ಲಿ ತಂದು ಹಾಕಿ, ಒಟ್ಟುಗೂಡಿಸಿರದು.

ಆಗ ಮತ್ತೊಂದು ಯೋಚನೆಯುಂಟಾಯಿತು. ಏನಂದರೆ— ಈ ಮಹಾ ಸಮಾರಾಧನೆಯ ಸಮಯಕ್ಕೆ ಅಪರಿಮಿತವಾಗಿ ಜನಸಂದಣಿಯು ಕೂಡಬಹುದು. ಇದೊಂದಕ್ಕೇ ಭೂರಿ ಅನ್ನಸಾಮಗ್ರಿಯು ಸುಮ್ಮನೆ ವ್ರಯವಾಗಿ ಹೋದರೆ ಪ್ರಯೋಜನವೇನು. ಅನಾಯಾಸದಿಂದ ಶ್ರೀ ಪಟ್ಟ-ಚರಾಧಿಕಾರಿಗಳೂ, ವಿದ್ವಾಂಸರೂ, ಭಕ್ತ ಮಾಹೇಶ್ವರರೂ ಬಂದುಸೇರುವರು. ಇದೇ ಸಮಯದಲ್ಲಿ ೫ ನೇ ಪಟ್ಟ-ಚರಾಧಿಕಾರಿಗಳ ಸಮ್ಮೇಲನವನ್ನು ಜರಗಿಸುವದು ತುಂಬಾ ಯೋಗ್ಯವಾಗುವದಲ್ಲದೆ, ಸಮಾಜ ಸುಧಾರಣೆಯ ಮಾರ್ಗಗಳನ್ನು ಸಕಲ ಜನಗಳಿಗೂ ತೋರಿಸಿಕೊಡಲು ಅತ್ಯಂತ ಸಹಾಯಕವಾಗುವದೆಂದು, ಈ ಸಮ್ಮೇಲನದ ಕಾರ್ಯಕ್ರಮಗಳ ಬಗ್ಗೆ ಕೆಲವು ಪ್ರಮುಖರನ್ನು ನಿಯಮಿಸಿದರು. ಮತ್ತು ಪ್ರಸಿದ್ಧಪತ್ರಿಕೆಗಳನ್ನು ಮುದ್ರಣಗೊಳಿಸಿ, ದೇಶದಲ್ಲಿ ಪ್ರಸಿದ್ಧಮಾಡಿಸಿದರು.

ಆ ಪ್ರಕಾರ ಅನೇಕ ಪ್ರದೇಶಗಳಿಂದ ಅಸಂಖ್ಯಾತ ಜನಸಂದಣಿಯು ಬಂದು, ಉಜ್ಜಯಿನೀ ಪುರವನ್ನು ಸೇರಿದರು. ಬಳ್ಳಾರಿ ಪ್ರಾಂತದಲ್ಲಿ ಸಂಚಾರ ನಡೆಯಿಸಿದ್ದ ಕೇದಾರ ಪೀಠದ ಶ್ರೀ ಜ॥ ನೀಲಕಂಠಲಿಂಗ ಶಿವಾಚಾರ್ಯರೂ ಹಾಗು ಶ್ರೀ ಜ॥ ಚರ ಪಟ್ಟಾಧ್ಯಕ್ಷ ಚಿದ್ಘನಲಿಂಗ ಶಿವಾಚಾರ್ಯರೂ ಸರ್ಕೀಟು ಸಿಬ್ಬಂದಿಯೊಡಗೂಡಿ, ಉಜ್ಜಯಿನಿಗೆ ದಯಮಾಡಿಸಿದರು.

ತಾ. ೨೪–೧೨–೧೯೩೬ ನೇ ದಿವಸ ಕೈ॥ ವಾ॥ ಕೇದಾರ ಪೀಠದ ವಿಶ್ವಲಿಂಗ ಶಿವಾಚಾರ್ಯರ ಗದ್ದುಗೆಯ ಮುಂಭಾಗದಲ್ಲಿ ಅತ್ಯಂತ ವಿಸ್ತಾರವಾಗಿ ನಿರ್ಮಿಸಲ್ಪಟ್ಟ ದೊಡ್ಡ ಪೆಂಡಾಲಿನೊಳಗೆ ಉದಯ ೧೦ ಗಂಟೆಯಿಂದ ಸಾಯಂಕಾಲ ೬ ಗಂಟೆಯವರೆಗೂ ಭೂರಿ ಅನ್ನಸಂತರ್ಪಣೆಯು ಬಹು ಸಂಭ್ರಮದಿಂದ ನಡೆಯಿತು. ೫೫-೫೦ ಸಹಸ್ರ ಜನಸಮೂಹವು ಮಹಾಪ್ರಸಾದ ಸ್ವೀಕಾರಮಾಡಿ, ಆನಂದಾಂಬುಧಿಯಲ್ಲಿ ತೇಲಾಡಿದರು.

ಆಹಾ! ಆ ಸುದಿನದ ಸಂಭ್ರಮವನ್ನು ಎಷ್ಟು ಬಣ್ಣಿಸಿದರೂ ತಿರದು. ಎಲ್ಲಿ ನೋಡಿದರೂ ಗಣಸಮೂಹ! ಎತ್ತ ನೋಡಿದರೂ ಶಿವಭಕ್ತ ಮಂಡಲಿ! ಭಜನಾ ಸಂಘದವರ ಗಾಯನಗಳೂ, ಡೊಳ್ಳು, ಕರಡಿಮಜಲಿನವರೂ, ಎಲ್ಲಿ ನೋಡಿದರೂ ಶ್ರೀ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳವರ ಗುಣಗಾನಗಳೂ ನಡೆದಿದ್ದವು. ಈ ಸಮಾರಂಭಕ್ಕೆ ೫೦ ಸಾವಿರ ಜನಸಂದಣಿ ಕೂಡಿತ್ತು.

## ಮಹಾಸಭೆಯಲ್ಲಿ ಶ್ರೀ ಜ॥ಗಳವರ ಆನಂದ ಭಾಷಣ

ತರುವಾಯ ಸಾಯಂಕಾಲ ೬ ಗಂಟೆಗೆ ಆ ಭವ್ಯವಾದ ಪೆಂಡಾಲಿನಲ್ಲಿ ಶೃಂಗರಿಸಲ್ಪಟ್ಟ ಸಿಂಹಾಸನದಲ್ಲಿ ತ್ರಿಜಗದ್ಗುರುಗಳವರೂ ಮೂರ್ತಮಾಡಿದರು. ೨-೩ ನೂರು ಪಟ್ಟ-ಚರಾಧಿಕಾರಿಗಳೂ, ಪಂಡಿತರೂ, ಶಾಸ್ತ್ರಿಗಳೂ, ಪದವೀಧರರೂ, ಶೆಟ್ಟರೂ, ಶ್ರೀಮಂತರೂ ಮೊದಲಾದ ಪ್ರಮುಖಸಂದಣಿ ಅಸಂಖ್ಯಾತವಾಗಿ ಬಂದು ಸೇರಿದರು. ಮಹಾಸಮುದ್ರದಂತೆ ತೋರುವ ಸಭಾಸದರು ವಿನಯ-ಭಯ-ಭಕ್ತಿಯಿಂದ ಮಹಾತ್ಮರ ಪ್ರಸಾದವಾಣಿಯಿಂದ ಏನಪ್ಪಣೆಯಾಗುವದೋ ಕೇಳಿ ಧನ್ಯರಾಗಬೇಕೆಂದು ಅನಿಮಿಷ ದೃಷ್ಟಿಯಿಂದ ನಿರೀಕ್ಷಿಸುತ್ತಿದ್ದರು.

ಪ್ರಥಮದಲ್ಲಿ ಮೈಸೂರಿಂದ ಬಂದ ವೇದಪಾಠಕರು ಸುಸ್ವರದಿಂದ ವೇದಘೋಷವನ್ನು ಮಾಡಿದರು. ಬಳಿಕ ಆಸ್ಥಾನ ಪಂಡಿತರ ೧-೨ ಭಾಷಣಗಳಾದವು. ತರುವಾಯ ಉಜ್ಜಯಿನೀ ಮಹಾ ಶ್ರೀಗಳವರು ಉಪನ್ಯಾಸ ಮಾಡಲು ಮೇಲಕ್ಕೆದ್ದು ನಿಂತರು. ಆಕೂಡಲೇ ಮಹಾಸಾಗರದಂತೆ ತೋರುವ ಜನಸಮೂಹವು ಸಹಾ ಎದ್ದು ನಿಂತುಕೊಂಡರು. ಆಗ ಮಹಾತ್ಮರು— “ಸಹಸ್ರ ಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್” ಎಂಬ ವೇದ ವಾಕ್ಯದಮೇಲೆ ಲೌಕಿಕ, ಪಾರಮಾರ್ಥಿಕ ದೃಷ್ಟಾಂತಗಳೊಡನೆ ಅತ್ಯುತ್ತಮವಾಗಿ ಭಾಷಣಮಾಡುತ್ತ ಮಹಾಶಯರೇ, ಇಂದಿಗೆ ನಾನೇ ಪರಮ ಭಾಗ್ಯಶಾಲಿಯೆಂದು ಹೇಳುವೆನು. ಏಕಂದರೆ ನಿಮಗೆ ಒಬ್ಬ ತಾಯಿ, ಒಬ್ಬ ತಂದೆಗಳಿರುವರು. ಆದರೆ ನನಗೆ ಜಗತ್ತಿನಲ್ಲಿರುವ ಸ್ತ್ರೀ-ಪುರುಷರೆಲ್ಲರೂ ತಾಯಿ ತಂದೆಗಳಾಗಿರುವರು. ಹೀಗೆ ಬಹು ಜನ ತಂದೆ ತಾಯಿಗಳುಳ್ಳ ನಾನೇ ಧನ್ಯನು. ತಾವೆಲ್ಲಲರೂ ನನ್ನ ಮೇಲಿನ ಪ್ರೇಮಾತಿಶಯದಿಂದ ಇಲ್ಲಿಗೆ ಆಗಮಿಸಿರುವದರಿಂದ ಅತ್ಯಾನಂದವಾಗಿದೆ. (ಕೈಚಪ್ಪಾಳೆ) ತಾವೆಲ್ಲರೂ ನನಗೆ ಮಹಾಸ್ವಾಮಿ ಪದಪ್ಪ ಕೊಟ್ಟು, ಈ ಸದ್ಧರ್ಮ ಸಿಂಹಾಸನದಲ್ಲಿ ಕೂಡ್ರಿಸಿದಿರಿ. ಮತ್ತು ಆಗಾಗ್ಗೆ ಪಲ್ಲಕ್ಕಿ ಮಹೋತ್ಸವಾದಿಗಳಲ್ಲಿ ಬಹು ಸಂಭ್ರಮದಿಂದ ಮೆರೆಯಿಸುವಿರಿ. ಹಾಗು ಪರಮ ಭಕ್ತಿ-ವಿಶ್ವಾಸಗಳಿಂದ ಶಿವಪೂಜಾ ಮಾಡಿಸಿ, ಮೃಷ್ಟಾನ್ನ-ಪಾನಾದಿಗಳಿಂದ ತೃಪ್ತಿ ಪಡಿಸುವಿರಿ. ಧನ, ಧಾನ್ಯರೂಪವಾದ ಸೇವಾದಿಗಳಿಂದಲೂ ಬಹು ಮನ್ನಣೆಮಾಡುವಿರಿ. ಅಂದಮೇಲೆ ನಿಮ್ಮೆಲ್ಲರ ಪ್ರೇಮಾದರಗಳಿಗೆ ಪಾತ್ರನಾದ ನಾನೇ ಪರಮ ಭಾಗ್ಯವಂತನು. ಈ ರೀತಿ ಬಹುಪರಿಯಿಂದ ನನ್ನನ್ನು ಪರಿಪೋಷಿಸುತ್ತಿರುವ ನಿಮ್ಮೆಲ್ಲರಿಗೂ ಆ ಪರಶಿವನು ಸದಾವಕಾಲ ಆಯುರಾರೋಗ್ಯಾದಿಸುಖಪರಂಪರೆಗಳನ್ನಿತ್ತು ಕಾಪಾಡಲಿ ಎಂದು ಹಾರೈಸುತ್ತೇವೆ. (ಕೈಚಪ್ಪಾಳೆಗಳು)

ಈ ಪ್ರಕಾರ ಅಪ್ಪಣೆಕೊಡಿಸುತ್ತಲೇ ನೇತ್ರಗಳಲ್ಲಿ ಆನಂದಾಶ್ರುಗಳು ತುಂಬಿ ಹೊರಸೂಸಿದವು. ಮಹಾಸಭಿಕರಿಗೂ ಪರಮಾನಂದ ಉಕ್ಕೇರಿ ಜಯಘೋಷವನ್ನು ಮಾಡುತ್ತಾ ಆಗಾಗ್ಗೆ ಕೈಚಪ್ಪಾಳೆಯನ್ನು ಹೊಡೆಯುತ್ತಿದ್ದರು. ತರುವಾಯ ಕೇದಾರ

ಜ|| ಪೀಠಾಧೀಶರಾದ ಶ್ರೀ ನೀಲಕಂಠಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮ ವಿದ್ವದ್ವಾಣಿಯಿಂದ ಕೆಲಹೊತ್ತು ಅತ್ಯಮೌಲ್ಯವಾದ ಭಾಷಣವನ್ನು ಮಾಡಿ, ಸರ್ವರ ಮನಸ್ಸಿಗೆ ಪರಿಣಾಮವಾಗುವಂತೆ ತಿಳಿಸಿಹೇಳಿದರು. ಅಷ್ಟಕ್ಕೆ ರಾತ್ರಿ ೧೦ ಗಂಟೆಯಾಗಲು, ಆ ದಿವಸದ ಕಾರ್ಯಕ್ರಮಗಳು ಸಮಾಪ್ತಿಯಾದವು. ಪುನಃ ಸಭೆ ಕರೇ, ನಾಳಿನ ದಿವಸ ಉದಯ ೮ ಗಂಟೆಯಿಂದ **೫ ನೇ ಪಟ್ಟ-ಚರಾಧಿಕಾರಿಗಳ** ಸಮ್ಮೇಲನ ಕಾರ್ಯವು ಜರಗುತ್ತದೆ. ಆದ್ದರಿಂದ ತಾವೆಲ್ಲರೂ ಸಭೆಗೆ ತಪ್ಪದೆ ಬರಬೇಕೆಂದು ಅಪ್ಪಣೆಯಾಯಿತು. ಅದಕ್ಕೆ ಸರ್ವರೂ ಅನುಮೋದನ ರೂಪದಿಂದ ಶ್ರೀ ಜಗದ್ಗುರು ಪಂಚಾಚಾರ್ಯ ಮಹಾರಾಜಕೀ ಜೈ, ಎಂಬ ಜಯಘೋಷದಿಂದ ಸಭಾ ವಿಸರ್ಜನೆಮಾಡಿದರು.

---

## ೫ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನವು

ತಾರೀಖು ೨೫—೧೨—೧೯೩೬ ನೇ ದಿವಸ ಉದಯಕ್ಕೆ ಅತ್ಯಂತ ವಿಶಾಲವಾದ ಸಭಾಮಂಟಪದೊಳು ಭದ್ರಾಸನದಲ್ಲಿ ಜ|| ಮಹಾಶ್ರೀಗಳವರೂ ಕೇದಾರ ಪೀಠದ ಉಭಯ ಜಗದ್ಗುರುಗಳವರೂ ಆಗಮಿಸಿ ಮೂರ್ತಮಾಡಿದರು. ಇವರ ಸುತ್ತಲೂ ಹಾಗು ಮುಂಭಾಗದಲ್ಲಿ ಅನೇಕ ಪಟ್ಟಚರಾಧಿಕಾರಿಗಳೂ ಆಸ್ಥಾನಪಂಡಿತರೂ ಶಾಸ್ತ್ರಿಮಂಡಲಿಯೂ ಮಠಾಧಿಕಾರಿಗಳೂ ಸಮಾಜಪ್ರಮುಖರೂ. ಗುರುಭಕ್ತಿಪರಾಯಣರೂ ಬಂದು ಸಭಾಮಂದಿರವೆಲ್ಲಾ ತುಂಬಿ ತುಳುಕುವಂತೆ ವಿಶ್ರಮಿಸಿದರು. ಅನಂತ ವಿದ್ಯಾರ್ಥಿಗಳಿಂದ ವೇದಮಂತ್ರೋಚ್ಚಾರವೂ ಸಂಗೀತಗಾರರಿಂದ ಮಹಾ ಗುರುಸ್ತವನರೂಪಗಾಯನವೂ ನಡೆದವು.

ತರುವಾಯ ರಂಭಾಪುರೀ ಮಹಾಸಂಸ್ಥಾನದ ಏಜಂಟ ಎಚ್. ಎಮ್. ರಾಘವಾಂಕಪ್ಪಯ್ಯನವರು ಈ ದಿವಸ ಜರಗುವ ೫ ನೇ ಪ| ಚ| ಗಳ ಸಮ್ಮೇಲನದ ಅಧ್ಯಕ್ಷಸ್ಥಾನವನ್ನು ಮಹಾರಾಷ್ಟ್ರ ದೇಶದಿಂದಾಗಮಿಸಿರುವ ಪೂಜ್ಯರೂ ವಿದ್ಯಾವಂತರೂ ಆದಂಥ ಬಾರಸಿನಗರದ ಪರಾಂಡಕರಮಠದ ಶ್ರೀ ಪಟ್ಟದ ರಾಚಲಿಂಗಸ್ವಾಮಿಗಳವರಿಗೆ ಸರ್ವಾನುಮತದಿಂದ ಆರಿಸಿ ಕೊಟ್ಟಿರುತ್ತದೆ ಎಂದು ಸೂಚನೆಮಾಡಿ ನುಡಿದರು. ಅದಕ್ಕೆ ಸರ್ವರೂ ಚಪ್ಪಳೆಯನ್ನಿೀಯಲು, ಇವರ ಸೂಚನೆಯನ್ನಂಗೀಕರಿಸಿ ಬಾರ್ಶಿ ಪಟ್ಟದ ಶ್ರೀಗಳವರು ಬಂದು ಅಧ್ಯಕ್ಷಸ್ಥಾನವನ್ನಲಂಕರಿಸಿದ ಬಳಿಕ ಮಹಾರಾಷ್ಟ್ರ ಭಾಷೆಯಲ್ಲಿ ವೀರಶೈವ ಮತದ ಪ್ರಾಶಸ್ತ್ಯ, ಗುರುವರ್ಗೋದ್ಧಾರ, ಸಮಾಜೋದ್ಧಾರ ವಿಷಯಗಳಮೇಲೆ ಭಾಷಣಮಾಡಿದರು.

ಬಳಿಕ ಅನೇಕ ವಿದ್ವಾಂಸರೂ ಪಟ್ಟಚರಾಧಿಕಾರಿಗಳೂ ಶಾಸ್ತ್ರಿಗಳೂ ತಮ್ಮ ವಿದ್ವತ್ಕುಶಲತೆಯಿಂದ ವೀರಶೈವಮತಪ್ರಾಚೀನತೆ, ಸಮಾಜ ಸುಧಾರಣೋಪಾಯ,

ಗುರುವರ್ಗದವರ ಐಕ್ಯತೆ, ಪಟ್ಟಚರಾಧಿಕಾರಿಗಳ ಕರ್ತವ್ಯ ಮುಂತಾದ ವಿಷಯಗಳ ಮೇಲೆ ಚನ್ನಾಗಿ ಭಾಷಣ ಮಾಡಿದರು.

## ಪಂಚಾಚಾರ್ಯಪ್ರಭಾ ಪತ್ರಿಕೋದಯಃ

ತರುವಾಯ ಉ. ಜ. ಮಹಾಶ್ರೀಗಳವರು ಅಪ್ಪಣೆ ಕೊಡಿಸಿದ್ದು—

ಸಭಿಕಮಹಾಶಯರೇ, ನೀವೆಲ್ಲರೂ ಬಹು ಶ್ರದ್ಧೆಯಿಂದ ಕೇದಾರ ಜಗದ್ಗುರುಗಳವರ ಸಮಾರಾಧನಾ ಕಾರ್ಯವನ್ನು ಪೂರೈಸಿದಿರಿ. ಮತ್ತು ೫ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನಾಕಾರ್ಯವನ್ನು ಕೊನೆಗಾಣಿಸಿ ಯಶೋಭಾಗಿಗಳಾದಿರಿ.

ಆದರೆ ಕಲಿಪ್ರಭಾವದಿಂದ ಈಚೆಗೆ ಜಗದ್ಗುರು ಪಂಚಪೀಠಗಳು ಹಾಗು ಪಟ್ಟಚರಾಧಿಕಾರಿಗಳೂ ಮಠಾಧಿಕಾರಿಗಳೂ ಶಿಷ್ಯಪ್ರಶಿಷ್ಯಸಮೂಹವೂ ವಿದ್ಯಾರಹಿತರಾಗಿ ಆತ್ಮಸ್ವರೂಪ ತಿಳಿಯದೆ ಹೀನ-ದೀನಾವಸ್ಥೆಯಲ್ಲಿ ಅಜ್ಞಾನಾಂಧಕಾರದಲ್ಲಿ ಬಳಲುತ್ತಿರುವರು. ಇನ್ನಾದರೂ ಸರ್ವರೂ ನಮ್ಮ ಮತಸ್ವರೂಪವೇನು, ನಮ್ಮ ಗುರುಗಳಾರು, ನಮ್ಮ ಧರ್ಮಕರ್ಮಗಳಾವು ಎಂಬ ವಿವರಗಳನ್ನು ತಿಳುಹಿಸಿಕೊಡಲಿಕ್ಕೆ ಒಂದು ವಾರ್ತಾಪತ್ರಿಕೆಯು ಅತ್ಯವಶ್ಯವಾಗಿ ಬೇಕಾಗಿದೆ. ತದ್ವಾರಾ ಅನಂತಾನಂತ ಸದ್ವಿಷಯಗಳನ್ನು ತಿಳುಹಿಸುವದಕ್ಕೆ ಮೈಸೂರು ಮಹಾರಾಜರ ಆಸ್ಥಾನ ವಿದ್ವಾನ ವೇ॥ ಶಿರಸಿ ಗುರುಶಾಂತಶಾಸ್ತ್ರಿಗಳು ಸಂಪಾದಕರಾಗಿಯೂ, ವೇ॥ ಪಂ॥ ಕಾಶೀನಾಥ ಶಾಸ್ತ್ರಿಗಳು ಚಾಲಕರಾಗಿಯೂ ಮುಂದೆ ಚಿರಕಾಲ ಪತ್ರಿಕೆಯನ್ನು ನಡೆಯಿಸಿಕೊಂಡು ಹೋಗಲಿಕ್ಕೆ ಏರ್ಪಾಟ ಮಾಡಿದ್ದಾಗಿದೆ. ಮತ್ತು ಆ ಪತ್ರಿಕೆಯು "ಪಂಚಾಚಾರ್ಯ ಪ್ರಭಾ" ಎಂಬ ಶುಭನಾಮಾಂಕಿತದಿಂದ ಸರ್ವರ ಕರಕಮಲದಲ್ಲಿ ವಿರಾಜಿಸುವಂತೆ ಮಾಡಬೇಕಾಗಿದೆ. ಈ ಪತ್ರಿಕೆಯು ನಿರಾತಂಕವಾಗಿ ನಡೆಯುವದಕ್ಕೆ ಮೊದಲು ಒಂದು ಮುದ್ರಣಾಲಯವು ಅತಿ ಶೀಘ್ರವಾಗಿ ಬೇಕಾಗುವುದು. ಇದನ್ನು ಖರೀದಿ ಮಾಡಲು ಧನಸಂಗ್ರಹವು ಬೇಕಾಗಿದೆ. ಆದುದರಿಂದ ನೀವುಗಳೆಲ್ಲರೂ ನಿಮ್ಮನಿಮ್ಮ ಯೋಗ್ಯತೆಮೀರಿ ಧನಸಹಾಯವನ್ನು ಈಗ ವಾಗ್ದಾನಮಾಡಿರಿ. ಈ ಘನವಾದ ಕಾಯಕ್ಕೆ ಅನುಮಾನ ಮಾಡಬೇಡಿರಿ. ಈ ಸಮಯದಲ್ಲಿ ನಾವು ಮೊದಲು ಐದು ಸಾವಿರ ರೂಪಾಯಿಗಳನ್ನು ಕೊಡಲು ವಾಗ್ದಾನ ಮಾಡಿದ್ದೇವೆ. ಸರ್ವರೂ ಗ್ರಹಿಸತಕ್ಕದ್ದು. ಇನ್ನುಳಿದವರು ಈಗಲೇ ವಾಗ್ದಾನಮಾಡಿ ನಿಮ್ಮ ಹೆಸರು ಬರೆಯಿಸಿರಿ. ಹೀಗೆಂದು ಅಮೃತವಾಣಿಯಿಂದ ನುಡಿದುದನ್ನು ಕೇಳಿ ಸಭಿಕರು ಆನಂದೋಲ್ಲಾಸ ಭರಿತರಾದರು.

ಆನಂತರ ಶ್ರೀ ರಂಭಾಪುರೀ ಪೀಠದ ಏಜಂಟ ಶ್ರೀ ರಾಘವಾಂಕಪ್ಪಯ್ಯನವರು ಐದು ಸಾವಿರ ರೂಪಾಯಿ ಕೊಡಲೊಪ್ಪಿದರು. ಹಾಗು ಕೇದಾರಪೀಠದ ಜ॥ ನೀಲಕಂಠಲಿಂಗಶಿವಾಚಾರ್ಯರು ಐದು ಸಾವಿರ ರೂಪಾಯಿ ಕೊಲೊಪ್ಪಿದರು. ಬಳಿಕ

ಇನ್ನುಳಿದ ಪಟ್ಟಚರಾಧಿಕಾರಿಗಳೂ ಶ್ರೀಮಂತರೂ ಸಾವಕಾರ ಮುಂತಾದವರು ತಮ್ಮ ಯೋಗ್ಯತಾನುಸಾರವಾಗಿ ವಾಗ್ದಾನಮಾಡಿ ಬರೆದರು. ಒಟ್ಟಿಗೆ ೨೦—೨೫ ಸಾವಿರ ಧನಸಂಗ್ರಹವಾಯಿತು.

( ಇದರ ವಿವರವನ್ನು ತಾರೀಖು ೧೬—೫—೧೯೨೭ ನೇ ಪಂಚಾಚಾರ್ಯ ಪ್ರಭಾ ಪತ್ರಿಕೆಯಲ್ಲಿ ನೋಡಿರಿ )

### ಸರ್ವಾನುಮತದಿಂದ ಪಾಸಾದ ಠರಾವುಗಳು—

೧. ಭರತಖಂಡದಲ್ಲಿರತಕ್ಕ ಸಮಸ್ತ ಗುರುವರ್ಗದವರೂ ಯಾವ ಭೇದಗಳಿಲ್ಲದೆ ಐಕ್ಯದಿಂದಿರತಕ್ಕದ್ದು.

೨. ಗುರುವರ್ಗದವರು ಷೋಡಶಕರ್ಮಗಳನ್ನು ಶಾಸ್ತ್ರೋಕ್ತಪ್ರಕಾರ ನಡೆಯಿಸತಕ್ಕದ್ದು.

೩. ದೇಶಮಧ್ಯ ಅಲ್ಲಲ್ಲಿ ಗುರುವರ್ಗದವರ ಸುಧಾರಣೆಯ ಸಲುವಾಗಿ ಸಂಸ್ಕೃತ, ವೈದಿಕ ಪಾಠಶಾಲೆಗಳನ್ನು ಸ್ಥಾಪಿಸಿ ನಡೆಯಿಸುವದು.

೪. ವೀರಶೈವರ ಗುರುವರ್ಗ, ಶಿಷ್ಯವರ್ಗೋದ್ಧಾರಕ್ಕಾಗಿ ವರ್ತಮಾನಪತ್ರವಿಲ್ಲ; ಆದ್ದರಿಂದ “ ಪಂಚಾಚಾರ್ಯಪ್ರಭಾ ” ಎಂಬ ಪತ್ರಿಕೆಯನ್ನು ಹೊರಡಿಸಲು ಪ್ರಿಂಟಿಂಗ ಪ್ರೆಸ್ಸಿಗೆ ಧನಸಹಾಯ ಮಾಡತಕ್ಕದ್ದು.

೫. ಈ ಪತ್ರಿಕೆ ಹೊರಡಿಸಲು ಉಜ್ಜಯಿನಿ, ಕೇದಾರ, ರಂಭಾಪುರಿ ಪೀಠದ ಜಗದ್ಗುರುಗಳವರು ಐದೈದು ಸಾವಿರ ರೂಪಾಯಿಗಳನ್ನು ಸಹಾಯಮಾಡಿದ್ದರಿಂದ ಅವರ ಅಭಿನಂದನ ಮಾಡತಕ್ಕದ್ದು.

೬. ಪಟ್ಟಚರಾಧಿಕಾರವನ್ನು ವಹಿಸತಕ್ಕವರು ಪೀಠಾಚಾರ್ಯರ ಅನುಮತಿಯನ್ನು ಪಡೆಯಬೇಕೆಂದೂ ಜಗದ್ಗುರುಗಳವರಿಗೆ ತಿಳಿಸದೆ ಮಾಡಿದ್ದಾದರೆ ಅದಕ್ಕೆ ಯಾರೂ ಗಮನಕೊಡಬಾರದೆಂದೂ ಅಧಿಕಾರಿಗಳು ಧರ್ಮಶಾಸ್ತ್ರವನ್ನು ಅರಿತಿರಬೇಕೆಂದೂ ಚಿಕ್ಕವಯಸ್ಸಿನಲ್ಲಿ ಪಟ್ಟಗಟ್ಟಬಾರದೆಂದೂ ವಿರೋಧದಿಂದ ಎರಡು ಅಧಿಕಾರಿಗಳನ್ನು ಮಾಡಬಾರದೆಂದೂ ಈ ಸಮ್ಮೇಲನವು ನಿರ್ಧರಿಸುತ್ತದೆ.

೭. ವೀರಶೈವ ಮತೋದ್ಧಾರಕ್ಕಾಗಿ ಆಗಾಗ್ಗೆ ಶ್ರೀ ಪಂಚಾಚಾರ್ಯರ ಸಮ್ಮೇಲನ ಮಾಡಲು ಸರ್ವರೂ ಗಮನಕೊಡತಕ್ಕದ್ದು.

೮. ಒಬ್ಬರ ಶಿಷ್ಯರ ಮನೆಗಳನ್ನು ಮತ್ತೊಬ್ಬರು ಹರಣಮಾಡುವಂಥ ಗುರುಸ್ಥಲದವರ ವಿಷಯದಲ್ಲಿ ಜಗದ್ಗುರುಗಳವರು ಯೋಗ್ಯಶಾಸನಗಳನ್ನು ಮಾಡಬೇಕೆಂದೂ ಆ ಶ್ರೀ ಜಗದ್ಗುರುಗಳವರನ್ನು ಈ ಸಮ್ಮೇಲನವು ಪ್ರಾರ್ಥಿಸುತ್ತದೆ.

೯. ಪರಳಿ ಪ್ರಕರಣದ ಸಂಬಂಧವಾಗಿ ನಿಜಾಂ ಸರಕಾರವು ಈವರೆಗೂ ಯಾವ ಹುಕುಂ ಮಾಡದೆ ಇರುವದರಿಂದ ಶೀಘ್ರವಾಗಿ ವ್ಯವಸ್ಥೆಗೊಳಿಸಬೇಕೆಂದು ಈ ಸಮ್ಮೇಲನವು ನಿರ್ಧರಿಸುತ್ತದೆ.

ಸಮ್ಮೇಲನಾಧ್ಯಕ್ಷರು,

ಶ್ರೀ ಷ॥ ಬ್ರ॥ ರಾಜಲಿಂಗಸ್ವಾಮಿ ಘರಾಂಡಕರಮಠ,

ಬಾರ್ಶಿ, ಮು॥ ಉಜ್ಜಯಿನಿ.

ಈ ಸಮಾರಂಭದಲ್ಲಿ ಕೂಡಿದ ಮುಖ್ಯರಾದ ಕೆಲವು ಪಟ್ಟಿಚರಾಧಿಕಾರಿಗಳ, ಶಾಸ್ತ್ರಿಗಳ ವಿವರ—

೧. ಬೆಣ್ಣಿಹಳ್ಳಿ ಹಿ। ಮ। ಪಟ್ಟದಸ್ವಾಮಿಗಳು ( ಪುರಾಣವಾಚಸ್ಪತಿ)
೨. ಚೋರನೂರು ಹಿ। ಮ। ಪಟ್ಟದ ವೀರಭದ್ರಸ್ವಾಮಿಗಳು
೩. ಹರಪನಹಳ್ಳಿ ಗು। ಮ। ಪಟ್ಟದಸ್ವಾಮಿಗಳು
೪. ಸೂಡಿ ಹಿ। ಮ। ಪಟ್ಟದ ಉಮಾಪತಿಸ್ವಾಮಿಗಳು
೫. ಅಸಗೋಡು ಹಿ। ಮ। ಪಟ್ಟದ ರುದ್ರಮುನಿ ಶಿವಾಚಾರ್ಯರು
೬. ಮೊಳಕಾಲ್ಮುರವು ಹಿ। ಮ। ಪಟ್ಟದಸ್ವಾಮಿಗಳು
೭. ಆನೆಸಿದ್ದಾಪುರ ಹಿ। ಮ। ಪಟ್ಟದಸ್ವಾಮಿಗಳು
೮. ಕೊಟ್ಟೂರು ಹಿ। ಮ। ಭೂತಭುಜಂಗಸ್ವಾಮಿಗಳು
೯. ಕಾಮಿನಾಳು ಶ್ರೀಗಳು, ಮೋಕೇ ಶ್ರೀಗಳು, ಕುಡತಿನಿ ಶ್ರೀಗಳು
೧೦. ಉಜ್ಜಯಿನೀ ಬಿ. ಎಂ. ಗುರುಸಿದ್ಧಶಾಸ್ತ್ರಿಗಳು
೧೧. ಉಮಚಿಗಿ ಮಳೆಮಠದ ವೇ। ಪಂ। ಶಂಕರಶಾಸ್ತ್ರಿಗಳು
೧೨. ಕೊಂಗವಾಡ ಹಿ। ಮ। ವೀರಭದ್ರಶಾಸ್ತ್ರಿಗಳು
೧೩. ಸುಣಕಲ್ಲು ಬಿದರಿ ಆ। ಮ। ಪಂ। ಬಸವಲಿಂಗಶಾಸ್ತ್ರಿಗಳು
೧೪. ,, ,, ಪಂ। ಹರೀಶ್ವರ ಶಾಸ್ತ್ರಿಗಳು
೧೫. ಮೈಸೂರು ಆಸ್ಥಾನ ವಿದ್ವಾನ್ ಶಿರಸಿ ಗುರುಶಾಂತಶಾಸ್ತ್ರಿಗಳು
೧೬. ನಾಗನೂರು ಹಿ। ಮ। ವೇ। ಪಂ। ಕಾಶೀನಾಥಶಾಸ್ತ್ರಿಗಳು
೧೭. ಚಿಗಟೇರಿ ಉ। ಮ। ಮರುಳಸಿದ್ಧಶಾಸ್ತ್ರಿಗಳು
೧೮. ಕೊಟ್ಟೂರು ಕೆಂ। ಮ। ಗುರುಬಸವಶಾಸ್ತ್ರಿಗಳು
೧೯. ಹಿರೇಹಡಗಲಿ ಪು। ಮ। ವಿರೂಪಾಕ್ಷಶಾಸ್ತ್ರಿಗಳು
೨೦. ಶಿರೋಳ ಹಿ। ಮ। ಪಂಚಾಕ್ಷರಶಾಸ್ತ್ರಿಗಳು
೨೧. ಹಳ್ಳೂರು ವೇ। ಓಂಕಾರಶಾಸ್ತ್ರಿಗಳು
೨೨. ಹರಪನಹಳ್ಳಿ ಗು। ಮ। ನೀಲಕಂಠಶಾಸ್ತ್ರಿಗಳು

ಈ ಪ್ರಕಾರ ಸಮಸ್ತ ಕಾರ್ಯಭಾಗಗಳನ್ನು ಅಸಾಧಾರಣ ವೈಭವದಿಂದ ನೆರವೇರಿಸಿ "ನ ಭೂತೋ-ನ ಭವಿಷ್ಯತಿ" ಎಂಬತೆ ಮಾಡಿದರು. ಆ ಸಮಯದಲ್ಲಿ ಕೂಡಿದ ಸರ್ವರೂ ತುಂಬಾ ಸಂತೋಷಭರಿತರಾಗಿ ಫಲಾಶೀರ್ವಾದಗಳನ್ನು ಪಡೆದು ಉಜ್ಜಯಿನೀ ಜ। ಮಹಾಸ್ವಾಮಿಗಳವರನ್ನು ಕೊಂಡಾಡುತ್ತ ತಮ್ಮ ತಮ್ಮ ಗ್ರಾಮಗಳಿಗೆ ತೆರಳಿದರು.

( ಸ್ತೋತ್ರ )

ವೃ॥ ಶ್ರೀ ರಂಭಾಪುರ ಪುಣ್ಯಭೂಮಿ ವಿಲಸಚ್ಛ್ರೀವೀರಪೀಠಂಪರಂ ।
ತಚ್ಛೂನ್ಯಂ ಪ್ರಭುಣಾ ವಿಲೋಕ್ಯ ಗುರುರಾಟ್ಸದ್ಧರ್ಮ ಪೀಠಾಧಿಪಃ ॥
ಕರ್ತುಂನಾಥಯುತಂ ಚರನ್ಪರಿಚರೈರ್ವಿಘ್ನಾಘಘೂಕಾನ್ಪಥಿ ।
ಯೋತ್ಯಂತೋಗ್ರತಪಾಃ ಪ್ರಭಾಕರಯಿವಸ್ವಾಜೋಬಲಾದಾಹರನ್ ॥೧॥

ಮಾರ್ಗೆ ಗ್ರಾಮಪುರಸ್ಥ ಶೈವನಿವಹೈಸ್ಸಂಪೂಜಿತಃ ಸಾದರಂ ।
ಘೋರಾರಣ್ಯ ವಿರಾಜಮಾನ ಮನಘಂ ಸಂಪ್ರಾಪ್ಯ ರಂಭಾಪುರಂ ॥
ಶ್ರೀಮದ್ರೇಣುಕ ದೇಶಿಕೇಂದ್ರ ಕೃಪಯಾ ಸಂಪ್ರಾಪ್ತಸಲ್ಲಕ್ಷಣಂ ।
ವಿದ್ವಾಂಸಂಪ್ರಸಮೀಕ್ಷ್ಯ ಸದ್ಗುರು ಕುಲೋತ್ಪನ್ನಂ ವಟುಂಚಾದರಾತ್ ॥೨॥

ಸ್ವೀಕುರ್ವನ್ನೃಪ ವೀರಶೈವ ನಿಕರೈಃ ಶ್ರೀ ವೀರಪೀಠಾಧಿಪಂ ।
ಕೃತ್ವಾಭ್ಯಸ್ತತರಾಂ ಶಿವಾಂ ಪರತರಾಂ ವಿದ್ಯಾಂಚ ಸಂಕೀರ್ತಯನ್ ॥
ಚಕ್ರೇವಿಶ್ವಗುರುಂ ಸುಮಂಗಲ ಶಿವಾನಂದಾಖ್ಯಮಾಲಂ ಕೃತಂ ।
ತಂ ವಂದೆ ಗುರು ಸಿದ್ಧಲಿಂಗ ಯತಿಪಂ ಸ್ವಾಭೀಷ್ಟಸಂಸಿದ್ಧಯೇ ॥೩॥

ಎಂಬಲ್ಲಿಗೆ ಹಿರೇಹಡಗಲಿ ಪುರಾಣಿಕ ಮಠಾಧಿಪ ಶ್ರೀ ಚೆನ್ನವೀರಪಂಡಿತ ವಂಶಾಬ್ಧಿ
ರಾಕಾಶಶಾಂಕ ಸಮಾನ ವೇ॥ ವಿರೂಪಾಕ್ಷಶಾಸ್ತ್ರಿಯಿಂದ ವಿರಚಿತವಾದ
ಜಗದ್ಗುರು ಶ್ರೀ ಸಿದ್ಧಲಿಂಗೇಶ ವಿಜಯದೊಳು
೯ ನೇ ಅಧ್ಯಾಯ ಸಮಾಪ್ತವಾದುದು.



॥ ಶ್ರೀ ಜಗದ್ಗುರು ದಾರುಕಾಚಾರ್ಯಾಯ ನಮಃ ॥

# ೫ ನೆಯ ಅಧ್ಯಾಯ

## ಶ್ರೀ ಪಂಚಾಚಾರ್ಯ ಪ್ರಭಾ ಪತ್ರಿಕಾಭ್ಯುದಯ

ಶ್ರೀಮತ್ಪೂಜ್ಯಪಾದ ಮಹಾ ಶ್ರೀಗಳವರು ಪ್ರಿಂಟಿಂಗ ಪ್ರೆಸ್ಸಿಗೆ ಧನ ಸಹಾಯ ಮಾಡಬೇಕೆಂದು ಸಭೆಯಲ್ಲಿ ಅಪ್ಪಣೆಕೊಡಿಸಿದ ವಾಕ್ಯಗಳನ್ನು ಸ್ಮರಿಸಿ, ಗುರುಭಕ್ತಿ ಶೀಲರಾದ ಅನೇಕ ಜನರು ಸ್ವಹಸ್ತ-ಪರಹಸ್ತಗಳಿಂದ ಧನ ಸಹಾಯಮಾಡಿದರು. ದೊಡ್ಡದಾದ ಪ್ರಿಂಟಿಂಗ ಪ್ರೆಸ್ ಖರೀದಿಯಾಗಿ ಬಂದು, ಮೈಸೂರು ರಾಜಧಾನಿಯಲ್ಲಿ ಸ್ಥಾಪಿಸಲ್ಪಟ್ಟಿತು. ಬಳಿಕ ಶ್ರೀ ಶಕೆ ೧೮೫೮ ನೇ ಪ್ರಭವನಾಮ ಸಂವತ್ಸರದ ವೈಶಾಖ ಶು. ೫ (ತಾ. ೧೬-೫-೧೯೨೭) ಶ್ರೀ ಜಗದ್ಗುರು ದಾರುಕ ಶಿವಾಚಾರ್ಯ ಜಯಂತೀ ಶುಭಸಮಯದಲ್ಲಿ ಶ್ರೀ ಪಂಚಾಚಾರ್ಯ ಪ್ರಭಾ ಪತ್ರಿಕೆಯ ಮೊದಲನೆಯ ಸಂಚಿಕೆ ಹೊರಟಿತು.

ಶ್ರೀಗುರುನಾಮ ಸ್ಮಾರಕವಾದೀ ಪ್ರಭಾ ಪತ್ರಿಕೆಯು ಒಂದೆರಡು ವರುಷಗಳಲ್ಲಿಯೇ ಕರ್ನಾಟಕ ದೇಶದ ಚತುರ್ದಿಕ್ಕುಗಳಲ್ಲಿಯೂ ಪ್ರಚಾರವಾಯಿತು. ಅದರಲ್ಲಿ ಬರುವ ಸರ್ವೋತ್ತಮವಾದ ವಿಷಯಗಳನ್ನು ಪಠನಮಾಡುತ್ತಲೇ ಜನರಿಗೆ ಪರಮೋಲ್ಹಾಸವಾಗಿ, ಆಹಾ! ಉಜ್ಜಯಿನೀ ಜ॥ ಮಹಾ ಶ್ರೀಗಳವರ ಕೃಪಾಬಲದಿಂದ ಅಮೂಲ್ಯವಾದ ನಮ್ಮ ಮತ-ತತ್ವಗಳನ್ನು ತಿಳಿದುಕೊಳ್ಳುವಂತಹ ಶುಭದಿವಸಗಳು ನಮಗೆ ದೊರೆಯುತ್ತಿರುವವೆಂದು ಕೊಂಡಾಡುತ್ತ, ಪ್ರತಿವಾರವೂ ಪಂಚಾಚಾರ್ಯ ಪ್ರಭಾ ಪತ್ರಿಕೆಯ ಆಗಮನದ ನಿರೀಕ್ಷಣೆಮಾಡುತ್ತ, ಪತ್ರಿಕೆ ಬಂದಕೂಡಲೇ ಓದುತ್ತ ಗುರುನಾಮ ಸ್ಮರಣೆಮಾಡುತ್ತಿದ್ದರು.

ಅನೇಕ ಜನ ಪಂಡಿತರೂ, ಪದವೀಧರರೂ, ಶಾಸ್ತ್ರಿಗಳೂ ಸರ್ವೋತ್ತಮವಾದ ಲೇಖಗಳನ್ನು ಬರೆದು ಕಳುಹಿಸಿದರು. ಧಾರ್ಮಿಕ, ನೈತಿಕ, ರಾಜಕೀಯ ವಿಷಯಗಳೂ, ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರ ಮುಂತಾದ ಗೂಢ ವಿಚಾರಗಳ ಅನಂತಾನಂತ ಸದ್ವಿಷಯಗಳೂ ಪತ್ರಿಕೆಯಲ್ಲಿ ಪ್ರಕಟವಾಗಹತ್ತಿದವು. ಸಣ್ಣಪುಟ್ಟ ಗ್ರಾಮಗಳಲ್ಲಿ ಸಹ ಈ ಪತ್ರಿಕಾ ವಾಚನಾಭಿರುಚಿಯು ಸರ್ವಾಬಾಲವೃದ್ಧರಿಗೂ ಹೆಚ್ಚಾಗುತ್ತ ಹೋಯಿತು. ಮುಂದೆ ಒಂದೆರಡು ವರುಷಗಳಲ್ಲಿಯೇ ಚಂದಾದಾರರ ಸಂಖ್ಯೆಯು ೩ ಸಾವಿರಕ್ಕೆ ಬಂದಿತು.

ಉಜ್ಜಯಿನೀ ಮಹಾ ಶ್ರೀಗಳವರ ಆಜ್ಞಾ ಪ್ರಕಾರ ಪಟ್ಟ-ಚರಾಧಿಕಾರಿಗಳೂ, ಮಠಾಧಿಕಾರಿಗಳೂ ತಮ್ಮ ತಮ್ಮ ಗ್ರಾಮಗಳಲ್ಲಿ ಜರಗುವ ವಿವಾಹ, ದೀಕ್ಷಾ, ಶುಭ ಶೋಭನಾದಿ ಕಾರ್ಯಗಳಲ್ಲಿಯೂ, ವರ್ಧಂತಿ, ಜಯಂತಿ, ಪುತ್ರೋತ್ಸವ, ವಾರ್ಷಿಕೋತ್ಸವ, ಅಂತೇಷ್ಟಿಕಾದಿ ಸಮಯಗಳಲ್ಲಿಯೂ ಪಂಚಾಚಾರ್ಯ ಪ್ರಭಾ ಪತ್ರಿಕೆಯ ಪೋಷಣ ದ್ರವ್ಯವನ್ನು ಭಕ್ತಾದಿಗಳಿಂದ ತೆಗೆಯಿಸಿ, ಮೈಸೂರಿಗೆ ರವಾನೆಮಾಡಿದರು. ಈ ಸ್ವೀಕಾರದ ಹಣವು ಪ್ರತಿ ವರುಷ ಸಾವಿರಾರು ರೂಪಾಯಿಗಳ ಮೇಲ್ಪಟ್ಟು ಜಮಾ ಆಗಹತ್ತಿತು. ಮತ್ತು ಪ್ರಭಾ ಪ್ರೆಸ್ಸಿನಲ್ಲಿ ಸರ್ವೋತ್ತಮವಾದ ಮತಗ್ರಂಥಗಳೂ, ಮನೋಹರವಾದ ಫೋಟೋಗಳೂ ಮುದ್ರಣವಾಗುತ್ತ ಜಗದ್ವ್ಯಾಪಕವಾದವು. ದೇಶದಲ್ಲಿ ಶ್ರೀ ಜ|| ಪಂಚಾಚಾರ್ಯ ಭಜನಾ ಸಂಘಗಳೂ ಏರ್ಪಾಡಾದವು. ಮತ್ತು ಮಹಾ ಶ್ರೀಗಳವರ ಮಂಗಲ ವಾಕ್ಯದಂತೆ ಕೆಲವು ಗ್ರಾಮಗಳಲ್ಲಿ ಶ್ರೀ ಗುರುವರ್ಗ ಸುಧಾರಣ ಪಾಠಶಾಲೆಗಳೂ ಸ್ಥಾಪನವಾದವು. ಚಿಕ್ಕ ಚಿಕ್ಕ ಬುಕ್ಕುಗಳಿಂದಲೂ, ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಭಾವಪಟಗಳಿಂದಲೂ, ಪ್ರತಿಯೊಬ್ಬರಿಗೂ ತಮ್ಮ ಗೋತ್ರ, ಸೂತ್ರ, ಶಾಖಾ, ಪ್ರವರಾದಿಗಳು ತಿಳಿಯುತ್ತ ಸಮಾಜದಲ್ಲಿ ಧರ್ಮಜಾಗ್ರತಿಯುಂಟಾಯಿತು. ಮತ್ತು ಮತಸ್ಥಾಪನಾಚಾರ್ಯರಾದ ಮೂಲ ಗುರುಗಳ ಮಹಿಮಾತಿಶಯಗಳು ಮನನವಾದವು. ಅಲ್ಲಿಂದ ಗುರುಭಕ್ತಿ, ಗುರುಧ್ಯಾನ, ಗುರುಶೇವಾದಿಗಳು ಪ್ರಬಲವಾದವು.

ಯಾವ ಪಟ್ಟಣ, ನಗರ, ಹಳ್ಳಿ-ಪಳ್ಳಿಗಳಲ್ಲಿ ನೋಡಿದರೂ ಶ್ರೀ ಜ|| ಪಂಚಾಚಾರ್ಯರ ಹೆಸರಿನಿಂದ ಭಜನಾ ಸಂಘಗಳೂ, ವಿದ್ಯಾಲಯಗಳೂ, ಅಂಗಡಿಗಳೂ, ತರುಣ ಸಂಘಗಳೂ, ಹೋಟಲ್‌ಗಳೂ ಸಹ ತೋರುತ್ತಿದ್ದವು. ಯಾರ ಮನೆಯಲ್ಲಿ ನೋಡಿದರೂ ಗುರುಸಾರ್ವಭೌಮರ ಭಾವಪಟಗಳು ರಂಜಿಸುತ್ತಿರುವವು. ಉಜ್ಜಯಿನೀ ಮಹಾ ಶ್ರೀಗಳವರು ದೊಡ್ಡ ಕಂಠಮಾಲಾ ಧರಿಸಿ ಕುಳಿತಿರುವ ಫೋಟೋಗಳಂತೂ ಅಸಂಖ್ಯಾತವಾಗಿ ದೇಶದಲ್ಲೆಲ್ಲಾ ತುಂಬಿದವು. ತಪಃಪ್ರಭಾವದಿಂದ ಯುಕ್ತವಾದ ಆಫೋಟೋವನ್ನು ಭಕ್ತಿಯಿಂದ ಪೂಜಾಮಾಡಿದವರಿಗೆ ಇಷ್ಟಾರ್ಥಸಿದ್ಧಿಯಾಗುತ್ತ ಬಂದವು. ಇವರ ಯಶೋದುಂದುಭಿಯು ದಶದಿಕ್ಕುಗಳಲ್ಲಿಯೂ ಮೊಳಗುವಂಥಾದ್ದಾಯಿತು.

ವೀರಶೈವ ಸಮಾಜಕ್ಕೆ ಅತ್ಯಂತ ಉಪಯುಕ್ತವಾದ ಲೇಖಗಳು ಈ ಪಂಚಾಚಾರ್ಯ ಪ್ರಭಾ ಪತ್ರಿಕೆಯಲ್ಲಿ ಪಂಡಿತರಿಂದ, ವಿದ್ವಾಂಸರಿಂದ ಬರೆಯಲ್ಪಟ್ಟವು. ( ಅವುಗಳಲ್ಲಿ ಕೆಲವನ್ನು ಮುಂದಿನ ಸಂಕೀರ್ಣಾಧ್ಯಾಯದಲ್ಲಿ ಮುದ್ರಿಸಲ್ಪಟ್ಟವೆ. )

---

## ದಾವಣಗೆರೆಯಲ್ಲಿ ಧೂರ್ತರಿಗೆ ಗುರುಭಕ್ತಿ ಹುಟ್ಟಿದ್ದು

ಈ ಮಹಿಮರು ಬುಕ್ಕಾಂಬುಧಿ ಗಿರಿಯಲ್ಲಿ ಉಗ್ರ ತಪಸ್ಸನ್ನಾಚರಿಸಿದ ಲಾಗಾಯಿತು ಇವರ ಚಿತ್ತವೃತ್ತಿ, ಆಹಾರ-ವಿಹಾರಗಳೂ, ನಡೆ-ನುಡಿಗಳೂ ವಿಚಿತ್ರವಾಗಿ ತೋರುತ್ತಿದ್ದವು. ಸತ್ಕ್ರಿಯಾಚರಣೆಯಿಂದಲೂ, ಜಿತೇಂದ್ರಿಯತ್ವದಿಂದಲೂ ಪುಟಕ್ಕೆ ಹಾಕಿದ ಬಂಗಾರದಂತೆ ಇವರ ದೇಹದಲ್ಲಿ ದಿವ್ಯತೇಜಃಪುಂಜವು ಪ್ರಕಾಶವಾಯಿತು. ಹಾಗು ಇವರಲ್ಲಿ ಹಸ್ತಸಿದ್ಧಿ, ವಾಕ್‌ಸಿದ್ಧಿ, ಭವಿಷ್ಯತ್ಕಾಲ ದ್ರಿಷ್ಟಿ, ಶಾಪಾನುಗ್ರಹ ಸಮರ್ಥತೆಗಳುಂಟಾದವು.

ಈ ಮಹಾತ್ಮರು ತಮ್ಮ ಶಿವಪೂಜಾಕಾಲದಲ್ಲಿ ಹಾಗು ಪಾಠ ಪ್ರವಚನ ಚಿಂತನ ಸಮಯದಲ್ಲಿ ಯಾರೊಬ್ಬರೂ ಪ್ರವೇಶಮಾಡಲು ಸಾಧ್ಯವಿರಲಿಲ್ಲ. ಅವರು ಎಂತಹ ಅಧಿಕಾರಿಗಳೇ ಇರಲಿ, ಶ್ರೀಮಂತ-ಧೀಮಂತ-ಶೆಟ್ಟಿ-ಸಾಹುಕಾರ ಬಂಧು-ಬಾಂಧವರೇ ಆಗಲಿ ಅಪ್ಪಣೆಯಾಗದ ಹೊರ್ತು ಒಳಗೆ ಪ್ರವೇಶಕ್ಕಾಸ್ಪದವಿದ್ದಿಲ್ಲ.

ಒಂದು ಸಾರೆ ಮಹಾಸವಾರಿಯು ಅಕಸ್ಮಾತ್ ದಾವಣಗೆರೆ ಮುಕ್ಕಾಂ ಮಾಡಿ, ೪-೬ ದಿವಸವಾಗಲು, ಕೆಲವು ಧೂರ್ತರಾದ ಜನರು ಇವರಮೇಲೆ ದ್ವೇಷಮಾಡುತ್ತ ಉಜ್ಜಯಿನೀ ಸ್ವಾಮಿಗಳವರನ್ನು ಅನೇಕ ವಿಧ ಪ್ರಶ್ನೆಗಳನ್ನು ಕೇಳಿ, ಅವರಿಗೆ ಮಾನ ಚ್ಯುತಿ ಮಾಡೋಣ. ಅವರು ಬಸವಾದಿ ಪ್ರಮಥರ ನಿಂದೆ ಮಾಡುವ ದುಷ್ಟರಿಗೆ ಆಶ್ರಯಕೊಡುತ್ತಾರೆ. ಅವರಲ್ಲಿಗೆ ಹೋಗೋಣವೆಂದು ಒಳ್ಳೇ ಹುರುಪಿನಿಂದ ಹೊರಟು ಮಹಾಶ್ರೀಗಳವರಲ್ಲಿಗೆ ಬಂದರು.

ಆ ದಿವಸ ಉದಯ ೮-೯ ಗಂಟೆ ಸಮಯ ಮಹಾ ಮೂರ್ತಿಯು ಜಟಾ-ಮುಕುಟ, ಭಸ್ಮ-ರುದ್ರಾಕ್ಷ, ಕಾಷಾಯಾಂಬರ ಧಾರಣದಿಂದ ಶೋಭಿಸುತ್ತ ವ್ಯಾಘ್ರಾಜಿನದಮೇಲೆ ಕುಳಿತು ಕೆಲವು ಸದ್ಭಕ್ತರಿಗೆ ಹಿತೋಪದೇಶಮಾಡುತ್ತಿದ್ದರು. ಆ ಸಮಯಕ್ಕೆ ಈ ಜನರು ಹೋಗಿ ವಂದನೆ ಮಾಡದೆ ಜನರಲ್ಲಿ ಕುಳಿತರು.

ಮಹಾ ಶ್ರೀಗಳವರು ಇವರ ಮುಖಗಳನ್ನು ನೋಡುತ್ತ ನಾನಾರೀತಿಯಿಂದ ಸದ್ಬೋಧಮಾಡುತ್ತಿರಲು, ಈ ಜನರಿಗೆ ಶಿವಕಲಾಭರಿತ ಆ ದಿವ್ಯತೇಜಸ್ಸು ನೋಡುತ್ತ ಸದ್ವಾಕ್ಯಗಳನ್ನು ಕೇಳುತ್ತಲೇ ಹೃದಯ ನಡಗಿತು. ಏನೊಂದೂ ಮಾತನಾಡಲು ಧೈರ್ಯ ಬರಲಿಲ್ಲ. ಸುಮ್ಮನೆ ಒಬ್ಬರ ಮುಖ ಒಬ್ಬರು ನೋಡುತ್ತ ಕುಳಿತರು. ಅಷ್ಟಕ್ಕೆ ೧೨ ಗಂಟೆಯಾಗಲು, ಅಪ್ಪಣೆಯಿತ್ತು ಕಳುಹಿಸಿದರು.

ಬಳಿಕ ಈ ಜನರು ಎದ್ದು ಬರುವಾಗ ಇವರಿಗೆ ಭಯಹುಟ್ಟಿ ವಂದನೆಮಾಡಿ ಹೊರಗೆ ಬಂದಾಗ್ಗೆ ಜನರ ಮುಂದೆ ಆಹಾ! ನಾವೆಂತಹ ಮೂರ್ಖರು, ಈ ಮಹನೀ

ಯರ ವಿಷಯ ತಿಳಿಯದೆ ಸುಮ್ಮನೆ ದ್ವೇಷಮಾಡಿದೆವಲ್ಲಾ, ನಮ್ಮದು ಸಹಸ್ರ ತಪ್ಪಾಯಿತೆಂಮು ಹೇಳಿದರು. ಮಹಾಗುರುವೇ, ನನ್ನುನ್ನು ಉದ್ಧಾರಮಾಡೆಂದು ಮನದಲ್ಲಿ ಪ್ರಾರ್ಥನೆಮಾಡಿ, ಅವರಲ್ಲಿ ಭಕ್ತಿಯಿಂದ ನಡೆದರು.

---

## ಸಂಸ್ಕೃತ ವಿದ್ಯಾಭಿವೃದ್ಧಿ ಫಂಡು ಕೂಡಿಸಲು ಪ್ರಯತ್ನ

ಮಹಾ ಶ್ರೀಗಳವರು ಕೆಲವು ದಿವಸ ಮಹಾ ಸಂಸ್ಥಾನದಲ್ಲಿರಲು, ಮತ್ತೊಂದು ಘನವಾದ ಯೋಚನೆ ಉತ್ಪನ್ನವಾಯಿತು. ಈ ನಮ್ಮ ವೀರಶೈವ ಸಮಾಜ ಸುಧಾರಣೆ ಹೊಂದಬೇಕಾದರೆ ವಿದ್ಯೆಯೇ ಮೂಲಾಧಾರವಾಗಿದೆ. ಹಾಗು ಮಾಹೇಶ್ವರ ವಿದ್ಯಾರ್ಥಿಗಳು ಮೊದಲು ಸುಧಾರಿಸಿದರೆ ಹಿಂದಿನಿಂದ ಭಕ್ತಾದಿಗಳು ಸುಧಾರಿಸುವರೆಂಬುವುದು ಸಿದ್ಧವಿದೆ.

ಆದುದರಿಂದ ವಿದ್ಯಾಭಿವೃದ್ಧಿಗೆ ದೊಡ್ಡ ಶಾಲೆ-ಕಾಲೇಜು ಆಗಬೇಕು. ಇದಕ್ಕೆ ಧನರಾಶಿಯು ಅತ್ಯವಶ್ಯಕ. ಭಕ್ತರಿಂದ ಧನ ಸಂಗ್ರಹ ಮಾಡುವದಾದರೂ ಅವರಿಗೆ ಬೇಸರವಾಗದಂತೆ ಭ್ರಮರವು ಪುಷ್ಪಕ್ಕೆ ಘಾಸೆಯಾಗದಂತೆ ಹೇಗೆ ಸುಗಂಧವನ್ನು ಸ್ವೀಕರಿಸುವದೋ ಹಾಗೆ ನಾವಾದರೂ ದ್ರವ್ಯಸಂಗ್ರಹಿಸಬೇಕೆಂದು ಸಂಕ್ಷೇಪ ಸರಕೀಟನಿಂದ ಸಂಚಾರ ಹೊರಟರು.

ಮುಂದೆ ಸಣ್ಣಪುಟ್ಟ ಗ್ರಾಮಗಳಲ್ಲಿ ಭಕ್ತಮಂಡಳಿಯವರನ್ನು ಕರೆಯಿಸಿ, ಎಲೈ ಗುರುಭಕ್ತರೇ, ನೀವು ಪವಿತ್ರವಾದ ವೀರಶೈವ ಮತದಲ್ಲಿ ಹುಟ್ಟಿರುವಿರಿ. ನಿಮ್ಮ ಹವ್ಯ ಕವ್ಯ, ನಿತ್ಯ ನೈಮಿತ್ತಿಕಾದಿ ಆಚರಣೆಗಳನ್ನು ನಡೆಯಿಸುವದಕ್ಕೆ ಗುರುವರ್ಗದ ಮಠಾಧಿಕಾರಿಗಳು ಬೇಕಾಗುವದಿಲ್ಲವೇ? ಇಂತಹ ಪೂಜ್ಯರಾದವರು ವಿದ್ಯಾವಂತರೂ, ಸುಶೀಲರೂ ಆಗಿ, ವಿದ್ಯಾಭ್ಯಾಸಮಾಡಿ ಬಂದು ನಿಮ್ಮಗಳಿಗೆ ಧರ್ಮೋಪದೇಶ ಮಾಡಿ, ಉದ್ಧಾರಮಾಡಲಿಕ್ಕೆ ದೊಡ್ಡ ಧಾರ್ಮಿಕ ಕಾಲೇಜು ಸ್ಥಾಪನೆಗಾಗಿ, ನಾವು ಧನ ಸಂಗ್ರಹಮಾಡುತ್ತಿರುವೆವು. ಇದಕ್ಕೆ ನಿಮ್ಮ ಯೋಗ್ಯತಾನುಸಾರವಾಗಿ ಕೊಡಲು ಒಪ್ಪಿಕೊಳ್ಳಿರಿ. ಅದರಲ್ಲೂ ಮೂರು ಕಂತುಗಳನ್ನು ಮಾಡಿ, ಹಣವನ್ನು ಸಲ್ಲಿಸುತ್ತ ಹೋಗಿರಿ.

ಇದಲ್ಲದೆ ಸಕಲ ದಾನಗಳಲ್ಲಿ ವಿದ್ಯಾದಾನವು ಶ್ರೇಷ್ಠವಾಗಿದೆ. ಅನ್ನದಾನವು ಹೆಚ್ಚೆನಿಸಿದ್ದರೂ "ಅನ್ನೇನಕ್ಷಣ ತೃಪ್ತಿಃಸ್ಯಾತ್ । ಯಾವಜ್ಜೀವಂತು ವಿದ್ಯಯಾ ॥" ಅಂದರೆ ಅನ್ನ ಕೊಟ್ಟರೆ ಒಂದು ದಿವಸ ಮಾತ್ರ ತೃಪ್ತಿಯಾಗಬಹುದು. ವಿದ್ಯೆಯಿಂದ ಆಜನ್ಮಪರಿಯಂತರ ತೃಪ್ತನಾಗುವನೆಂದು ಹೇಳಿದೆ.

ಆದುದರಿಂದ ಈ ವಿದ್ಯಾ ಫಂಡಿಗೆ ಧನ ಸಹಾಯಮಾಡುವದರಿಂದ ಅನ್ನದ ವೆವಸ್ಥೆಯೂ, ವಿದ್ಯಾಭ್ಯಾಸವೂ ನಡೆದು, ಅನ್ನದಾನ, ವಿದ್ಯಾದಾನ ಮಾಡಿದ ಎರಡು ವಿಧವಾದ ಪುಣ್ಯಕ್ಕೆ ಭಾಗಿಗಳಾಗುವಿರಿ. ಇತ್ಯಾದಿ ಸದ್ಬೋಧಮಾಡಲು, ಭಕ್ತರು ಸಂತೋಷದಿಂದ ವಿದ್ಯಾಫಂಡಿಗೆ ಧನವನ್ನು ವಾಗ್ದಾನಮಾಡಿ, ಪುಸ್ತಕದಲ್ಲಿ ಸಹಿ ಮಾಡುತ್ತಿದ್ದರು. ಕೆಲವರು ಜ್ಞಾನಿಗಳು ಅನಿತ್ಯವಾದ ಶರೀರ ಮುಂದೇನಾಗುವದೋ ಎಂದು ತತ್ಕಾಲದಲ್ಲಿಯೇ ನಗದು ಹಣ ಕೊಟ್ಟುಬಿಡುತ್ತಿದ್ದರು. ಈ ರೀತಿ ಕೆಲವು ವರುಷಗಳಲ್ಲಿ ೩೦-೪೦ ಸಾವಿರ ರೂ. ಫಂಡು ಆಯಿತು.

---

## ಕೊಟ್ಟೂರಲ್ಲಿ ಶ್ರೀ ದಾರುಕಾಚಾರ್ಯ ಸಂಸ್ಕೃತ ಪಾಠಶಾಲಾ ಸ್ಥಾಪನಾ

ಮಹಾ ಶ್ರೀಗಳವರು ವಿದ್ಯಾಫಂಡು ಕೂಡಿಸಲು, ಅವಿಶ್ರಾಂತ ಶ್ರಮಪಡುತ್ತಿಲಾಗಿ, ಕೆಲವು ಭಾಗ ಫಂಡು ವಸೂಲು ಬಂಧಿತು. ಇನ್ನು ಕಾಲವಿಳಂಬಮಾಡಬಾರದೆಂದು ಪಾಠಶಾಲಾ ಸ್ಥಾಪನಾಮಾಡಲು, ಕೊಟ್ಟೂರಿಗೆ ದಯಮಾಡಿಸಿ, ಸಮಸ್ತ ಶಿವಭಕ್ತಮಂಡಲಿಯವರನ್ನು ಕರೆಯಿಸಿಕೊಂಡು, ತಮ್ಮ ಉದಾತ್ತ ವಿಚಾರಗಳನ್ನೆಲ್ಲಾ ಶೃತಪಡಿಸಿದರು. ಈ ನಗರದವರು ಈ ಗುರುಪುಂಗವರಲ್ಲಿ ಪರಮ ವಿಶ್ವಾಸ, ದೃಢವಾದ ಭಕ್ತಿಯುಳ್ಳವರಾದ್ದರಿಂದ ಮಹದಾಜ್ಞಾಪ್ರಕಾರ ವರ್ತಿಸಲು ಸಿದ್ಧರಿರುವೆವೆಂದು ಅನುಮೋದನಕೊಟ್ಟರು. ಬಳಿಕ ಮುಂದಿನ ವಿಷಯಗಳ ವಿಮರ್ಶೆ ನಡೆದು, ಶುಭ ದಿವಸದೊಳು ಶ್ರೀ ಗಚ್ಚಿನಮಠದಲ್ಲಿ "ಶ್ರೀ ದಾರುಕಾಚಾರ್ಯ ಸಂಸ್ಕೃತ ಪಾಠಶಾಲಾ" ಎಂಬ ಪವಿತ್ರಾಭಿಧಾನದಿಂದ ಸ್ಥಾಪಿಸಲ್ಪಟ್ಟು. ಇದಕ್ಕೆ ಅಧ್ಯಾಪಕರು ವೇ॥ ಪಂ॥ ಉಮಚಿಗಿ ಶಂಕರಶಾಸ್ತ್ರಿಗಳವರನ್ನೇ ನಿಯಮಿಸಲಾಯಿತು. ಮತ್ತು ಮುಂದೆ ಈ ಪಾಠಶಾಲೆಯು ಸುವೆವಸ್ಥೆಯಿಂದ ಜರುಗುತ್ತಾ ಹೋಗುವದಕ್ಕೆ ೧೨ ಜನ ಮೆಂಬರುಗಳ ಒಂದು ಕಮೀಟಿಯು ಏರ್ಪಾಟಮಾಡಲ್ಪಟ್ಟಿತು.

---

## ವೀಣಾವಾದನ ಅಭಿಲಾಷೆ

ಮಹಾಶ್ರೀಗಳವರು ಪ್ರತಿನಿತ್ಯ ಸಂಸ್ಥಾನದ ಕಾರ್ಯಕ್ರಮಗಳನ್ನು ನಡೆಯಿಸುತ್ತ ಹಾಗೂ ವೇದಾಗಮೋಪನಿಷದಾದಿ ಧರ್ಮಗ್ರಂಥಾವಲೋಕನ-ಪಠನ-ನಿತ್ಯ ಕ್ರಿಯಾಚರಣೆ ಇತ್ಯಾದಿಗಳಲ್ಲಿ ತೊಡಗಿರಲು, ಶಿವಪೂಜಾಕಾಲಕ್ಕೆ ದಶವಿಧನಾದಗಳಾಗುತ್ತಿರಬೇಕೆಂಬುವ ಶಾಸ್ತ್ರನಿಯಮವನ್ನು ತಿಳಿದು ಅವುಗಳ ಪೈಕಿ ವೀಣಾನಾದ ವೇಣುನಾದಗಳಿರುವದರಿಂದಲೂ ಹಾಗು ಪರಶಿವನು ಸಮಗಾನಲೋಲನೆಂತಲೂ

ಉಜ್ಜಯಿನಿ ಜಗದ್ಗುರು ಸಿದ್ಧಲಿಂಗಮಹಾಸ್ವಾಮಿಗಳ ಸನ್ನಿಧಿಯಲ್ಲಿ



ಹಿರೇಪಡಗಲಿ ಪು. ಮ. ವಿರೂಪಾಕ್ಷಶಾಸ್ತ್ರಿಗಳ
ವೀಣಾವಾದನ.

"ಗಾನಪ್ರಿಯಃ ಶಂಕರಃ" ಎಂಬ ವಾಕ್ಯದಂತೆಯೂ ಇದಲ್ಲದೆ ಸಕಲ ಪ್ರಾಣಿಗಳಿಗೂ ಸಂಗೀತವಿದ್ಯೆಯೇ ಆನಂದವನ್ನುಂಟುಮಾಡತಕ್ಕದ್ದು. ಅದರಲ್ಲಿಯೂ ವೀಣಾವಾದ್ಯವಂತೂ ಬಹು ಮನೋಹರವಾದದ್ದೂ ಶ್ರೇಷ್ಠವಾದದ್ದೂ ಆಗಿದೆ. ಆದುದರಿಂದ ವೀಣಾ ನುಡಿಸುವದನ್ನು ಅಭ್ಯಾಸಮಾಡಿ ಸ್ವತಃ ತಾವೇ ನುಡಿಸುತ್ತಿರುವದೇ ಆ ಪರಶಿವನಿಗೆ (ಇಷ್ಟಲಿಂಗಕ್ಕೆ) ಅತ್ಯಂತ ಪ್ರಿಯಕರವಾಗಿ ತೃಪ್ತನಾಗುತ್ತಾನೆಂಬ ಸದ್ಭಾವನೆಯುಂಟಾಯಿತು. ಅದೇ ಸಮಯಕ್ಕೆ ಹಿರೇಹಡಗಲಿ ಪುರಾಣಿಕಮಠದ, ವೇ॥ ವಿರೂಪಾಕ್ಷ ಶಾಸ್ತ್ರಿಗಳು ಸನ್ನಿಧಿಗೆ ಬಂದರು.

ಇವರು ವೀಣಾವಾದನ ನಡೆಯಿಸುವ ಸಮಾಚಾರವು ತಿಳಿದಿದ್ದರಿಂದ— ಶಾಸ್ತ್ರಿಗಳೇ ನೀವು ನಮ್ಮಲ್ಲಿದ್ದು ನಮಗೆ ವೀಣಾಭ್ಯಾಸ ಮಾಡಿಸಿರಿ. ನಿಮಗೆ ಸಂಭಾವನೆ ಕೊಟ್ಟು ನಿಮ್ಮನ್ನು ಯೋಗ್ಯರೀತಿಯಿಂದ ಸಂತೈಸುತ್ತೇವೆಂದು ಬಹು ಪ್ರೇಮದಿಂದ ಅಪ್ಪಣೆಮಾಡಲಾಗಿ ಗುರುಗಳಾಜ್ಞೆ ಮೀರಲಾಗದೆ, ಮಹಾತ್ಮರೇ, ಹಾಗೆಯೇ ಆಗಲಿ. ಕೆಲವು ಕಾಲ ಸನ್ನಿಧಿಯಲ್ಲಿ ಇರುವೆನೆಂದು ಒಪ್ಪಿಕೊಂಡು ಮುಂದೆ ಮಹಾ ಸಂಸ್ಥಾನದಲ್ಲಿ ಕಾರಭಾರಿಗಳಾಗಿಯೂ ವೀಣಾಭ್ಯಾಸ ಮಾಡಿಸುತ್ತಲೂ ೬-೭ ವರುಷಗಳು ಜರಗಿದವು.

---

## ಜಗಲೂರಲ್ಲಿ ಮಹೋತ್ಸವವು

ಈ ಮಹಾತ್ಮರ ಪ್ರಭಾವವು ವಿಶ್ವವ್ಯಾಪಕವಾಯಿತು. ಪರಶಿವಾವತಾರಿಗಳಾದೀ ಜಗದಾರ್ಯರನ್ನು ತಮ್ಮ ಊರುಗಳಲ್ಲಿ ಮಹೋತ್ಸವ ಮಾಡಿ ಧನ್ಯರಾಗಬೇಕೆಂದು ಸದ್ಭಕ್ತರು ಬಂದು ಬಿನ್ನವಿಸಿಕೊಳ್ಳಲು (ಈ ಶಿವಯೋಗಪುಂಗವರಿಗೆ ವಸ್ತ್ರಾಭರಣಗಳಿಂದಲಂಕರಿಸಿಕೊಂಡು ಮೇಣೆ, ಪಲ್ಲಕ್ಕಿ, ಅಂಬಾರಿಗಳಲ್ಲಿ ಕುಳಿತು ಮೆರೆಯಬೇಕೆಂಬಾಶೆಯಿರಲಿಲ್ಲ.) ಆಗ ಸದ್ಭಕ್ತರೇ, ನಮಗೇಕೆ ತೊಂದರೆ ಕೊಡುವಿರಿ? ನಮಗೆ ಉತ್ಸವಾದಿಗಳಲ್ಲಿ ವೈಭವದಿಂದ ಮೆರೆಯಬೇಕೆಂಬ ಅಪೇಕ್ಷೆ ಇಲ್ಲ. ಹಿಂದೆ ಅನೇಕ ಮಹೋತ್ಸವಗಳಿಂದ ಆನಂದಪಟ್ಟದ್ದೇ ಸಾಕು. ನಮ್ಮನ್ನು ಬಿಡಿರಿ; ಇನ್ನುಳಿದ ರಂಭಾಪುರೀ, ಕೇದಾರ, ಶ್ರೀಶೈಲ ಜಗದ್ಗುರುಗಳವರನ್ನು ಕರೆತಂದು ಮನದಣಿಯುವಂತೆ ಸೇವಾ ಮಾಡಿರಿ. ಎಂದು ಹಿತೋಕ್ತಿಗಳನ್ನಾಡಿ ಕಳುಹಿಸುತ್ತಿದ್ದರು.

ಬಳಿಕ ಚಿತ್ರದುರ್ಗ ಜಿಲ್ಹಾ ಜಗಲೂರು ಗ್ರಾಮದ ವೀರಶೈವ ಪ್ರಮುಖರು ಸನ್ನಿಧಿಗೆ ೨-೩ ಸಾರೆ ಬಂದು ತಮ್ಮ ಗ್ರಾಮಕ್ಕೆ ದಯಮಾಡಿಸಿಕೊಳ್ಳುವದಕ್ಕೆ ಬಿನ್ನವಿಸಿಕೊಂಡರೂ ಅನುಮತಿ ದೊರೆಯದೆ ಹೋಗಿತ್ತು. ಪುನಃ ೨-೩ ವರುಷಗಳನಂತರ ಜಗಲೂರವರು ಬಂದು ವಂದಿಸಿ, ಮಹಾಪ್ರಭೋ, ನಮ್ಮ ಬಿನ್ನಹಕ್ಕೆ ಇನ್ನಾ

ದರೂ ಅಪ್ಪಣೆಯಾಗಬೇಕು. ಬಹಳ ದಿವಸಗಳಾದವೆಂದು ಪ್ರಾರ್ಥಿಸಿಕೊಳ್ಳಲು, ದಯಾಳುವಾದೀ ಮಹಾತ್ಮರು ಸಮ್ಮತಿಯಿತ್ತು ಕಳುಹಿಸಿದರು.

ದೈವದವರು ಹರುಷಾನ್ವಿತರಾಗಿ ಬಂದು ಅನೇಕ ವಿಧದಿಂದ ಗ್ರಾಮವನ್ನು ಅಲಂಕರಿಸಿ ಸಕಲ ಸಾಹಿತ್ಯಗಳನ್ನು ಸಿದ್ಧತೆ ಮಾಡುತ್ತ ಮಹೋತ್ಸವವು ತಾರೀಖು ೧೯—೧೧—೧೯೩೮ ನೇ ಇಸ್ವಿ ದಿವಸ ಜರಗುವದೆಂಬ ಪ್ರಸಿದ್ಧ ಪತ್ರಿಕೆಗಳನ್ನು ಮುದ್ರಿಸಿ ಪ್ರಚಾರಮಾಡಿದರು.

ಆ ಪ್ರಕಾರ ಬಹುಜನ ಪ್ರೇಕ್ಷಕರ ಸಮೂಹ ಕೂಡಿತು. ಮಹಾ ಸವಾರಿಯು ಆಗಮಿಸಲು, ಸದರಿ ತಾರೀಖಿನ ದಿವಸ ಆಂದೋಲಿಕಾ ಮಹೋತ್ಸವವು ಪರಮ ಸಂಭ್ರಮದಿಂದ ಜರಗಿತು. ಪದ್ಧತಿಪ್ರಕಾರ ಸಂಸ್ಥಾನ ಕಾರ್ಯಕ್ರಮಗಳು ನಡೆದವು. ಹಾಗು ವಿದ್ಯಾಫಂಡಿನ ಒಪ್ಪಂಧಗಳಾದವು.

ಒಂದು ದಿವಸ ಸ್ತ್ರೀ-ಪುರುಷರೆಲ್ಲರೂ ಸದ್ಬೋಧಶ್ರವಣಮಾಡಬೇಕೆಂಬಾಶೆಯಿಂದ ಸನ್ನಿಧಿಯಲ್ಲಿ ಸಭೆಗೂಡಿದರು. ಭಕ್ತಪ್ರೇಮಾನ್ವಿತರಾದೀ ಮಹಿಮರು ಧರ್ಮೋಪದೇಶಮಾಡಿದ್ದು —

ಎಲೈ ಸದ್ಭಕ್ತರೇ, ಸಕಲಪ್ರಾಣಿಗಳಲ್ಲಿ ಈ ಮನುಷ್ಯಜನ್ಮವು ಬಹು ಶ್ರೇಷ್ಠವಾದದ್ದು. ಯಾಕಂದರೆ ಇವನಲ್ಲಿ ಸಕಲ ಪದಾರ್ಥಗಳಲ್ಲಿರುವ ಗುಣದೋಷಗಳನ್ನು ಅರಿತುಕೊಳ್ಳುವ ಜ್ಞಾನಶಕ್ತಿಯಿರುವದರಿಂದ ಶ್ರೇಷ್ಠವೆನಿಸಿರುತ್ತದೆ. ಅದರಲ್ಲಿಯೂ ವೀರಶೈವಮತದಲ್ಲಿ ಹುಟ್ಟಿರುವದು ಅತ್ಯಂತ ಶ್ರೇಷ್ಠವಾಗಿದೆ. ಆದುದರಿಂದ ಶ್ರೀ ಜಗದ್ಗುರು ರೇಣುಕಾದಿ ಗುರುಸಾರ್ವಭೌಮರ ಪರಂಪರೆಯಾಗಿ ಬಂದಿರುವ ಪೀಠಾಧೀಶರಲ್ಲಿ ದೃಢವಾದ ಭಕ್ತಿವಿಶ್ವಾಸಗಳನ್ನಿಡಬೇಕು. ಗುರುನಿಂದೆ ಶಿವನಿಂದೆಗಳನ್ನು ಕಿವಿಗಳಿಂದ ಕೇಳಬಾರದು. ಸದಾಚಾರದಿಂದ ನಡೆಯಬೇಕು. ತನ್ನ ಶಕ್ತ್ಯಾನುಸಾರ ದಾನ-ಧರ್ಮ-ಪರೋಪಕಾರಗಳನ್ನು ಮಾಡಬೇಕು. ಪರಸ್ತ್ರೀಗಮನ, ಪರದ್ರವ್ಯಾಪಹರಣ, ಪರನಿಂದೆ, ಆತ್ಮಸ್ತುತಿ, ಲಂಚ, ವಂಚನೆ, ಮೋಸ, ಅಹಂಕಾರ, ದ್ವೇಷ, ಅಸೂಯೆ, ಡಾಂಭಿಕತನ ಇತ್ಯಾದಿ ಬಿಡಬೇಕು. ಗುರು-ಜಂಗಮರನ್ನೂ ಅತಿಥಿ-ಅಭ್ಯಾಗತರನ್ನೂ ಅನ್ನಪಾನಗಳಿಂದ ತೃಪ್ತಿಪಡಿಸಿ ಅವರ ಆಶೀರ್ವಾದ ಪಡೆಯಬೇಕು. ತಂದೆ-ತಾಯಿಗಳಲ್ಲಿ ಬಹು ಭಕ್ತಿ-ಆದರಗಳನ್ನು ಮಾಡಬೇಕು. ಪರರ ಜೀವಾತ್ಮನಿಗೆ ಯಾವ ರೀತಿಯಿಂದ ಹಿಂಸೆ ಮಾಡಬಾರದು. ನಿಂದಕರೂ ಆಚಾರಹೀನರೂ ಜಾತಿಭ್ರಷ್ಟರೂ ಆದಂಥವರ ಮನೆಯಲ್ಲಿ ಅನ್ನೋದಕ ಸ್ವೀಕಾರಮಾಡಬಾರದು. ಸ್ನಾನ ಶಿವಪೂಜೆ ಮಾಡದೆ ಭುಂಜಿಸಬಾರದು. ಪುಣ್ಯಕಾರ್ಯಗಳಲ್ಲಿ ಉದಾರತನವಿರಬೇಕು. ಕೇವಲ ಲೋಭತನದಿಂದ ಜೀವನ ಮಾಡಕೂಡದು. ಲೋಭಿಗಳಿಗೆ ಸತಿ-ಸುತಾದಿಗಳು ಕೂಡ ಶತ್ರುಗಳಾಗುತ್ತಾರೆ. ತ್ಯಾಗಿಗಳಿಗೆ ಶತ್ರುಗಳು ಮಿತ್ರರಾಗುತ್ತಾರೆ. ಜನರಲ್ಲಿ ಮನ್ನಣೆ ದೊರೆಯುತ್ತದೆ. ಇತ್ಯಾದಿ ಬೋಧಮಾಡಿದರು.

## ಶ್ರೀಶೈಲಪೀಠದ ವಿಷಯ

ಈ ಪೀಠವು ಕರ್ನೂಲು ಜಿಲ್ಹಾ ನಂದಿಕೊಟಕೂರು ತಾಲೂಕಿನ ಈಶಾನ್ಯ ಭಾಗದಲ್ಲಿದೆ. ಶ್ರೀ ಜಗದ್ಗುರು ಪಂಚಪೀಠಗಳಲ್ಲಿ ಒಬ್ಬರಾದ ಶ್ರೀ ಪಂಡಿತಾರಾಧ್ಯ ಮಹಾಸ್ವಾಮಿಗಳು ಪ್ರತಿಯುಗದಲ್ಲಿಯೂ ಶ್ರೀಶೈಲ ಮಲ್ಲಿಕಾರ್ಜುನ ಮಹಾಲಿಂಗ ದಿಂದುಪ್ಪವಿಸಿ ಅಲ್ಲಿಯೇ ತಮ್ಮ ಪೀಠದಲ್ಲಿದ್ದು, ಸುಪ್ರಸಿದ್ಧರಾದ ಮಹಾ ಮಹಾ ಋಷಿಗಳಿಗೂ ರಾಜಾಧಿರಾಜರಿಗೂ ಶಿವತತ್ವೋಪದೇಶವನ್ನಿತ್ತು, ವೀರಶೈವ ಮತಾ ಧಿಕ್ಯ ಸಿದ್ಧಾಂತವನ್ನು ಪ್ರಪಂಚದಲ್ಲಿ ಪ್ರಚುರಗೊಳಿಸುತ್ತಿದ್ದರು.

ಈ ಶ್ರೀಶೈಲ ಪೀಠಕ್ಕೆ ಎಲ್ಲಾ ಯುಗಗಳಲ್ಲಿಯೂ ಶ್ರೀ ಪಂಡಿತಾರಾಧ್ಯರೇ ಮುಖ್ಯಾಧಿಕಾರಿಗಳೆಂಬುವದಕ್ಕೆ ದ್ವಾಪಾರ ಯುಗದಲ್ಲಿ ಜಗದ್ಗುರು ಸದಾನಂದ ಶಿವ ಯೋಗಿಗಳು ಶ್ರೀಶೈಲದಲ್ಲಿದ್ದರೆಂಬುವದಕ್ಕೆ ವ್ಯಾಸಮುನಿ ಕೃತ ಸ್ಕಂದಪುರಾಣಾಂತ ರ್ಗತ ಶಂಕರಸಂಹಿತೆಯ ೮೫ ನೆಯ ಅಧ್ಯಾಯದಲ್ಲಿ ವಿಶದವಾಗಿ ಉಲ್ಲೇಖಿಸಲ್ಪಟ್ಟದೆ.

ಮತ್ತು ಇದೇ ಯುಗದಲ್ಲಿ ಧೇನುಕರ್ಣಶಿವಾಚಾರ್ಯರೆಂಬುವವರು ಶ್ರೀಶೈಲ ಪೀಠಾಧೀಶರಾಗಿದ್ದರೆಂಬುವದಕ್ಕೆ ವ್ಯಾಸಪ್ರಣೀತವಾದ ಸ್ಕಾಂದಪುರಾಣ ೩೫ ನೇ ಅಧ್ಯಾಯದಲ್ಲಿ ವಿವರಿಸಿದೆ. ಹಾಗೂ ಸ್ವಯಂಭುವಾಗಮದಲ್ಲಿಯೂ ವೀರಾಗಮ ಲನೇ ಪಟಲದಲ್ಲಿಯೂ ಸುಪ್ರಭೇದಾಗಮ ಇತ್ಯಾದಿ ಆಧಾರಗಳಿಂದ ಶ್ರೀಶೈಲವು ವೀರ ಶೈವರ ಅನಾದಿಸಂಸಿದ್ಧವಾದ ಕ್ಷೇತ್ರ ಮತ್ತು ಪೀಠವೆಂಬುವದು ದೃಢೀಕರಿಸುತ್ತದೆ.

ಈ ಮಹಾಪೀಠಸ್ಥಾಪಕರಾದ ಶ್ರೀ ಜ|| ಪಂಡಿತಾರಾಧ್ಯರು ಬ್ರಹ್ಮಸೂತ್ರಗಳ ಮೇಲೂ ಭಾಷ್ಯವನ್ನು ಬರೆದಿದ್ದಾರೆಂಬುವದು ( ಬಸವಪಂಡಿತಾರಾಧ್ಯರಿಂದ ಬರೆಯ ಲ್ಪಟ್ಟ ) ಉಪನಿಷದ್ಭಾಷ್ಯದಲ್ಲಿ ಉಲ್ಲೇಖಿಸಲ್ಪಟ್ಟದೆ.

ಹಾಗೂ ಈ ಪೀಠದ ಪರಂಪರೆಯವರು ಮಹಾನಾರಾಯಣೋಪನಿಷತ್, ಆನಂದವಲ್ಲೀ ಪುರುಷಸೂಕ್ತ ಮೊದಲಾದವುಗಳಿಗೆ ಉತ್ತಮವಾದ ಭಾಷ್ಯಗಳನ್ನು ಬರೆದಿದ್ದಾರೆ. ಈ ಪೀಠದ ಪ್ರಾಚೀನತ್ವದ ಬಗ್ಗೆ ಶ್ರೀಶೈಲಕಾವಲಿ, ಸಿದ್ಧಾಪುರ ಮೊದಲಾದ ಸ್ಥಾನಗಳಲ್ಲಿ ಶಿಲಾಶಾಸನಗಳು ದೊರೆಯುತ್ತವೆ. ಈ ಮಹಾಪೀಠವನ್ನು ಅನೇಕ ಮಹಾಸ್ವಾಮಿಗಳವರು ಆರೋಹಣ ಮಾಡುತ್ತ ಶ್ರೀಶೈಲಕ್ಷೇತ್ರವನ್ನು ಪ್ರಖ್ಯಾ ತಿಗೆ ತಂದರು.

ಈಚಿಗೆ ಸನ್ ೧೯೫೧ ಇಸ್ವಿವರೆಗೆ ಪೀಠಾಧೀಶರಾದ ಸ್ವಾಮಿಗಳು ಕದಂಬ, ವಿಜಯನಗರದ ಮುಂತಾದ ರಾಜರಿಗೆ ಶಿವತತ್ವೋಪದೇಶವನ್ನು ಕೊಟ್ಟು ಪುನೀತ ರನ್ನಾಗಿ ಮಾಡಿರುತ್ತಾರೆ.

ತರುವಾಯ ಕೆಲಕಾಲಾಂತರದಲ್ಲಿ (೧೭೯೩-೯೪) ರಲ್ಲಿ ಪರಮತದ ರಾಜರ ಹಾವಳಿಗೆ ಸಿಕ್ಕು ಅವರ ಉಪಟಳ ಅನ್ಯಾಯಗಳ ನೋಡಿ ಸಹಿಸಲಾರದೆ ಭಯಪಟ್ಟು ಹೊರಟುಹೋಗಿ ಆತ್ಮಕೂರಲ್ಲಿ ಒಂದು ಮಠ, ಗುಂತಕಲ್ಲು ಗ್ರಾಮದಲ್ಲಿ ಒಂದು ಮಠ, ಹೀಗೆರಡುಕಡೆಯಲ್ಲಿ ವಾಸಮಾಡುತ್ತ ಬಂದರು.

ಈ ಗುಂತಕಲ್ಲು ಮಠದಲ್ಲಿರುವ ಶ್ರೀ ಜ॥ ಪಟ್ಟಾಧ್ಯಕ್ಷ ನಾಗಲೂಟ ಶಿವಾಚಾರ್ಯಮಹಾಸ್ವಾಮಿಗಳವರು ಮಹಾ ತಪಸ್ವಿಗಳಾಗಿ ತಮ್ಮ ಮಠದಲ್ಲಿಯೇ ಶಿವಪೂಜಾಲೋಲರಾಗಿದ್ದರು.

---

## ಶ್ರೀಶೈಲ ಪೀಠಾಧಿಕಾರದ ಆಲೋಚನೆ

ಜಗಲೂರು ಮುಕ್ಕಾಮಿನಿಂದ ಮಹಾಶ್ರೀಗಳವರು ಗುಂತಕಲ್ಲು ಮುಕ್ಕಾಮಿನಲ್ಲಿರುವ ಶ್ರೀಶೈಲಪೀಠದ ಜ॥ ನಾಗಲೂಟ ಭಿಕ್ಷಾವೃತ್ತಿ ಮಹಾಸ್ವಾಮಿಗಳವರಲ್ಲಿಗೆ ತಾ. ೨೮—೧—೧೯೨೯ ನೇ ದಿವಸ ಪ್ರಯಾಣಮಾಡಿದರು. ಪರಸ್ಪರ ಪ್ರೇಮಕುಶಲ ಪ್ರಶ್ನಗಳಾದನಂತರ ಸಿದ್ಧಲಿಂಗಮಹಾಸ್ವಾಮಿಗಳೇ ನಮಗೆ, ವೃದ್ಧಾಪ್ಯಕಾಲವಾಯಿತು; ದೇಹವು ಚೈತನ್ಯಹೀನವಾಗುತ್ತ ಬಂದಿದೆ. ಮುಂದೆ ನಮ್ಮ ಪೀಠಾಧಿಕಾರಕ್ಕೆ ಉತ್ತಮವಾದೊಂದು ವಟುವನ್ನು ನೋಡಿ ಪಟ್ಟಾಧಿಕಾರ ಮಾಡಿರಿ. ರಂಭಾಪುರೀ ಕೇದಾರ ಪೀಠಗಳನ್ನು ಜೀರ್ಣೋದ್ಧಾರಮಾಡಿ ಪ್ರಕಾಶಪಡಿಸಿ ಕೀರ್ತಿ ಹೊಂದಿದಿರಿ. ನಮ್ಮದೊಂದು ಪೀಠವನ್ನು ನೀವೇ ಉದ್ಧಾರಮಾಡಬೇಕೆಂದು ಶೃತಪಡಿಸಿದರು. ಉ. ಮಹಾಶ್ರೀಗಳವರು ಹಸನ್ಮುಖರಾಗಿ— ಮಹಾಗುರುಗಳೇ, ಯಜಮಾನರಾದ ತಾವೇ ವಟುವನ್ನು ನೋಡಿ ಅಧಿಕಾರಮಾಡಿರೆಂದು ನುಡಿದರು. ಇರಲಿ ಸ್ವಾಮಿಗಳೇ, ನಮ್ಮ ಮಾತು ಮೀರಬೇಡಿರಿ. ಅಧಿಕಾರಮಾಡಲು ನಿಮ್ಮನ್ನು ಬಿಟ್ಟು ಬೇರೆ ಸಮರ್ಥರಾರೂ ಇಲ್ಲ. ನಿಮ್ಮನ್ನೇ ನಂಬಿದ್ದೇವೆ. ಇಗೋ ನಿಮ್ಮ ಇಷ್ಟಬಂದ ವರಿಯನ್ನು ತಂದು ಪಟ್ಟಾಧಿಕಾರ ಮಾಡಲು ನಿಮಗೆ ನಮ್ಮ ಒಪ್ಪಿಗೆ ಕೊಟ್ಟಿದ್ದೇವೆ. ಇದರಂತೆ ಲೇಖಬರೆದು ಕೊಡುತ್ತೇವೆ. ನೋಡಿರೆಂದು ಉ. ಜ. ಗಳವರ ನಿತ್ಯಾಚಾರ ಡೈರಿಯಲ್ಲಿ ತಮ್ಮ ಸದಭಿಪ್ರಾಯವನ್ನು ಲಿಖಿಸಿದರು. ೪—೮ ದಿವಸಗಳಾದನಂತರ ಪುನಃ ಮಹಾಸವಾರಿಯು ಉಜ್ಜಯಿನಿಗೆ ಆಗಮಿಸಿತು.



## ಉಜ್ಜಯಿನಿಯಲ್ಲಿ ಭೂಗತವಾದ ದೇವಾಲಯ ಶೋಧಿಸಿದ್ದು.

ಮಹಾ ಶ್ರೀಗಳವರು ಉಜ್ಜಯಿನೀ ಮಹಾ ಸಂಸ್ಥಾನಮಠದಲ್ಲಿ ಮುಕ್ಕಾಂ ಮಾಡಿ ಕೆಲವುದಿವಸ ಶಿವಪೂಜಾಲೋಲರಾಗಿರುತ್ತಿರಲು ಪೂರ್ವದಲ್ಲಿ ಶ್ರೀ ಜ. ರೇಣುಕಾದಿ ಪಂಚಪೀಠಾಚಾರ್ಯರು ಪರಸ್ಪರ ಪ್ರತಿ ಪೀಠಗಳಿಗೂ ಗಮನಾಗಮನ ಮಾಡುತ್ತಿರುವ ಪದ್ಧತಿಯಿತ್ತೆಂತಲೂ ಅವರವರಲ್ಲಿಗೆ ಆಗಮಿಸಿದ್ದಾಗ್ಗೆ, ಅವರವರ ಹೆಸರಿನ ಪ್ರತ್ಯೇಕ ಒಂದೊಂದು ಮಠ ( ಮಂದಿರ ) ಗಳು ನಿರ್ಮಾಣವಾಗಿದ್ದವೆಂತಲೂ ಪ್ರಾಚೀನವಾರ್ತೆಯು ತಿಳಿದಿತ್ತು.

ಆದರೆ ಒಂದಾನೊಂದು ದಿವಸ ಈ ಪೂಜ್ಯಪಾದರು ಬ್ರಾಹ್ಮೀಮುಹೂರ್ತದೊಳೆದ್ದು ಕುಳಿತು ಜ್ಞಾನಚಕ್ಷುವಿನಿಂದರಿತು ಎಲಾ ಶೇವಕರೇ ಇಲ್ಲಿ ಬನ್ನಿರಿ! ನಮ್ಮ ಸಂಸ್ಥಾನಮಠಕ್ಕೆ ಅಗ್ನಿದಿಕ್ಕಿನಲ್ಲಿ ಸ್ವಲ್ಪು ದೂರದಲ್ಲಿರುವ ಭೂಮಿಯನ್ನು ಕಡಿದು ಬಗೆಯಿರಿ. ಅಲ್ಲಿವಂದು ದೇವಾಲಯವಿರುವದೆಂದು ಅಪ್ಪಣೆಮಾಡಿದರು. ಬಳಿಕ ಆದೇ ಪ್ರಕಾರ ಹೋಗಿ ಆ ಸ್ಥಲವನ್ನು ೨-೩ ಮೊಳ ಬಗೆಯುತ್ತಿರುವಷ್ಟರಲ್ಲಿಯೆ ಅಪ್ಪಣೆಯಾದಂತೆ ದೇವಾಲಯ ಹೊರಟಿತು. ಈ ಸದ್ವಾರ್ತೆಯು ಗ್ರಾಮದಲ್ಲೆಲ್ಲ ಹರಡಿ ಬಹುಜನರು ಬಂದು ನೋಡಿ ಆನಂದಪಡುತ್ತಿದ್ದರು.

ಮತ್ತು ಮುಂದೆ ಅದನ್ನು ಚನ್ನಾಗಿ ಶೋಧಿಸಲು, ೩ ಅಂಕಣದ ಶಿಲಾಮಂಟಪವೂ ಗರ್ಭಾಂಗಣದಲ್ಲಿ ೧ ದಿವ್ಯವಾದ ಶಿವಲಿಂಗ ಮೂರ್ತಿಯೂ ಚನ್ನಾಗಿ ಕಂಗೊಳಿಸಿದವು. ಹಾಗು ೧ ಶಿಲಾಲಿಪಿಯು ಹೊರಟಿತು. ಅದರಲ್ಲಿ " ಶ್ರೀ ಯೇಕೋರಾಮನಾಥ " ಎಂದು ಲಿಖಿಸಲ್ಪಟ್ಟಿದೆ. ಉಳಿದ ಲೇಖವು ಸರಿಯಾಗಿ ತಿಳಿಯುವಂತಿಲ್ಲ. ಶಿಲಾ ಲಿಪಿಜ್ಞರು ಬಂದು ಓದಿ ನೋಡಬಹುದು. ಇಂತಹ ಮಹತ್ವದ ಸಂಗತಿಗಳು ಮಹಿಮರಾದ ಈ ಮಹಾನುಭಾವರಿಂದ ಅನೇಕ ನಡೆದಿರುತ್ತವೆ.

ಧರ್ಮಗ್ಲಾನಿಯಾಗುವಕಾಲದಲ್ಲಿ ಭಗವದವತಾರವಾಗುತ್ತದೆಂಬುಕ್ತಿಯು ಸಿದ್ಧವಾಯಿತು. ಸದರಿ ದೇವಾಲಯವು ಬಹು ಪುರಾತನ ಕಾಲದ್ದೆಂದು ತಿಳಿದು ಬರುತ್ತದೆ. ಅಪೇಕ್ಷೆಯುಳ್ಳವರು ಆ ಉಜ್ಜಯಿನೀ ಮಹಾಕ್ಷೇತ್ರ ಯಾತ್ರೆಗೆ ಹೋದಾಗ್ಗೆ ಆ ದೇವಾಲಯವನ್ನೂ ಶ್ರೀ ಶಿವಲಿಂಗವನ್ನೂ ನೋಡಿ ಧನ್ಯರಾಗಬಹುದು.

---

## ಮಹಾ ಸಂಸ್ಥಾನದಲ್ಲಿ
## ಶಿಲಾಮಠ ನಿರ್ಮಾಣಮಾಡುವ ಪ್ರಯತ್ನ

( ಈ ಉಜ್ಜಯಿನೀ ಜಗದ್ಗುರು ಪೀಠವನ್ನು ಪೂರ್ವದಲ್ಲಿ ಶ್ರೀ ಜಗದ್ಗುರು ದಾರುಕಾಚಾರ್ಯರು ಸ್ಥಾಪಿಸಿದರು. ಈ ಪೀಠವು ಅತ್ಯಂತ ಪುರಾತನವಾದದ್ದು.

ಈಗಿರುವ ಮಠವು ಕ್ರಿಸ್ತಿ ಶಕ ೨ ನೇ ಶತಮಾನದಲ್ಲಿದ್ದ ಓರ್ವ ಪಾಂಡ್ಯರಾಜನಿಂದ ಕಟ್ಟಿಸಲ್ಪಟ್ಟಿತೆಂಬುವದಕ್ಕೆ ಒಂದು ಶಿಲಾ ಲೇಖವು ದೊರೆತಿದೆ. ಇತ್ತೀಚಿನ ಶಿಲಾ ಲೇಖಗಳೂ ತಾಮ್ರಶಾಸನಗಳೂ ಕೂಡಾ ಅನೇಕವಾಗಿವೆ. ಈ ಪೀಠದ ಮಹತ್ವದ ಮತ್ತು ಪ್ರಾಚೀನತ್ವದ ಬಗ್ಗೆ ಪಾಂಡ್ಯರಾಜನ ಶಿಲಾಲೇಖವೂ ಪೀಠದ ಕಟ್ಟಡವೂ ಸಾಕ್ಷಿಗಳಾಗಿವೆ. )

ತರುವಾಯ ಮಹಾಶ್ರೀಗಳವರು ಒಂದೊಂದೇ ಉನ್ನತೋನ್ನತ ಕಾರ್ಯಗಳನ್ನು ಮಾಡಲುದ್ಯುಕ್ತರಾದರು. ಯೇನಂದರೆ– ನಾವು ಸುಮ್ಮನೆ ಕಾಲಕ್ಷೇಪಮಾಡಬಾರದು. **“ ಮುತ್ತಿಗಿಂತಲೂ ಹೊತ್ತು ಉತ್ತಮ ”** ಎಂಬಂತೆ ಕಾಲದ ಬೆಲೆಯಾಗಿದೆಯಂದರಿತು; ಈ ವಟಕ್ಷೇತ್ರದಲ್ಲಿ ವಿರಾಜಿಸುವ ಮಹಾಸಂಸ್ಥಾನಮಠವು ಬಹು ಪುರಾತನ ಕಾಲದಲ್ಲಿ ಕಟ್ಟಿಗೆಯಿಂದ ನಿರ್ಮಿತವಾಗಿದ್ದು ಅತ್ಯಂತ ಶಿಥಿಲವಾಗಿದೆ. ಬಹುದೂರ ದೇಶಾಂತರಗಳಿಂದ ಅನೇಕ ಜನರು ಈ ಮಹಾಪೀಠ ದರ್ಶನಕ್ಕೆ ಬರುತ್ತಿವದು ಪ್ರಸಿದ್ಧವಾಗಿದೆ. ಅಂದಮೇಲೆ ನಾವು ನೂತನಮಠವನ್ನು ನಿರ್ಮಾಣ ಮಾಡಬೇಕು. ಇದೊಂದು ಕೆಲಸವನ್ನು ಪೂರೈಸುವದು ಯೋಗ್ಯ; ಇದಕ್ಕೆ ೩೦–೪೦ ಸಾವಿರ ರೂಪಾಯಿಗಳ ವೆಚ್ಚವಾಗಬಹುದು. ಆಗಲಿ, ನಮ್ಮ ಅಡಳಿತದ ಕಾಲಮಾನದಲ್ಲಿ ಶಿಲಾಮಠವನ್ನು ನಿರ್ಮಾಣಮಾಡಿಸೋಣ **“ ನರಃಪತಿತಕಾಯೋಪಿ। ಯಶಃಕಾಯೇನಜೀವತಿ ॥ ”** ಎಂಬಂತೆ ಈ ಮಹತ್ಕಾರ್ಯವು ಚಿರಸ್ಮರಣೀಯವಾಗುವದೆಂತಲೂ ಮತ್ತು ಮುಂದೆ ಈ ಮಠದಲ್ಲಿ ಗೋವುಗಳ ಸಂಘವೂ ವಿದ್ಯಾರ್ಥಿಗಳ ಸಮುಹವೂ, ಪಟ್ಟಚರಾಧಿಕಾರಿಗಳವೃಂದವೂ, ಪಂಡಿತ ಮಂಡಲಿಯೂ ಸದಾವಕಾಲ ವಾಸವಾಗಿರುವದಕ್ಕೂ ಹಾಗೂ ಅನ್ನದಾಸೋಹನಿರಂತರದಲ್ಲೂ ಜರಗುವದಕ್ಕೂ ಬಹಳ ಅನುಕೂಲವಾಗುವದೆಂಬ ಸದುದ್ದೇಶದಿಂದ ಶಿಲಾಮಯವಾದ ಬ್ರಹನ್ಮಠವನ್ನು ನಿರ್ಮಾಣಮಾಡಿಸಲಿಕ್ಕೇಬೇಕೆಂದು ದೃಢಸಂಕಲ್ಪವನ್ನು ಮಾಡಿದರು.

ಆದರೆ ಇಂತಹ ಮಹತ್ಕಾರ್ಯಗಳು ದೊಡ್ಡವರಾದ ಮಹನೀಯರಿಂದ ಜರಗುವವಲ್ಲದೆ, ಅಲ್ಪಯೋಗ್ಯತೆಯವರಿಂದಾಗದು. ಹೇಗಂದರೆ– ಕಬ್ಬಿನಗದ್ದೆಯಲ್ಲಿ ಕುರಿಯು ಹೋದರೆ ಕಬ್ಬಿನಗರಿಗಳನ್ನು ಮಾತ್ರ ಜಿಗಿದು ತಿನ್ನುವದು. ಆನೆಯು ಹೊಕ್ಕರೆ ಕಬ್ಬಿನ ಬುಡವನ್ನೇ ಕಿತ್ತುತಿಂದು ಬಿಡುತ್ತದೆ. ಅದರಂತೆ ಈ ಮಹಾನುಭಾವರಲ್ಲಿ ಘನಸಾಮರ್ಥ್ಯತೆಯು ಇದ್ದುದರಿಂದಲೇ ಶಿಲಾಮಠ ನಿರ್ಮಾಣ ಮಹಾಕಾರ್ಯಕ್ಕೆ ಪ್ರಾರಂಭಮಾಡಿದರು.

ಈ ಬೃಹನ್ಮಠವನ್ನು ಕಟ್ಟಿಸುವದಕ್ಕೆ ಕಲ್ಲುಹೊಳೆಗ್ರಾಮದ ವೇ. ಕೆಂಪಯ್ಯನವರನ್ನು ಏರ್ಪಾಟಮಾಡಿದರು. ಮತ್ತು ದ್ರವ್ಯವನ್ನೂ ಇನ್ನುಳಿದ ಸಾಮಾನುಗಳನ್ನೂ ಅನುಕೂಲ ಮಾಡುತ್ತಿದ್ದರು.

## ಆ ಮಠದಲ್ಲಿ ರಚನಾಕ್ರಮ ಹೇಗೆಂದರೆ-

ಸಭಾಮಂಟಪ (೭೭) ಅಂಕಣ, ಶ್ರೀ ಪಂಚಾಚಾರ್ಯ ಸಮ್ಮೇಳನಮಂಟಪ (೫) ಅಂಕಣ, ಗೋವುಗಳಶಾಲಾ (೧೦೮) ಅಂಕಣ, ಭೋಜನ ಸಾಹಿತ್ಯದ ಕೋಟಿ ಖೋಲೆ (ಉಗ್ರಾಣ) ಒಂದೇಸಾರಿಗೆ ಸಾವಿರಾರು ಜನರು ಊಟಕ್ಕೆ ಕೂಡ್ರುವ ಭೋಜನ ಶಾಲಾ, (೫೦) ಜನರು ನಿಂತು ಅಡಿಗೆಮಾಡುವ ಪಾಕಶಾಲಾ ಒಂದು ಬಾಗಿಲದಿಂದ ಹೋದರೆ ಒಳಗೆ (೫) ಕೋಲೆಗಳು, (೧) ರಿಕಾರ್ಡು ಕೋಲೆ, (೨) (೨) ಖಜಾನಿ ಕೋಲೆ, (೩) ಶಿವಪೂಜಾಕೋಲೆ, (೪) ಧರ್ಮಗ್ರಂಥಗಳ ಕೋಲೆ, (೫) ಶಿವಯೋಗಮಂಟಪ ಇದಲ್ಲದೆ ಮೇಲುಭಾಗದಲ್ಲಿ ಜಗದ್ಗುರುಗಳವರ ವಿಶ್ರಾಂತಿ ಮಂಟಪ ಸಭಾಪಂಟಪದಸುತ್ತಲೂ ಶ್ರೀ ಪಟ್ಟಚರಾಧಿಕಾರಿಗಳೂ, ಪಂಡಿತರೂ, ಶಾಸ್ತ್ರಿಗಳೂ, ಶ್ರೀಮಂತರೂ, ಗವ್ಹರ್ನಮೆಂಟ ಅಧಿಕಾರವುಳ್ಳವರೂ ಜಾತ್ರೆಮಹೋತ್ಸವಾದಿಕಾಲಗಳಲ್ಲಿ ವಸತಿಮಾಡಲಿಕ್ಕೆ ಪ್ರತ್ಯೇಕ ಕೋಲಿಗಳೂ ಈ ಪ್ರಕಾರ ನಾನಾ ವಿಧವಾಗಿ ರಚನಾಕ್ರಮವೂ ನಡೆದವು.

### ಶಿಲಾಮಂಟಪಗಳ ನಿರ್ಮಾಣದ ಫಂಡಿಗಾಗಿ ದೇಶಸಂಚಾರ

ಮಹಾಶ್ರೀಗಳವರು ಸಂಸ್ಥಾನದಲ್ಲಿ ಮಠನಿರ್ಮಾಣಕ್ಕೆ ನಿರ್ಧರಿಸಿ ಈ ಘನ ವಾದ ಕಾರ್ಯವು ಶೀಘ್ರದಿಂದ ನಡೆಯುವ ಸಲುವಾಗಿ ಒಂದು ಹೊಸ ಮೋಟರ ಕಾರನ್ನು ಖರೀದಿಮಾಡಿ ಸಂಕ್ಷಿಪ್ತ ಶಿಬ್ಬಂದಿಯೊಡನೆ ಪ್ರಯಾಣ ಬೆಳೆಯಿಸಿ, ಉಜ್ಜಯಿನಿಗೆ (೩೦) ಮೈಲು ದೂರದಲ್ಲಿರುವ ಕೂಡ್ಲಿಗಿ ತಾಲೂಕು ಗುಡೇಕೋಟಿ ಗ್ರಾಮಕ್ಕೆ ಮುಕ್ಕಾಂ ಮಾಡಿದರು. ಆ ಗ್ರಾಮದ ಹತ್ತಿರವೇ ಶಿಲಾಮಯ ಮರಡಿಗಳಲ್ಲಿ ಉತ್ತಮವಾದ ತೊಲೆ-ಕಂಭ-ಬೋದು ಮುಂತಾದವುಗಳನ್ನು ವಡ್ಡರಿಂದ ಒಡಿಸಿ, ತಯ್ಯಾರಮಾಡಿಸಿ ಅಲ್ಲಿಂದ ಉಜ್ಜಯಿನೀ ಸಂಸ್ಥಾನಮಠಕ್ಕೆ ಆಗಾಗ್ಗೆ ರವಾನೆಮಾಡುತ್ತಿರುವಂತೆ ಯೇರ್ಪಾಟ ಮಾಡಿದರು.

---

### ಮಹಾ ಶ್ರೀಗಳವರಿಗೆ ಗಜದಾನವು

ಬಳ್ಳಾರಿ ಜಿಲ್ಲಾ ರಾಯದುರ್ಗ ತಾಲೂಕು, ಕಲ್ಲುಹೊಳೆ ಗ್ರಾಮದ ಮಠಾಧಿಕಾರಿಗಳಾದ ವೇ|| ಕಲ್ಲುಹೊಳೆಯಪ್ಪಯ್ಯನವರು ಸತ್ಕಾರ್ಯ ನಿರತರಾಗಿರಲು, ತಾವು ಸಂಪಾದಿಸಿದ ದ್ರವ್ಯವು ಸತ್ಪಾತ್ರಕ್ಕೆ ಸಲ್ಲಬೇಕೆಂಬ ಸಂಕಲ್ಪದಿಂದ ತಮ್ಮ ಮಠವನ್ನು ೧೫-೨೦ ಸಾವಿರ ರೂಪಾಯಿಗಳನ್ನು ವೆಚ್ಚಮಾಡಿ, ನೂತನ ಶಿಲೆಗಳಿಂದ ನಿರ್ಮಾಣ ಮಾಡಿಸಿದರು.

ಮುಂದೆ ಈ ಶಿಲಾಮಠ ಪ್ರವೇಶೋತ್ಸವಕ್ಕೆ ಮಹಾಗಣಾಸಮಾರಾಧನೆ ಮಾಡಿ ಪಂಚ ಪೀಠಗಳ ಪೈಕಿ ಒಬ್ಬ ಜಗದ್ಗುರುಗಳವರನ್ನು ದಯಮಾಡಿಸಿಕೊಂಡು, ಗಜ ದಾನಮಾಡಿ ಕೃತಾರ್ಥರಾಗಬೇಕೆಂದು ಸಂಕಲ್ಪಮಾಡಿಕೊಂಡು, ಉಜ್ಜಯಿನೀ ಮಹಾ ಶ್ರೀಗಳವರಿಗೆ ಬಿನ್ನಹಿಸಿ, ಕೆಲವು ದಿವಸಗಳಲ್ಲಿಯೇ ಸಕಲ ಸಿದ್ಧತೆಮಾಡಿ ಕೊಂಡು ಪ್ರಸಿದ್ಧಪತ್ರಿಕೆ ಮುದ್ರಣಗೊಳಿಸಿ, ಸರ್ವತ್ರ ಪ್ರಚಾರಮಾಡಿದರು. ಆ ಪ್ರಕಾರ ತಾ. ೨೬-೪-೧೯೩೦ ನೇ ದಿವಸ ಸಮಸ್ತ ಬಿರುದಾವಳಿಯೊಡನೆ ಮಹೋ ತ್ಸವ ಜರಗಿತು. ಬಳಿಕ ಮಹಾಪಾದಪೂಜಾ, ಭೂರಿಗಣಾರಾಧನೆ, ಮುಂತಾದ ಕಾರ್ಯಕ್ರಮಗಳು ನಡೆದು ೧ ಗಜಲಕ್ಷ್ಮೀ ದಾನಮಾಡಿದರು.

ಆ ಸಮಯಕ್ಕೆ ಸಮ್ಮಿಲಿತರಾದ ಜನಸಮೂಹಕ್ಕೆ, ಆಸ್ಥಾನಪಂಡಿತರೂ ಶಾಸ್ತ್ರಿಗಳೂ ಸತ್ಪಾತ್ರದಾನ, ಗುರುಶೇವೆ ಇತ್ಯಾದಿ ವಿಷಯಗಳಮೇಲೆ ಭಾಷಣವನ್ನು ಮಾಡಿ ಸಂತೋಷಪಡಿಸಿದರು.

---

## ಬಳ್ಳಾರಿಯಲ್ಲಿ ಅಭೂತಪೂರ್ವವಾದ ಅಡ್ಡಪಲ್ಲಕ್ಕಿ ಮಹೋತ್ಸವವು

ಇತಿಹಾಸ ಪ್ರಸಿದ್ಧವಾದ ಬಳ್ಳಾರಿ ನಗರದಲ್ಲಿ ವೀರಶೈವ ಜನಾಂಗವು ಅಧಿಕ ವಾಗಿರುವದಲ್ಲದೆ ಶ್ರೀಮಂತರೂ, ಧೀಮಂತರೂ, ಪದವೀಧರರೂ, ವರ್ತಕಮಂಡ ಲಿಯೂ ನಿವಾಸಸ್ಥಲವಾಗಿದೆ.

ಈ ಬಳ್ಳಾರಿ ಪ್ರಮುಖ ಮಂಡಳಿಯು ಸೇರಿ ಭುವನ ಪ್ರಸಿದ್ಧರಾದ ಶ್ರೀಮದು ಜ್ಜಯಿನೀ ಸ॥ ಸಿಂ॥ ಜಗದ್ಗುರು ಭಗವತ್ಪಾದರವರನ್ನು ತಮ್ಮ ನಗರದಲ್ಲಿ ಅತಿ ವೈಭವ ದಿಂದ ಮಹೋತ್ಸವವನ್ನು ಜರುಗಿಸಬೇಕೆಂದು ನಿರ್ಣಯಿಸಿ, ಆ ಮಹಾತ್ಮರಲ್ಲಿಗೆ ಬಂದು ಅರಿಕೆಮಾಡಿಕೊಳ್ಳಲು, ಸನ್ನಿಧಿಯವರು ಒಪ್ಪಿಗೆಯನ್ನಿತ್ತು ಕಳುಹಿಸಿದರು. ಬಳಿಕ ತಮ್ಮ ಸಂಸ್ಥಾನದ ಎಜಂಟರಾದ ಟಿ. ಎಂ. ಸಿದ್ಧಯ್ಯನವರಿಂದ ಡಿಸ್ಟ್ರಿಕ್ಟ ಮೆಜಿ ಸ್ಟ್ರೇಟರವರಲ್ಲಿ ಅಪ್ಲಿಕೇಷನ್ ಹಾಕಿಸಲು, ಗೌರ್ನಮೆಂಟಿನವರಿಂದ ೭೨ ಬಿರುದಾವಳಿಗ ಳೊಡನೆ ಮಹೋತ್ಸವ ನಡೆಯಬಹುದೆಂದು ಆರ್ಡರ (ಹುಕುಂ) ಸಿಕ್ಕಿತು.

ಅನಂತರ ಬಳ್ಳಾರಿ ವೀರಶೈವ ಮಂಡಲಿಯವರು ಅತ್ಯುಲ್ಹಾಸಭರಿತರಾಗಿ ಸಕಲ ಸಾಹಿತ್ಯಾದಿಗಳನ್ನು ಸಿದ್ಧಗೊಳಿಸಿ, ತಾ. ೧೨-೧೨-೧೯೩೦ ನೇ ದಿವಸ ಮಹಾಶ್ರೀಗಳ ವರ ಮಹೋತ್ಸವ ಜರುಗುವದೆಂದು ಪ್ರಸಿದ್ಧ ಪತ್ರಿಕೆಗಳನ್ನು ಮುದ್ರಣ ಮಾಡಿಸಿ, ಸಮಸ್ತ ದೇಶದ ಮಹಾಜನಂಗಳಿಗೆ ರವಾನೆಮಾಡಿದರು.

ಮಹೋತ್ಸವದ ಜಾಹೀರ ಪತ್ರಗಳು ಹೋದಕೂಡಲೇ ಅನೇಕ ಗ್ರಾಮಗಳಿಂದ ಜನಸಂದಣಿಯು ೨-೩ ದಿವಸ ಮುಂಚಿತವಾಗಿಯೇ ಅಸಂಖ್ಯಾತವಾಗಿ ಬಂದು, ಬಳ್ಳಾರಿ ಪಟ್ಟಣವನ್ನು ತುಂಬಿದರು.

ಪಟ್ಟಣವು ಧ್ವಜ-ಪತಾಕೆಗಳಿಂದಲೂ, ರಂಭಾಸ್ತಂಭ, ತಳಿರು-ತೋರಣಗಳಿಂದಲೂ, ವಿಶ್ರಾಂತಿ ಮಂಟಪಗಳಿಂದಲೂ, ಚಿತ್ರ-ವಿಚಿತ್ರಗಳಾದ ಕೈಗಾರಿಕೆ, ಕಲಾ ಕೌಶಲ್ಯಗಳಿಂದಲೂ ಬಹು ರಮಣೀಯವಾಗಿ ಕಂಗೊಳಿಸುತ್ತಿತ್ತು. ಆ ದಿವಸ ( ತಾ. ೧೨—೧೨—೧೯೩೦ ) ಉದಯ ೮ ಗಂಟೆಗೆ ಶೃಂಗರಿಸಲ್ಪಟ್ಟ ಉನ್ನತವಾದ ಸುವರ್ಣ-ರಜತ ಮಿಶ್ರಿತ ಆಂದೋಲಿಕೆಯಲ್ಲಿ ಮಹಾ ಜಗದ್ಗುರುಗಳವರು ಮೂರ್ತ ಮಾಡಲು, ಜಯ ಜಯ ಧ್ವಾನದಿಂದಲೂ, ಅನೇಕವಿಧ ವಾದ್ಯಗಳಿಂದಲೂ, ಭಜನಾ ಸಂಘದವರ ವೇದಘೋಷಕರ ಮಂಗಲ ಧ್ವನಿಯಿಂದಲೂ, *(೭೨) ಬಿರುದಾವಳೀಗಳಿಂದಲೂ ಕಲ್ಯಾಣಮಠದಿಂದ ಮಹೋತ್ಸವವು ಹೊರಟು, ಮುಖ್ಯ ಮುಖ್ಯ ರಾಜ ಬೀದಿಗಳಲ್ಲಿ ಮಂದಗತಿಯಿಂದ ಸಾಗುತ್ತಿದ್ದಿತು. ಆ ಸಮಯದ ನೋಟವು ಮಹಾ ಸಾಗರದಂತೆ ಕಣ್ಮನಂಗಳಿಗೆ ಅಮಿತಾನಂದವನ್ನುಂಟುಮಾಡುವದಾಗಿತ್ತು.

ಸುವರ್ಣ-ರಜತ ಮಿಶ್ರಿತ ತಿರ್ಯಗಾಂದೋಲನದಲ್ಲಿ ವಿರಾಜಿಸುವ ತೇಜಃಪುಂಜರಾದ ಮಹಾತ್ಮರನ್ನು ಪ್ರೇಕ್ಷಕರು ಅನಿಮಿಷ ದೃಷ್ಟಿಯಿಂದ ನೋಡುತ್ತ ಆಹಾ ಈ ಮಹಾನುಭಾವರಿಂದ ನಮ್ಮ ವೀರಶೈವ ಮತವು ಉಚ್ಛ್ರಾಯವನ್ನು ಹೊಂದಿತು. ನಮ್ಮ ಜನ್ಮ ಸಾರ್ಥಕವಾದವು. ನಾವು ಧನ್ಯರಾದೆವೆಂದು ಆನಂದೋದ್ಗಾರಗಳನ್ನು ತೆಗೆಯುತ್ತಿದ್ದರು. ಮಹೋತ್ಸವವು ಶ್ರೀ ಮರಿಸ್ವಾಮಿಗಳವರ ಮಠಕ್ಕೆ ತಲ್ಪಿತು. ದಿವ್ಯ ಸಿಂಹಾಸನದಲ್ಲಿ ಶ್ರೀ ಭಗವತ್ಪಾದರವರು ಮಂಡಿಸಲು, ಶ್ರೀ ಜಗದ್ಗುರು ಸಿದ್ಧಲಿಂಗರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾ ಸ್ವಾಮಿನಾಂ ಬಹು ಪರಾಕು ಎಂಬ ಜಯ ಜಯಧ್ವಾನಗಳಾದವು.

---

* (೭೨) ಬಿರುದಾವಳಿ ಹೆಸರು— ಅಡ್ಡಪಾಲಕಿ, ಸುವರ್ಣಪಾಲಕಿ, ರಜತಪಾಲಕಿ, ಪಾಲಕಿ, ಮೇಣೆ, ಪಂಚಕಲಶ, ವ್ಯಾಸಹಸ್ತ, ಶ್ವೇತಛತ್ರ, ನಂದಿಧ್ವಜ, ಆಪ್ತಾಗಿರಿ, ಪಂಚವರ್ಣದ ಛತ್ರ, ಚಾಮರ, ವ್ಯಜನ, ಭೂಚಕ್ರದ ಕೊಡೆ, ಮಕರತೋರಣ, ರಾಜಗೊಂಡೆ, ಹಗಲುದೀವಟಿಗೆ, ಪಂಚ ದೀವಟಿಗೆ, ಬ್ರಹ್ಮಕಪಾಲ, ಸುವರ್ಣಪಾದಪೆಂಡೆ, ರಜತದಂಡ, ಸುವರ್ಣಭಲ್ಲೆ, ರಜತಭಲ್ಲೆ, ತ್ರಿಶೂಲ, ಹಸರುನಿಶಾನಿ, ಕೆಂಪುನಿಶಾನಿ, ಕಾವಿಯನಿಶಾನಿ, ನಾನಾವರ್ಣದ ನಿಶಾನಿ, ನೀಲಿನಿಶಾನಿ, ಅಶ್ವ, ಗಜ, ಒಂಟೆ, ಆನೆಯಮೇಲೆ ಹಸರುನಿಶಾನಿ, ಒಂಟೆಯಮೇಲೆ ಹಸರುನಿಶಾನಿ, ಆನೆಯಮೇಲೆ ಕಾಷಾಯ ಧ್ವಜ, ಕುದುರೆಯಮೇಲೆ ಢಂಕಾ, ಆನೆಯಮೇಲೆ ಢಂಕಾ, ಒಂಟೆಯಮೇಲೆ ಢಂಕಾ, ಜಯ ಭೇರಿ, ಜಯಘಂಟೆ, ಜಂಗು, ಡಮರು, ಕಹಳೆ, ಕರ್ನಿ, ಜಾಗಟೆ, ಸುನಾದ, ಸೂರ್ಯವಾದ್ಯ, ಚಂದ್ರವಾದ್ಯ, ಮೃದಂಗ, ತಾಳ, ಪದಾತಿಗಣ, ಶಸ್ತ್ರಧಾರಿ, ತ್ರಿಶೂಲಧಾರಿ, ರಥ, ಪಂಚಾಶ್ವರಥ, ಬಲೀವರ್ದ, ಬಲೀವರ್ದರಥ, ದರ್ಪಣ, ವೇದಪಾಠಕ, ವಿಪ್ರವೀರ, ಮಾಹೇಶ್ವರ ಗಣ, ಭಜನಾ ಮಂಡಳಿ, ಭಟ್ಟಂಗಿ, ಸುಮಂಗಲ ಆರತಿ, ಪೌರಾಣಿಕ, ಕೀರ್ತನಕಾರ, ವೈಯ್ಯಾಕರಣ, ನೈಯ್ಯಾಯಿಕ, ಷಡ್‌ದರ್ಶನ ಪಾರಂಗತ.

ತರುವಾಯ ಮಹಾಸಭೆಯು ಭರಾಯಿಸಿತು. ಆಸ್ಥಾನ ಪಂಡಿತರೂ, ವಕೀಲರೂ, ವಿದ್ವಾಂಸರೂ ಗುರುಭಕ್ತಿ, ಗುರುದರ್ಶನ, ಮಾನವಧರ್ಮ ಮುಂತಾದ ವಿಷಯಗಳಲ್ಲಿ ಬಹುಸ್ವಾರಸ್ಯವಾದ ಭಾಷಣಗಳು ಮಾಡಿದ ಬಳಿಕ ಮಹಾ ಶ್ರೀಗಳವರು ತಮ್ಮ ಅಮೃತವಾಣಿಯಿಂದ ಅಲ್ಪಾವಧಿಯಲ್ಲೆ ಧರ್ಮೋಪದೇಶವಾಕ್ಯಗಳನ್ನು ಅಪ್ಪಣೆ ಕೊಡಿಸಿದರು. ಮಹಾಮಂಗಲಮಾಡಿ ಸರ್ವರಿಗೂ ಫಲಾಶೀರ್ವಾದಗಳನ್ನಿತ್ತು; ಶ್ರೀ ಜ. ಪಂ. ಜಯಘೋಷದಿಂದ ಸಭಾ ಮುಕ್ತಾಯಮಾಡಲಾಯಿತು.

---

## ಶಿಖಾಧಾರಣದ ವಿಷಯದಲ್ಲಿ ಶ್ರೀ ಜಗದ್ಗುರು ಉಜ್ಜಯಿನೀ ಪೀಠಾಧೀಶ್ವರರು ಕೊಟ್ಟ ಹುಕುಂ

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಶ್ರೀಮದ್ವೇದವೇದಾಂತ ಸಿದ್ಧಾಂತ ಪ್ರತಿಪಾದಿತ ವೀರಶೈವ ಮಹಾಮತ ಸ್ಥಾಪನಾಚಾರ್ಯ ಶ್ರೀಮತ್ಪರಶಿವದಕ್ಷಿಣಲಪನೋದ್ಭವ ಜಗದ್ಗುರು ದಾರುಕ ಶಿವಾಚಾರ್ಯ ಪರಂಪರಾಗತ ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿನಾಂ

### ದೀಕ್ಷಾಗುರುಸ್ಥಾನದಿಂದ

ಶ್ರೀಮದ್ಧರಗುರುಚರಚರಣಾರವಿಂದ ಮಕರಂದ ಮಧುಕರಾಯಮಾನರಾದ ನೈಜಾಮ ಇಲಾಖಾ ಕಲ್ಯಾಣ ಪ್ರಾಂತಕ್ಕೆ ಸೇರಿದ ಬಿದರಕೋಟಿ, ಮುಧೋಳ, ಹಾಲಹಳ್ಳಿ, ಬ್ಯಾಲಹಳ್ಳಿ, ಡೋಣಗಾಂವ ಈ ಯಾವತ್ತೂ ಗ್ರಾಮನಿವಾಸಿಗಳಾದ ಶ್ರೀಮತ್ಪಟ್ಟಚರಾಧಿಕಾರಿಗಳು ಮಠ, ಮಠಪತ್ತಿ, ದೇಸಾಯಿ, ಪಾಟೀಲ, ಶ್ಯಾನಭೋಗ ಈ ಯಾವತ್ತೂ ಸದ್ಭಕ್ತರು ಇವರಿಗೆ ಸಕಲ ಶಿವಸಾಮ್ರಾಜ್ಯ ಸಮೃದ್ಧಿರಸ್ತು ಇತ್ಯಾಶೀರ್ವಾದ ನಿರೂಪಮುದಾಗಿ.

ಮಹಾಗುರುಪೀಠಕ್ಕೆ ತಾವುಗಳು ಶಿಖಾಧಾರಣವನ್ನು ಮಾಡಿಕೊಳ್ಳುವದಕ್ಕೆ ತಮ್ಮ ಅಪ್ಪಣೆಯನ್ನು ಕೋರುತ್ತೇವೆಂದು ಬಿನ್ನೈಸಿಕೊಂಡ ಪತ್ರಿಕೆಯು ಶ್ರೀಮತ್ ಯಡಕೇರಿ ಕಟ್ಟಿಮನೆ ಸಾವಿರ ದೇವರು ಚರಮೂರ್ತಿಗಳಾದ ಶಿವಶಂಕರದೇವರ ಮರಿದೇವರಾದ ಸಿದ್ಧರಾಮಪ್ಪನವರಿಂದ ತಲ್ಪಿತು. ನೋಡುವಲ್ಲಿ ಸರ್ವ ವಿಷಯಗಳು ಅವಗಾಹಿಸಲ್ಪಟ್ಟವು. ಆದರೆ

ಶ್ರೀ ವೇದಾಗಮವೀರಶೈವಸರಣಿಂ ಶ್ರೀ ಷಟ್‌ಸ್ಥಲೋಪ್ಯನ್ಮಣಿಂ ।
ಶ್ರೀ ಜೀವೇಶ್ವರಯೋಗಪದ್ಮತರಣಿಂ ಶ್ರೀ ಗೋಪ್ಯಚಿಂತಾಮಣಿಂ ।

ಶ್ರೀ ಸಿದ್ಧಾಂತಶಿಖಾಮಣಿಂಲಿಖಯಿತಾ ಯಸ್ತಂ ಲಿಖಿತ್ವಾಪರಾನ್।
ಶೃತ್ವಾಶ್ರಾವಯಿತಾಸಯಾತಿ ವಿಮಲಾಂ ಭಕ್ತಿಂಚ ಮುಕ್ತಿಂಪರಾಂ ॥

ಶ್ರೀ ಮಹಾಗುರು ಗುರುಸಾರ್ವಭೌಮನಾದ ಜಗದ್ಗುರು ಶ್ರೀ ರೇವಣಸಿದ್ಧೇಶ್ವರ ಮಹಾಸ್ವಾಮಿಯ ಉಪದೇಶಸ್ವರೂಪವಾದ ಈ ಸಿದ್ಧಾಂತ ಶಿಖಾಮಣಿನಾಮಕ ಗ್ರಂಥವನ್ನು ಯಾವನು ಬರೆಯಿಸುತ್ತಾನೋ, ಯಾವನು ಶ್ರವಣಮಾಡಿಸುತ್ತಾನೋ, ಯಾವನು ಬರೆದು-ಬರೆಯಿಸಿ ಕೇಳಿ ಕೇಳಿಸುತ್ತಾನೋ ಅವನು ನಿರ್ಮಲವಾದ ಭಕ್ತಿಯನ್ನೂ, ಶ್ರೇಷ್ಠವಾದ ಮುಕ್ತಿಯನ್ನೂ ಪಡೆಯುತ್ತಾನೆಂದು ಆರ್ಯೋಕ್ತಿಯಿರುವದರಿಂದ ಸಾಕ್ಷಾತ್ ಈ ಗ್ರಂಥದಲ್ಲಿ ಉಕ್ತವಾದ ಧರ್ಮಾಚರಣೆಯಲ್ಲಿ ತತ್ಪರರಾದ ಶಿವಭಕ್ತರಿಗೆ ಶ್ರೇಷ್ಠವಾದ ಭಕ್ತಿ, ನಿರ್ಮಲವಾದ ಮುಕ್ತಿ ಶೀಘ್ರದಲ್ಲಿ ದೊರೆಯದಿರಲಾರದೆಂದು ಬೇರೆ ಹೇಳಬೇಕಾಗಿಲ್ಲ.

ಆದಕಾರಣ ತಾವು ಕೇಳಿಕೊಳ್ಳುವ ಅಪ್ಪಣೆಯನ್ನೇ ಶ್ರೀಮದ್ಭಗವತ್ಪಾದ ರೇವಣಸಿದ್ಧೇಶ್ವರ ಮಹಾಸ್ವಾಮಿಯು ಅಪ್ಪಣೆ ಕೊಟ್ಟಿರುವದೇನಂದರೆ— ॥ ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ ॥ ಇತಿ. ವೀರಶೈವನಾದವನು ಶಿಖಾಧಾರಣವನ್ನು ಮಾಡಿಕೊಂಡು ಆ ಶಿಖೆಗೆ ಒಂದು ಅಥವಾ ಐದು ಮುಖಗಳುಳ್ಳ ರುದ್ರಾಕ್ಷಿಯೊಂದನ್ನು ಧರಿಸಬೇಕೆಂತಲೂ, ಈ ರೀತಿ ಧರಿಸಿದ ಶಿವಭಕ್ತನಿಗೆ "ತಸ್ಯ ಪಾಪಕಥಾ ನಾಸ್ತಿ ಮೂಢಸ್ಯಾಪಿನ ಸಂಶಯಃ" ಪಾಪದ ಸುದ್ದಿಯೇ ಇಲ್ಲವೆಂದು ಮಹಾಗುರುವಿನ ಅಪ್ಪಣೆಯಿರುವದರಿಂದ ವೀರಶೈವರಾದವರು ಶಿಖೆಯನ್ನು ವಿಧಿವತ್ತಾಗಿ ಬಿಟ್ಟು ಶಿಖಿಯಲ್ಲೊಂದು ರುದ್ರಾಕ್ಷಿಯನ್ನು ಧರಿಸುವದಕ್ಕೆ ಶ್ರುತಿಗುರುಗಳ ಅಪ್ಪಣೆ ಇರುವದಾಗಿ ಈ ಪತ್ರಮೂಲಕ ತಮ್ಮಗಳಿಗೆ ನಿರೂಪಿಸಿದೆ.—

ತಾ. ೧೨–೭–೧೯೩೦. ಮುಕ್ಕಾಂ— ಅಮಲಾಪೂರ ತಾಲೂಕ ಕೂಡ್ಲಗಿ.
(ತಾ. ೧೦–೯–೧೯೩೦ ನೇ ಪಂ. ಪ್ರಭಾ)

## ಈ ಶಿಖಾಧಾರಣ ವಿಷಯದಲ್ಲಿ ಬೇರೆ ಪ್ರಮಾಣ ಗ್ರಂಥಗಳು.

೧ ವೀರಾಗಮ ಪಟಲ ೯–೧೪
೨ ಪಾರಗಮೇಶ್ವರಾಗಮ ಪಟಲ ೧೭
೩ ಶಿವಪುರಾಣ ವಾಯವೀಯ ಸಂಹಿತೆಯಲ್ಲಿ ಉ. ಭಾ. ಅ. ೧೨
೪ ಲಿಂಗಪುರಾಣ (ಅಧ್ಯಾಯ ೧೧)
೫ ಶಿದ್ಧಾಂತ ಶಿಖಾಮಣಿ ಪರಿ ೭
೬ ಕ್ರಿಯಾಸಾರ ಉಪದೇಶ ೬–೧೨–೨೦
೭ ಗೌತಮ ಸ್ಮೃತಿ
೮ ವೇದಾಂತಸಾರ ವೀ. ಚಿಂ. ಪ್ರ. ೮–೧೨

೯ ವೀರಶೈವ ಸದಾಚಾರ ಸಂಗ್ರಹ ಪ್ರಕರಣ ೮–೧೧–೧೪
೧೦ ವೀರಶೈವಾಚಾರ ಪ್ರದೀಪಿಕೆಯಲ್ಲಿ ( ಅಧ್ಯಾಯ ೧೦–೧೦–೩೨ )
೧೧ ವಿವೇಕಚಿಂತಾಮಣಿ ( ೨ ನೇ ಪ್ರಕರಣ )
೧೨ ರಾಜಶೇಖರವಿಳಾಸ ( ಅಧ್ಯಾಯ ೧೪ )
೧೩ ವೀರಶೈವ ಧರ್ಮ-ಶಿರೋಮಣಿ ( ಪರಿವೆ ೩–೫೪ )
೧೪ ರುದ್ರಾಕ್ಷಜಾಬಾಲೋಪನಿಷತ್ ೧–೧೫
೧೫ ಶ್ರೀಕರಭಾಷ್ಯ (೧–೧–೧) ೧–೨–೧
೧೬ ವೃಷಭೇಂದ್ರವಿಜಯ (ವೃತ್ತ) ತೆಗೆದುತ್ಸಂಗದೋಳಿಟ್ಟು ಚಂಡಿಕೆಯ ನೊಳ್ಪಿಂಕಟ್ಟಿ ಸಂಪ್ರೀತಿ ಕೈಮಿಗೆ ಪೂಮಾಲೆಯಸುತ್ತಿ .... ....
೧೭ ಬಸವ ಪುರಾಣ (ಭಾ. ಷ.) ಹರುಷದಿಂತನ್ನೂರು ಪೀಠದೋಳಿರಿಸಿ ಚಂಡಿಕೆಯಂಬಿಗಿದು ಬಿಗಿ-ದೆರಡು ಕೈಯಲಿಬಾಚಿ .... ....
೧೮ ವೀರಶೈವ ಷ. ಸಿದ್ಧಾಂತ

ಇತ್ಯಾದಿ.

---

## ಭಸ್ಮಪ್ರಭಾವವೂ ಗುಲ್ಮರೋಗ ನಿವಾರಣೆಯೂ

ಹೂವಿನಹಡಗಲಿ ತಾಲೂಕು ಕತ್ತಿಬೆನ್ನೂರು ಗ್ರಾಮದಲ್ಲಿ ಹಿ। ಹ। ಹೊಸಮನಿ ಗೌರವ್ವನೆಂಬ ಗುರುಭಕ್ತಳಿಗೆ ಕೆಲದಿವಸ ಜ್ವರ ಬಂದು, ಗುಲ್ಮರೋಗ (ಹೊಟ್ಟೆಯಲ್ಲಿ ಗಡ್ಡೆ) ಬೆಳೆಯಿತು. ಬಹಳ ಬಾಧೆಯಾಗಲು, ಅನೇಕ ರೀತಿ ಚಿಕಿತ್ಸೆಮಾಡಿಸಿದರೂ ಗುಣಹೊಂದಲಿಲ್ಲ. ಶಿವ ಶಿವ! ಮುಂದೇನು ಮಾಡಲಿ, ಯಾವ ಮಹನೀಯರಿಂದ ನನಗೆ ಸುಖವಾದೀತೆಂದು ಹಗಲಿರಳೂ ವೆಸನಪಡುತ್ತಿದ್ದಳು. ದೇಶಾಟನಮಾಡುವ ಭಿಕ್ಷುಕ ಜಂಗಮರು ಬಂದಾಗ ನೋಡಿ ಕನಿಕರಪಟ್ಟು, ಅಮ್ಮಾ ಉಜ್ಜಯಿನೀ ಜ॥ ಸಿದ್ಧಲಿಂಗ ಮಹಾಸ್ವಾಮಿಗಳು ಬಹಳ ಮಹನೀಯರು, ಅವರ ದರ್ಶನಮಾಡಿಕೊಂಡರೆ ನಿನಗೆ ಸುಖವಾಗುವದೆಂದು ಹೇಳಿದರು.

ಆಗ ಸಂತೋಷದಿಂದ ಮಹಾಗುರುವೇ ನೀನೆಲ್ಲಿರುವಿ, ನಿನ್ನ ದರ್ಶನವೆಂದಿಗೆ ಆದೀತು, ನನ್ನಂಥ ಹಳ್ಳಿಯ ವಾಸಿಯಾದ ಅಬಲೆಗೆ ನಿನ್ನ ಪಾದಗಳೆಂತು ಕಾಣುವವು, ಎಂದು ಗುರುನಾಮ ಸ್ಮರಣೆಮಾಡುತ್ತಾ ಕಾಲಕ್ಷೇಪಮಾಡುತ್ತಿದ್ದಳು.

ಅಷ್ಟರಲ್ಲಿ ಆಮಹಾಸನ್ನಿಧಿಯಿಂದ ಅಕಸ್ಮಾತ್ ಹಿ। ಹ। ಪು। ವಿರೂಪಾಕ್ಷಶಾಸ್ತ್ರಿಗಳವರ ದರ್ಶನವಾಯಿತು. ತನ್ನ ರೋಗದ ವಿಷಯ ಅರಿಕೆಮಾಡಿಕೊಳ್ಳಲು, ಒಳ್ಳೇದಮ್ಮಾ, ಅವರು ಮಹನೀಯರು ಅಲ್ಲಿಗೆ ಹೋಗೋಣ ಬಾರೆಂದು ಹೇಳಲಾಗಿ,

ಆಕೂಡಲೇ ಗೌರಮ್ಮನು ಸದರಿ ಶಾಸ್ತ್ರಿಗಳವರ ಧರ್ಮಪತ್ನಿಯಾದ ಸೌ॥ ಚೆನ್ನ ವೀರಾಂಬೆಯೊಡಗೂಡಿ, ಪ್ರಮೋದೂತ ಸಂ॥ ವೈಶಾಖ ಶು॥ ೫ ಗೆ ಉಜ್ಜಯಿನಿಗೆ ಹೋಗಿ ವಂದಿಸಿ, ತನ್ನ ರೋಗಬಾಧೆಯನ್ನು ಅರಿಕೆಮಾಡಿಕೊಂಡಳು. ಕರುಣಾಳು ವಾದೀ ಮಹಾತ್ಮರು ಅಮ್ಮಾ ಚಿಂತಿಸಬೇಡ. ಇಗೋ, ಈ ಭಸ್ಮದಘಟ್ಟಿಯನ್ನು ತೆಗೆದುಕೋ, ದಿನಾಲು ನೀರಿನಲ್ಲಿ ಸ್ವಲ್ಪುಪುಡಿಯನ್ನು ಹಾಕಿ, ಸ್ವೀಕಾರಮಾಡು. ಗುರುವು ಸುಖವನ್ನುಂಟುಮಾಡುವನು. ಕೇವಲ ಭಕ್ತಿಯಿಂದ ಸ್ವೀಕರಿಸು, ನಂಬಿಗೆಯೇ ಮುಖ್ಯ ಕಾರಣವೆಂದು ಆಶೀರ್ವದಿಸಿ ಕೊಟ್ಟರು.

ಗೌರಮ್ಮನು ಭಕ್ತಿಯಿಂದ ಅದನ್ನು ತೆಗೆದುಕೊಂಡು, ವಿದ್ಯಾಫಂಡಿಗೆ ೫೦ ರೂ. ಗಳನ್ನು ಒಪ್ಪಿಸಿ, ಹಿಂದಿರುಗಿ ಬಂದು, ಆ ಭಸಿತವನ್ನು ಪರಮ ಪೂಜ್ಯಬುದ್ಧಿಯಿಂದ ಸ್ವೀಕರಿಸುತ್ತಿರಲು, ೪-೬ ತಿಂಗಳಲ್ಲಿಯೇ ಆ ಗುಲ್ಮರೋಗವು ನಿವಾರಣೆಯಾಯಿತು. ದೇಹದಲ್ಲಿ ನವಚೈತನ್ಯವುಂಟಾಗಿ, ಆನಂದದಲ್ಲಿ ತೇಲಾಡಿದಳು. ಪುನಃ ಶಾಸ್ತ್ರಿಗಳವರನ್ನು ಕರೆಯಿಸಿಕೊಂಡು, ಅಪ್ಪಾ ಆ ಸದ್ಗುರುವಿನ ಕೃಪೆಯಿಂದ ರೋಗ ನಿವಾರಣೆಯಾಯಿತು. ನಿನ್ನಿಂದ ಆ ಮಹಿಮರ ಪಾದ ಕಂಡೆನು. ಆ ಗುರುವಿನ ಸೇವೆಗೆ ಏನು ಸಲ್ಲಿಸಲಿ ಎಂದು ಕೇಳಲು, ಅಮ್ಮಾ ಆ ಮಹಾನುಭಾವರು ಕೈಕೊಂಡಿರುವ ಶಿಲಾಮಠದ ಒಂದು ಮಂಟಪಕ್ಕೆ ಸಲ್ಲುವ ೧೫೦ ರೂಪಾಯಿಗಳನ್ನು ಕೊಡಬೇಕೆಂದು ಹೇಳಲು, ಆ ಪ್ರಕಾರ ಪುನಃ ಸನ್ನಿಧಿಗೆ ಹೋಗಿ ವಂದಿಸಿ, ತಂದೆಯೇ ಹರ ಮುನಿವರೂ ಗುರು ಕಾಯುವ್ನೆಂಬ ನುಡಿಯು ಧಿಟವಾಯಿತೆಂದು ಕೊಂಡಾಡಿ, ಸದರೀ ರೂಪಾಯಿ ಸಲ್ಲಿಸಿ, ಆಶೀರ್ವಾದ ಪಡೆದು ಬಂದಳು.

---

## ಉಜ್ಜಯಿನಿ ಜ॥ ಶ್ರೀ ಮರುಳಸಿದ್ಧಮಹಾಸ್ವಾಮಿಗಳು ಲಿಂಗೈಕ್ಯರಾದದ್ದು

ಈ ಮಹಾಸ್ವಾಮಿಗಳು ಬಹು ಕುಶಲಮತಿಗಳೂ ಧೈರ್ಯಶಾಲಿಗಳಾಗಿದ್ದರಲ್ಲದೆ ಶಿವಾನುಭವ, ಶಿಷ್ಯಸಂತಾಪಹರಣ, ಪಾತಂಜಲಯೋಗಶಾಸ್ತ್ರ ಈ ಗ್ರಂಥಗಳನ್ನು ಪ್ರಕಾಶಗೊಳಿಸಿದ್ದರು. ಹೀಗಿದ್ದರೂ ನಮ್ಮ ಮಹಾಶ್ರೀಗಳವರೊಡನೆ ವ್ಯಾಜ್ಯ ನಡೆಯಿಸಿದ್ದು .ನೋಡಿದರೆ ಕಲಿಕಾಲಪ್ರಭಾವವೆಂದೇ ಹೇಳಬೇಕಾಗಿದೆ. ಪರಸ್ಪರ ಮನಸ್ತಾಪಗಳಾಗಿ ೧೮–೨೦ ವರುಷಗಳ ವರೆಗೂ ಉಭಯ ಜಗದ್ಗುರುಗಳವರ ದರ್ಶನ, ಸಂಭಾಷಣಗಳಿರಲಿಲ್ಲ. ತರುವಾಯ ನಮ್ಮ ಈ ಮಹಾಶ್ರೀಗಳವರು ತಾವೇ ಆಲೋಚನೆ ಮಾಡಿ, ನಾವು ವೈಮನಸ್ಕರಾಗಿ ಈರೀತಿಯಿಂದಿರುವದು ಯುಕ್ತವಲ್ಲ. ಅವರು ಹೇಗೇ ಇರಲಿ ನಮಗೆ ಪೂಜ್ಯರೂ ಯಜಮಾನರೂ ಆಗಿರುವದರಿಂದ ನಾವೇ ಮೊದಲು ಅವರ ದರ್ಶನಕ್ಕೆ ಹೋಗೋಣವೆಂದು ಕೊಟ್ಟೂರು ಮುಕ್ಕಾಮಿನಲ್ಲಿ ಶ್ರೀ

ದಾರುಕಾಶ್ರಮದಲ್ಲಿರುವ ಶ್ರೀಗಳವರಲ್ಲಿಗೆ ವಿಭವ ಸಂವತ್ಸರದ ಶ್ರಾವಣದಲ್ಲಿ ದಯ ಮಾಡಿಸಿ ವಂದನೆ ಮಾಡಲು, ಅವರಾದರೂ ಪ್ರೇಮದಿಂದ ಆದರಿಸಿ, ಏಕಾಂತದೊಳು ಹೋಗಿ ಅನೇಕ ವಿಷಯಗಳ ಸಂಭಾಷಣೆ ನಡೆದಬಳಿಕ ಸಂತೋಷಚಿತ್ತರಾಗಿ ಪುನ ರಾಗಮಿಸಿದರು.

ಇಷ್ಟಾದಬಳಿಕ ಒಂದೆರಡು ವರ್ಷಗಳಲ್ಲಿಯೇ ಶ್ರೀ ಮರುಲಸಿದ್ಧಸ್ವಾಮಿಗಳಿಗೆ ದೇಹದಲ್ಲಿ ಜಾಡ್ಯವುಂಟಾಗಿ ಎಷ್ಟು ಚಿಕಿತ್ಸೆ ಮಾಡಿದರೂ ಗುಣವಾಗದೆ ಶಕೆ ೧೮೫೨ ಪ್ರಮೋದೂತ ಸಂವತ್ಸರದ ಆಶ್ವೀಜ ಬ॥ ೧೦ ಶುಕ್ರವಾರ ತಾರೀಖು ೧೭-೧೦-೩೦ ನೇ ದಿವಸ ಕೊಟ್ಟೂರು ದಾರುಕಾಶ್ರಮದಲ್ಲಿಯೇ ಶಿವಸಾಯುಜ್ಯವನ್ನು ಹೊಂದಿದರು.

ಆ ಸಮಯಕ್ಕೆ ಶ್ರೀ ಜ॥ ಸಿದ್ಧಲಿಂಗಮಹಾಸ್ವಾಮಿಗಳು ಆಗಮಿಸಿ ಅನೇಕ ಭಕ್ತಮಾಹೇಶ್ವರಾದಿ ಮಂಡಲಿಯೊಡಗೂಡಿ ವಿಧ್ಯುಕ್ತಪ್ರಕಾರ ಅಂತೇಷ್ಟಿವಿಧಿಗಳನ್ನು ನೆರವೇರಿಸಿ ( ಈ ಮುಂಚಿತ ಶ್ರೀ ಮ॥ ಗಳು ತಮಗಾಗಿ ತಯಾರಮಾಡಿಸಿಕೊಂಡಿದ್ದ) ಸಮಾಧಿ ಮಂಟಪದಲ್ಲಿ ಉತ್ಸವಾನಂತರ ಮೂರ್ತಗೊಳಿಸಿ ತಮ್ಮ ಗುರುಸೇವೆಯನ್ನು ಪೂರ್ಣ ಸಲ್ಲಿಸಿ ಮಂಗಲಮಾಡಿದರು.

ವಾಚಕ ಮಹಾಶಯರೇ, ಅಖಂಡ ಧೈರ್ಯಶಾಲಿಗಳೂ ಬ್ರಹ್ಮತೇಜಸ್ವಿಗಳೂ ಶಾಂತಮೂರ್ತಿಗಳಾದ ಈ ಸಿದ್ಧಲಿಂಗಮಹಾಸ್ವಾಮಿಗಳಾದುದರಿಂದಲೇ ಮೇಲಿಂದ ಮೇಲೆ ಬಂದೊದಗಿದ ದುರ್ಘಟಪ್ರಸಂಗಗಳನ್ನು ತಮ್ಮ ತಪಃಪ್ರಭಾವದಿಂದ ನಿವಾರಣೆ ಮಾಡುತ್ತ ಆ ಮಹಾಪೀಠಕ್ಕೆ ತುಂಬಾ ಗೌರವವನ್ನುಂಟುಮಾಡಿದರು. ಆಸಮಯ ದಲ್ಲಿ ಬೇರೆ ಯಾರಾದರೊಬ್ಬ ಭಯಗ್ರಸ್ತರೂ ಲೋಭಿಗಳೂ ಅಧೈರ್ಯವಂತ ಹೇಡಿ ಸ್ವಾಮಿಗಳಾಗಿದ್ದರೆ ಆ ಮರುಳಸಿದ್ಧಸ್ವಾಮಿಗಳ ಪ್ರಚಂಡ ವಾಕ್‌ಪ್ರತಾಪ, ಅಟ್ಟ ಹಾಸ, ನಾನಾವಿಧ ತಂತ್ರಗಳಿಗೆ ಭಯಪಟ್ಟು ಪಲಾಯನಮಾಡಿಬಿಡುತ್ತಿದ್ದರು.

ಆದರೆ ನಮ್ಮ ಸಮಾಜದ ಸುದೈವದಿಂದ ಆ ಸದ್ಧರ್ಮಸಿಂಹಾಸನವನ್ನು ಧರ್ಮಮೂರ್ತಿಯಾದ ಮಹಾಶ್ರೀಗಳವರು ಆರೋಹಣ ಮಾಡಿದ್ದುದರಿಂದಲೇ ಮುಂದೆ ನಡೆದ ಮಹಾ ಮಹಾ ಕಾರ್ಯಗಳನ್ನೂ, ಜಗದ್ಗುರು ಪಂಚಪೀಠಾಧೀಶ್ವರರ ಮಹೋತ್ಸವಗಳನ್ನೂ ಅನೇಕ ಮಹಿಮಾತಿಶಯಗಳನ್ನೂ ನೋಡಿ ಕೇಳಿ ಮಹಾನು ಭಾವರ್ಕ ಈ ದಿವ್ಯಚರಿತ್ರವನ್ನು ಪಠನಮಾಡಿ ಆನಂದಪಡುವಂತಹ ಸುಯೋಗವನ್ನು ದಯಪಾಲಿಸಿದ ಆ ಪರಶಿವನ ಪಾದಾರವಿಂದಗಳನ್ನೆಷ್ಟು ವಂದಿಸಿದರೂ ಸ್ಮರಿಸಿದರೂ ತೀರದಾಗಿದೆ.

—ಗ್ರಂಥಕರ್ತ.



## ಸರ್ಪಗಂಡಾಂತರ ನಿವಾರಣೆಮಾಡಿದ್ದು

ಮಹಾಸವಾರಿಯು ಕೊಟ್ಟೂರು ಶ್ರೀ ದಾರುಕಾಶ್ರಮದಲ್ಲಿ ಮುಕ್ಕಾಂ ಮಾಡಿರಲು ಇದೇ ಗ್ರಾಮದ ಕೆಂ. ಮಠದ ಪಿಟೀಲು ವಿದ್ವಾನ್ ಚನ್ನಬಸವಶಾಸ್ತ್ರಿಗಳು ಸನ್ನಿಧಿಗೆ ಬಂದು ರಾಯಚೂರಲ್ಲಿ ನಾಟಕ ಕಂಪನಿ ನಡೆಯಿಸಿರುವೆನೆಂದು ಹೇಳುತ್ತಾ ೨-೩ ದಿವಸದಮೇಲೆ ರಾಯಚೂರಿಗೆ ಪ್ರಯಾಣಸಿದ್ಧರಾಗಿಬಂದು ವಂದಿಸಲು, ಮಹಾಶ್ರೀಗಳವರು ಇವರ ಮುಖಾವಲೋಕನಮಾಡಿ, ಶಾಸ್ತ್ರಿಗಳೇ, ಇಗೋ ನಮ್ಮಲ್ಲಿ ಹಾವಿನ ಔಷಧದ ಬೇರು ಅದೆ. ತೆಗೆದುಕೊಳ್ಳಿರಿ; ನಿಮ್ಮಲ್ಲಿ ಇಟ್ಟುಕೊಳ್ಳಿರಿ. ಸರ್ಪ ಕಚ್ಚಿದರೆ ಈ ಬೇರನ್ನು ತೆಯಿದು ಗಂಧವನ್ನು ೧ ಚಮಚದಷ್ಟು ಹೊಟ್ಟೆಯಲ್ಲಿ ಕುಡಿಸಬೇಕು. ಮತ್ತು ಆ ಗಂಧವನ್ನು ಸರ್ವಾಂಗಕ್ಕೂ ಲೇಪನಮಾಡಬೇಕು. ಗುಣವಾಗುವದು ಎಂದು ಹೇಳಿ ಆಶೀರ್ವಾದವಿತ್ತು ಕಳುಹಿಸಿದರು. ಇವರು ಆ ಬೇರನ್ನು ಇಸಗೊಂಡು, ಏನಿದು ? ನಾನೇನು ವೈದ್ಯಕಾರನಲ್ಲಾ. ಇದನ್ನೇಕೆ ಕೊಟ್ಟಿರಬಹುದೆಂದು ಯೋಚನೆಮಾಡುತ್ತ ಹೊರಟು ರಾಯಚೂರಿಗೆ ಪ್ರಯಾಣಮಾಡಿದರು.

ಮೂರನೆ ದಿವಸ ನಾಟಕದ ಥೇಟರದೊಳಗೆ ಸಾಯಂಕಾಲ ೮ ಗಂಟೆ ಸಮಯದಲ್ಲಿ ಒಂದು ಘೋರ ಸರ್ಪವು ಸದರಿಯವರ ಕಾಲಿಗೆ ಕಚ್ಚಿ ಬಿಟ್ಟಿತು. ಅಲ್ಲಿದ್ದವರು ನೋಡಿ ಅದನ್ನು ಬಡಿದುಹಾಕಿದರು. ಅಷ್ಟರಲ್ಲಿ ಇವರಿಗೆ ವಿಷಜ್ವಾಲೆ ವ್ಯಾಪಿಸಲು. ಊರಲ್ಲಿ ಔಷಧ ತರಲಿಕ್ಕೆ ಓಡಾಡಿದರು. ಆಗ ಇವರಿಗೆ ಸ್ಮರಣೆಗೆ ಬಂದು ಅಹಾ, ಮೊನ್ನೆ ಕೊಟ್ಟೂರಲ್ಲಿ ಮಹಾತ್ಮರಾದ ಉಜ್ಜಯಿನಿ ಜ|| ಸಿದ್ಧಲಿಂಗಮಹಾಸ್ವಾಮಿಗಳವರು ಸುಮ್ಮನೆ ನಮಗೊಂದು ಬೇರು ಕೊಟ್ಟಿರಲ್ಲಾ. ಮಹಾಗುರುವೇ, ಮುಂದೆ ನನಗೆ ಬರುವ ಸರ್ಪಗಂಡಾಂತರವನ್ನು ನಿವಾರಣೆಮಾಡುವದಕ್ಕಾಗಿಯೇ ನಿನ್ನ ಅಮೃತಹಸ್ತದಿಂದ ಎನಗಿತ್ತಿರಬಹುದಲ್ಲವೇ ? ಆಗಲಿ ಗುರುನಾಥಾ, ನೀನೇ ಈಗ ಕಾಪಾಡಬೇಕು. ಎಂದು ಆ ಜನರಮುಂದೆ ನುಡಿದು, ಆ ಬೇರಿನ ಗಂಧವನ್ನು ಪಾನಮಾಡಲಿಕ್ಕೂ ಲೇಪನಮಾಡಲಿಕ್ಕೂ ತಿಳಿಸುತ್ತಲೇ ದೇಹಭಾರವಾಯಿತು. ನೇತ್ರಗಳು ಮಂದವಾದವು. ನಿದ್ರೆ ಬಂದಂತಾಗಿ ಮಲಗಿದರು. ಇದನ್ನೆಲ್ಲಾ ಕೇಳಿ ಜನರು ಬಹು ವ್ಯಥೆಪಡುತ್ತ ಆ ಬೇರಿನ ಗಂಧವನ್ನು ಕುಡಿಸಿ ದೇಹಕ್ಕೆ ಲೇಪನಮಾಡಿದರು. ನಾಟಕದ ಹುಡುಗರು ದುಃಖಮಾಡಲಾರಂಭಿಸಿದರು. ಕೆಲವರು ಉಜ್ಜಯಿನೀ ಮಹಾಸ್ವಾಮಿಗಳವರ ಮಹಿಮಾಪ್ರಭಾವ ಹೇಗಿದೆ ನೋಡೋಣವೆಂದು ಕುಳಿತರು. ರಾತ್ರಿ ೧೨ ಗಂಟೆಯಾದನಂತರ ಏಕಕಾಲಕ್ಕೆ ಮೈಯೆಲ್ಲಾ ಬೆವರಿತು. ಬಳಿಕ ಎಚ್ಚರವಾಗಿ ಚನ್ನಾಗಿ ಮಾತುಗಳಾಡಿದರು. ಮೂರನೆ ದಿವಸ ಊರಲ್ಲೆಲ್ಲಾ ಜನರು ಉ. ಮಹಾಸ್ವಾಮಿಗಳು ತ್ರಿಕಾಲಜ್ಞಾನಿಗಳೂ ಮಹಾತ್ಮರೂ ಎಂದು ಕೊಂಡಾಡಿದರು.

---

# ಮಹಾಶ್ರೀಗಳವರ ಕ್ರಿಯಾಸಿದ್ಧಿಪ್ರಭಾವ

ಈ ಗುರುಪುಂಗವರ ಮಹಾತಪೋಬಲದಿಂದಲೂ ಕ್ರಿಯಾಸಿದ್ಧಿಯಿಂದಲೂ ಇವರಲ್ಲಿ ಶಾಪಾನುಗ್ರಹ ಸಮರ್ಥತೆಯುಂಟಾಗಿ ಪ್ರಕಾಶಕ್ಕೆ ಬಂದು ಬಹುಜನರಿಗೆ ಪ್ರತ್ಯಕ್ಷ ಅನುಭವಕ್ಕೆ ಬರುತ್ತಿದ್ದವು.

ಇವರು ತಮ್ಮ ಸಂಸ್ಥಾನಪದ್ಧತಿ ಪ್ರಕಾರ ಸನ್ನಿಧಿಯಲ್ಲಿ ನಡೆಯುವ ಶಿವಭಕ್ತ ಮಂಡಲಿಯ ಆಚಾರಬಾಬು, ಶಿವಾಯಿಬಾಬು ಎಂಬ ವ್ಯಾಜ್ಯಗಳ ವಿಚಾರಣಾಂತ್ಯಕ್ಕೆ ಅಪರಾಧಿಗಳೂ ದೋಷಿಗಳೂ ಆದದ್ದಾದರೆ, ಅಂಥವರಿಗೆ ಆಜ್ಞಾಪತ್ರ (ಬಹಿಷ್ಕಾರ) ಹುಕುಂಗಳನ್ನು ಪ್ರಾಯಶಃ ಕೊಡುವದೇ ಕಡಿಮೆಯಾಗಿತ್ತು. ಅಂತಹ ಅನಿವಾರ್ಯ ಪ್ರಸಂಗಬಂದು ಆಜ್ಞಾಕೊಟ್ಟದ್ದಾದರೆ ಅವರಿಗೆ ಕ್ಷೇಮವಾಗದೆ ಯಾವರೀತಿಯಿಂದಲಾದರೂ ಕಷ್ಟ-ನಷ್ಟಗಳುಂಟಾಗಿ ಬಳಲುತ್ತಿದ್ದರು. ಈ ಸಂಗತಿಯು ತಿಳಿದೇ ತಮ್ಮಲ್ಲಿ ವ್ಯಾಜ್ಯನಡೆಯಿಸುವ ಜನರಿಗೆ ಸರಿಯಾದ ಬುದ್ಧಿವಾದಗಳನ್ನು ಚನ್ನಾಗಿ ಹೇಳಿ ರಾಜಿಮಾಡಿಸಿ ಕಳುಹಿಸುತ್ತಿದ್ದರು. ಅಥವಾ ಕೇಸುಗಳನ್ನು ವಿಚಾರಮಾಡಲು ಕಾಲವಿಳಂಬ ಮಾಡುತ್ತಿದ್ದರು. ಮಹಾಶ್ರೀಗಳವರಿಂದ ಆಜ್ಞಾಪತ್ರವು ಹುಟ್ಟಿತೆಂದರೆ ಅವರಿಗೆ ಸುಖವಾಗದೆ ಕಾಲಾಂತರದಲ್ಲಾದರೂ ವ್ಯಥೆಯಿಂದ ಬಳಲಬೇಕಾಗುವದೆಂಬುವದು ಮನಗಂಡು ಜನರು ಬಹಳ ಭಯಪಡುತ್ತಿದ್ದರು.

ಈ ಮಹಾತ್ಮರ ದರ್ಶನಕ್ಕೆ ಎಂತಹ ದೊಡ್ಡ ಅಧಿಕಾರಿಗಳಾಗಲಿ, ಶ್ರೀಮಂತ, ಸಾವಕಾರ, ಬಡವರಾಗಲಿ ಹೋದದ್ದಾದರೆ ಅಥವಾ ಅಕಸ್ಮಾತ್ ಅವರ ದೃಷ್ಟಿಗೆ ಬಿದ್ದರೆ ಅನಾದರದಿಂದ ಮುಂದಕ್ಕೆ ಹೋಗದೆ, ಅವರ ಅಪ್ಪಣೆ-ಆಶೀರ್ವಾದಗಳನ್ನು ಪಡೆದುಕೊಂಡೇ ಹೋಗುತ್ತಿದ್ದರು. ಹಾಗಲ್ಲದೆ ಸಲುಗೆಯಿಂದಾಗಲಿ ಶ್ರೀಮಂತಿಕೆ, ಅಧಿಕಾರ, ವಿದ್ಯೆ, ಯೌವನ ಮದಗಳಿಂದಾಗಲಿ ಅನಾದರಮಾಡಿ ಪ್ರಯಾಣಮಾಡಿದ್ದಾದರೆ ಅಂಥವರಿಗೆ ಮಾರ್ಗದಲ್ಲಾಗಲಿ ಅಥವ ಮನೆಯಲ್ಲಾಗಲಿ ಯಾವದೇರೀತಿಯಿಂದಲಾದರೂ ಕಷ್ಟ, ನಷ್ಟ, ಜಾಡ್ಯಗಳುಂಟಾಗಿ ಬಳಲುತ್ತಿದ್ದರು. ಈ ವಿಷಯವು ಎಷ್ಟೋ ಜನರಿಗೆ ಅನುಭವಕ್ಕೆ ಬಂದುದರಿಂದ ಈ ವೈರಾಗ್ಯಮೂರ್ತಿಯ ಅಪ್ಪಣೆಯನ್ನು ಪಡೆಯದೆ ಯಾರೂ ತೆರಳಲು ಸಮರ್ಥರಿದ್ದಿಲ್ಲ.

೧. ಸಂತಾನವಿಲ್ಲದೆ ಅಂತರಂಗದಲ್ಲಿ ಬಹು ಚಿಂತೆಯಿಂದ ಸಂತತವೂ ಬಳಲುತ್ತಿರುವ ಕಾಂತಾಮಣಿಯರ ಸಂತಾಪವನ್ನು ಪರಿಹರಿಸಿ ಸಂತತಿ ಬೆಳೆಯಿಸಿ ಚಿಂತಾಮಣಿಯಂತೆ ಸಂತೋಷಪಡಿಸಿದರು.

೨. ಬೇಗನೆ ರೋಗನಿವಾರಣೆಯಾಗುವ ಬಗೆ ಹೇಗೆಂದು ಹಗಲಿರುಳೂ ಬಗೆಬಗೆಯಾಗಿ ಚಿಂತಿಸುವ ರೋಗಿಗಳ ರೋಗಬಾಧೆಯನ್ನು ನೀಗಿಸುತ್ತ ನಾಗಭೂಷಣನೆಂದು ಜಗದೊಳು ಮಿಗಿಲೆನಿಸಿ ಸೊಗಸಿನಿಂದ ಮೆರೆದರು.

# ಶ್ರೀ ಕಾಶೀಪೀಠದ ವಿಷಯ

ಶ್ರೀ ಕಾಶೀಕ್ಷೇತ್ರದಲ್ಲಿರುವ ಜಗದ್ಗುರು ವಿಶ್ವಾರಾಧ್ಯರ ಧರ್ಮ ಪೀಠವು ಜಂಗಮವಾಡಿ ಮಠವೆಂಬ ಹೆಸರಿನಿಂದ ಪ್ರಸಿದ್ಧವಿರುತ್ತದೆ.

ಈ ಪೀಠದ ಪ್ರಾಚೀನತೆಯ ಬಗ್ಗೆ ಅನೇಕ ದಾನ-ಶಾಸನಗಳು ದೊರೆಯುತ್ತವೆ. ವಿಕ್ರಮ ಸಂವತ್ಸರ ೬೩೧ ಕಾರ್ತೀಕ ಶುದ್ಧ ದೇವೋತ್ಥಾನ ಏಕಾದಶಿಯ ದಿನ ಮಹಾರಾಜನಾದ ಜಯನಂದನೆಂಬ ರಾಜನು "ಜಂಗಮಪುರವೆಂಬ" ಗ್ರಾಮವನ್ನು ಈ ಪೀಠದ ಗೋವುಗಳ ಪರಿಪಾಲನೆಗಾಗಿ ದಾನಕೊಟ್ಟಿರುವ ಶಾಸನವು. ಈಗಲೂ ಮಠದಲ್ಲಿದೆ ಅರ್ಥಾತ್ ಈ ದಾನಶಾಸನವನ್ನು ಕೊಟ್ಟು ಇಂದಿಗೆ ಸುಮಾರು (೧೩೭೦) ವರುಷಗಳಾದವು.

ಈ ಪೀಠದ ಶಾಖಾಮಠ ಒಂದು ನೇಪಾಳದ "ಭಾಗಗಾಂ" ಎಂಬ ಗ್ರಾಮದಲ್ಲಿ ಈಗಲೂ ಇದೆ. ಆ ಮಠದಲ್ಲಿ ವಿಕ್ರಮ ಸಂವತ್ಸರ ೬೯೨ (ಕ್ರಿಸ್ತ ೬೩೫) ನೆಯ ವರ್ಷದ ಜೇಷ್ಠ ಶುದ್ಧ ಅಷ್ಟಮಿಯಲ್ಲಿ ಬರೆಯಲ್ಪಟ್ಟ ದೇವನಾಗರೀ ಲಿಪಿಯ ಒಂದು ಸಂಸ್ಕೃತ ಶಾಸನವಿರುವುದು. ಈ ಶಿಲಾಶಾಸನವನ್ನು ಬರೆದುಕೊಟ್ಟು ಇಂದಿಗೆ ೧೩೦೫ ವರ್ಷಗಳಾಗುವವು. ಸದ್ಯಃ ನೇಪಾಳದಲ್ಲಿರುವ ಜಂಗಮವಾಡೀ ಮಠವು ಅತ್ಯಂತ ವೈಭವಸ್ಥಿತಿಯಲ್ಲಿರುತ್ತದೆ.

ಕಾಶೀಯಲ್ಲಿರುವ ಈ ಧರ್ಮ ಪೀಠಕ್ಕೆ ಅನೇಕ ಹಿಂದೂರಾಜರು ದಾನಶಾಸನಗಳನ್ನು ಕೊಟ್ಟಿರುವುದಲ್ಲದೆ ಮೊಗಲಾಯಿ ಚಕ್ರವರ್ತಿಗಳಾಗಿದ್ದ ಬಾಬರ್ ಅಕ್ಬರ್, ಹುಮಾಯೂನ್, ಜಹಂಗೀರ್, ಔರಂಗಜೇಬ ಮೊದಲಾದವರೂ ಸಹ ಅನೇಕ ದಾನಶಾಸನಗಳನ್ನು ಬರೆದುಕೊಟ್ಟಿರುವರು. ಇವು ಅರಬ್ಬಿ ಭಾಷೆಯಲ್ಲಿ ಬರೆಯಲ್ಪಟ್ಟಿರುವವು. ಈ ಮೊಗಲ್ ಚಕ್ರವರ್ತಿಗಳ ೧೫—೨೦ ದಾನಶಾಸನಗಳು ಸದ್ಯದಲ್ಲಿ ಮಠದಲ್ಲಿಯೇ ಇವೆ.

ಹಿಂದೂ ಧರ್ಮದ ಪರಮವೈರಿಯಾಗಿದ್ದ ಔರಂಗಜೇಬನು ಈ ಪೀಠವನ್ನು ನಾಶಮಾಡಬೇಕೆಂಬ ಉದ್ದೇಶದಿಂದ ದಂಡೆತ್ತಿಕೊಂಡು ಬಂದಾಗ, ಶ್ರೀ ಜಗದ್ಗುರು ಮಲ್ಲಿಕಾರ್ಜುನ ಸ್ವಾಮಿಗಳೆಂಬುವರು ವಿಶೇಷವಾದ ಮಹಿಮೆಯನ್ನು ತೋರಿಸಲು ಔರಂಗಜೇಬನು ಗರ್ವಭಂಗನಾಗಿ ಭಯದಿಂದ ತನಗುಂಟಾದ ಯಾವತ್ತೂ ಪ್ರಾಯಶ್ಚಿತ್ತಗಳನ್ನು ಉಲ್ಲೇಖಿಸಿ, ಒಂದು ಶಾಸನವನ್ನು ಬರೆದುಕೊಟ್ಟಿದ್ದಾನೆ. ಅದರಲ್ಲಿರುವ ವಿಷಯವು ಈ ಪೀಠವದ ಗೌರವಕ್ಕೆ ಅತ್ಯಂತ ಮಹತ್ವದ್ದಾಗಿದೆ.

ಈ ಪೀಠದಲ್ಲಿರುವ ಗುರುಪೀಠಕ್ಕೆ ಜೋಡಿಸಿರುವ ಶಿಲೆಯು ನಾಲ್ಕುಸಾವಿರ (೪೦೦೦) ವರುಷಗಳ ಪೂರ್ವದ್ದೆಂದು ಬ್ರಿಟಿಷ್ ಶಿಲ್ಪಶಾಸ್ತ್ರಜ್ಞರು ಶೋಧಿಸಿ ನಿರ್ಣಯಮಾಡಿದ್ದಾರೆ. ಈ ಪೀಠಕ್ಕೆ ( ೨೬ ) ಗ್ರಾಮಗಳು ಉಂಬಳಿಯಾಗಿರುವುವಲ್ಲದೆ,

ಕಾಶೀಕ್ಷೇತ್ರದಲ್ಲಿ (೩೦೦) ಮನೆಗಳಿಂದ ಕೂಡಿದ ಮಾನಸ ಸರೋವರವೂ (೬೦೦) ಮನೆಗಳಿಂದ ಕೂಡಿದ ಜಂಗಮವಾಡೀ ಮೊಹಲ್ಲೆಯೂ ಉಂಬಳಿಯಾಗಿದೆ. ಹಿಂದಿನ ಶ್ರೀ ಜಗದ್ಗುರು ರಾಜೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರನ್ನು ಸನ್ ೧೯೧೧ ನೆಯ ಇಸ್ವಿಯಲ್ಲಿ ೫ ನೇ ಜಾರ್ಜ ಸಾರ್ವಭೌಮರಿಗೆ ಪಟ್ಟಾಭಿಷೇಕವಾಗುವ ಸಮಯ ದಲ್ಲಿ, ಹಿಂದುಸ್ಥಾನದಲ್ಲಿ ಪ್ರಸಿದ್ಧ ಕ್ಷೇತ್ರವೆನಿಸಿರುವ ಕಾಶೀಕ್ಷೇತ್ರದಲ್ಲಿ "ಒಬ್ಬ ಮಹನೀಯರ ಉತ್ಸವವಾಗಬೇಕೆಂದು ಇಂಡಿಯಾ ಸರಕಾರದವರು ನಿಶ್ಚಯಿಸಿದ ಪ್ರಕಾರ" ಕಾಶೀಕ್ಷೇತ್ರದಲ್ಲಿ ಅತ್ಯಂತ ಪ್ರಸಿದ್ಧರೆನಿಸಿರುವ ಈ ಪೀಠದ ಮಹಾಸ್ವಾಮಿ ಗಳವರ ಉತ್ಸವವನ್ನೇ ಸರಕಾರದವರು ಅಸಾಧಾರಣವಾದ ವೈಭವದಿಂದ ನೆರವೇರಿ ಸಿದರು. ಈ ವಿಷಯಗಳು ವೀರಶೈವರಿಗೆ ಕೇವಲ ಗೌರವಾಸ್ಪದಗಳಾಗಿರುವವು.

## ಈ ಪೀಠದ ಜಗದ್ಗುರು ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಲಿಂಗೈಕ್ಯರಾದದ್ದು.

ಭೂಕೈಲಾಸವೆನಿಸಿದ ಈ ಕಾಶೀಕ್ಷೇತ್ರದಲ್ಲಿ ವಿರಾಜಿಸುವ ವಿಶ್ವಾರಾಧ್ಯ ಪೀಠಾ ಧೀಶರಾದ ಶ್ರೀ ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ತಾ. ೫-೪-೧೯೩೨ ದಿವಸ ಉದಯಕ್ಕೆ ಪರಂಧಾಮವನ್ನೈದಿದರೆಂಬ ವಾರ್ತೆಯು ಟೆಲಿಗ್ರಾಂದ್ವಾರ ಉಜ್ಜ ಯಿನೀ ಜ. ಮಹಾ ಶ್ರೀಗಳವರಲ್ಲಿಗೆ ತಿಳಿಯಿತು. ಈ ಶೋಕವಾರ್ತೆಯು ಬಂದ ಕೂಡಲೇ ಮನಸ್ಸಿಗೆ ಅತಿಶಯ ವ್ಯಸನವಾಯಿತು. ಆಹಾ ನಮ್ಮ ಪಂಚಪೀಠಗಳೊ ಳಗೆ ರತ್ನದಂತೊಪ್ಪಿದ ಮಹಾಜ್ಯೋತಿಯು ಮಾಯವಾಯಿತಲ್ಲ; ಎಂಥ ಅನರ್ಥವಾ ಯಿತೆಂದು ಅನೇಕ ವಿಷಯಗಳಸ್ಮರಣೆಗೆ ತಂದುಕೊಂಡು ವ್ಯಥೆಪಟ್ಟರು.

ಈ ಶಿವಲಿಂಗಸ್ವಾಮಿಗಳವರು ವಿಶ್ವಾರಾಧ್ಯ ಪೀಠಾರೋಹಣಮಾಡಿ ೩೦-೩೫ ವರುಷಗಳಾಗಿರಬಹುದು. ಗೀರ್ವಾಣವಿದ್ಯೆಗೆ ಮಾತೃಸ್ಥಾನವೆನಿಸಿದ ಈ ಕ್ಷೇತ್ರಕ್ಕೆ ಬರುವ ಮಾಹೇಶ್ವರ ವಟುಗಳಿಗೆ ಅನ್ನೋದಕಗಳನ್ನಿತ್ತು ವಿದ್ಯಾಭ್ಯಾಸಮಾಡಿಸಿ ಕಳು ಹಿಸಿಕೊಡುತ್ತಿದ್ದರು. ಈ ಮಹಾಕ್ಷೇತ್ರದಲ್ಲಿ ಆ ಗುರುಪೀಠ ಒಂದಿಲ್ಲದಿದ್ದರೆ, ನಮ್ಮ ಸಮಾಜದಲ್ಲಿ ಇಷ್ಟೊಂದು ಪಂಡಿತರನ್ನು ಕಾಣುವದು ದುರ್ಲಭವಾಗುತ್ತಿತ್ತು.

ಇವರು ಉ. ಜ. ಮಹಾ ಶ್ರೀಗಳವರ ಅಭಿಪ್ರಾಯದಂತೆ ತಮ್ಮಲ್ಲಿ ೧೯೧೮ ನೇ ಇಸ್ವಿಯಲ್ಲಿ ಶ್ರೀ ಪಂಚಾಚಾರ್ಯ ಸಮ್ಮೇಲನವನ್ನು ಅತ್ಯಂತ ವೈಭವದಿಂದ ನೆರವೇ ರಿಸಿದ್ದು ಚಿರಸ್ಮರಣೀಯವಾಗಿದೆ. ಇವರು ಮಾಡಿದ ಕಾರ್ಯಗಳನ್ನು ಕೇಳಿ ಅಖಿಲ ಭಾರತೀಯ ವೀರಶೈವರು ಆನಂದದಿಂದ ನಲಿದಾಡುತ್ತಿರುವರು.

ಆದರೆ ಈ ಜಗದ್ಗುರುಗಳವರು ತಮ್ಮ ಜಡದೇಹವನ್ನು ಬಿಡುವೆವೆಂಬುವದನ್ನು ಜ್ಞಾನದೃಷ್ಟಿಯಿಂದರಿತು, ಮುಂದೆ ಈ ಪೀಠಾಧಿಕಾರಕ್ಕೆ ತೊಂದರೆ ಸಂಭವಿಸಬಾರ

ವೆಂದು ತಮ್ಮ ಪ್ರೀತಿಪಾತ್ರರಾದ ಕುಲ, ಶೀಲ, ವಿದ್ಯಾ, ವಿನಯ ಸಂಪನ್ನರಾದ ತಾಸಗಾಂವ ಬೃಹನ್ಮಠದ ಶ್ರೀ ಪಟ್ಟಾಧಿಕಾರಿಗಳಿಗೆ ಶಕೆ ೧೮೫೩ ನೇ ಪ್ರಜೋತ್ಪತ್ತಿ ನಾಮ ಸಂವತ್ಸರದ ಮಾಘ ಶುದ್ಧ ೧೩ ಶುಭಮುಹೂರ್ತದಲ್ಲಿ ಶ್ರೀ ಜ. ವಿಶ್ವಾರಾಧ್ಯ ಪೀಠಕ್ಕೆ ನೂತನ ಪಟ್ಟಾಧಿಕಾರವನ್ನು ಅನುಗ್ರಹಿಸಿ ಕೆಲವು ದಿವಸ ಶಿವಪೂಜಾನಂದ ಲೋಲರಾಗಿದ್ದು, ಪರಂಧಾಮವನ್ನೈದಿದರು.

---

## ಬಾರ್ಶಿ ಪಟ್ಟಣದಲ್ಲಿ ತಿರ್ಯಗಾಂದೋಲಿಕಾ ಮಹೋತ್ಸವವು

ಮಹಾರಾಷ್ಟ್ರ ದೇಶದಲ್ಲಿ ಪ್ರಸಿದ್ಧವಾದ ಸೊಲ್ಲಾಪುರ ಜಿಲ್ಹೆಗೆ ಸೇರಿದ ಬಾರ್ಶಿ ಪಟ್ಟಣವು ೧೦-೧೨ ಸಾವಿರ ವೀರಶೈವ ಜನಸಂದೋಹದಿಂದಿರುವದಲ್ಲದೆ, ಪ್ರಸಿದ್ಧ ಶ್ರೀಮಂತರಾದ ಮ. ರಾ. ರಾ. ಅಂಣಾಸಾಹೇಬ ಕಥಲೆ ಎಂಬುವರೂ, ಶ್ರೀ ಘರಾಂಡ ಕರ ಮಠದ ಶ್ರೀ ಷ॥ ಬ್ರ॥ ಪಟ್ಟಾಧ್ಯಕ್ಷ ರಾಚಲಿಂಗಸ್ವಾಮಿಗಳೂ ಮುಂತಾದ ಮಂಡ ಳಿಯೂ ಸೇರಿ, ನಮ್ಮ ಮಹಾರಾಷ್ಟ್ರದೇಶದಲ್ಲಿ ೮-೧೦ ಲಕ್ಷ ಜನ ವೀರಶೈವ ಸಂಖ್ಯೆ ಯಿದ್ದು, ಈವರೆಗೂ ಶ್ರೀ ಜಗದ್ಗುರು ಪಂಚಪೀಠಾಧೀಶರ ಪೈಕಿ ಒಬ್ಬರಾದರೂ ನಮ್ಮ ಪ್ರಾಂತಕ್ಕೆ ಆಗಮಿಸಲಿಲ್ಲಾ. ಈ ನವಯುಗದಲ್ಲಿ ಪ್ರತಿಯೊಂದು ಸಮಾಜವು ಮುಂದು ವರಿದು ಪ್ರಗತಿಯನ್ನು ಹೊಂದುತ್ತಿರುವದು. ಆದುದರಿಂದ ನಾವೂ ಸುಮ್ಮನೆ ಕಾಲ ಹರಣ ಮಾಡಬಾರದು. ಪಂಚಪೀಠಗಳೊಳಗೆ ಶ್ರೀಮದುಜ್ಜಯಿನೀ ಜಗದ್ಗುರು ಸಿದ್ಧ ಲಿಂಗ ಶಿವಾಚಾರ್ಯ ಮಹಾ ಸ್ವಾಮಿಗಳವರು ಮಹಾ ತಪಸ್ವಿಗಳೂ, ವೀರಶೈವ ಮತೋದ್ಧಾರಕರೂ ಆಗಿದ್ದಾರೆ. ಆ ಮಹಾನುಭಾವರನ್ನು ನಮ್ಮಲ್ಲಿಗೆ ಆಗಮಿಸಿ ಕೊಳ್ಳಬೇಕೆಂದು ನಿಶ್ಚಯಮಾಡಿ, ಬಳ್ಳಾರಿ ಜಿಲ್ಹೆಯಲ್ಲಿರುವ ಉಜ್ಜಯಿನೀ ಮಹಾ ಸಂಸ್ಥಾನ ಮಠಕ್ಕೆ ಮ. ರಾ. ಕಥಲೆಯವರೇ ಮುಂತಾದವರು ಬಂದು, ತಮ್ಮಲ್ಲಿಗೆ ದಯಮಾಡಿಸಬೇಕೆಂದು ಬಹು ವಿನಯದಿಂದ ಪ್ರಾರ್ಥನೆ ಮಾಡಿಕೊಂಡರು.

ಪರಮ ದಯಾಳುವಾದ ಈ ಮಹಾಶ್ರೀಗಳವರು ಇವರ ಬಿನ್ನಹವನ್ನು ಅಂಗೀ ಕರಿಸಿ, ಸದ್ಭಕ್ತರೇ ನಿಮ್ಮ ಇಷ್ಟದಂತೆ ಆಗಲಿ, ದಯಮಾಡಿಸುವೆವು. ಮುಂದಿನ ಸಕಲ ಸಿದ್ಧತೆಯನ್ನು ಮಾಡಿಕೊಳ್ಳಿರಿ. ಎಂದಪ್ಪಣೆಕೊಡಿಸಿದರು. ಇವರೆಲ್ಲಾ ಆ ಕೂಡಲೇ ಹೊರಟುಬಂದು, ತಾ. ೫-೪-೧೯೩೨ ನೇ ದಿವಸ ಉಜ್ಜಯಿನೀ ಜಗ ದ್ಗುರುಗಳವರ ತಿರ್ಯಗಾಂದೋಲಿಕಾ ಮಹೋತ್ಸವವು ಅತ್ಯಂತ ವೈಭವದಿಂದ ನಡೆ ಯುವದೆಂದು ಪತ್ರಿಕೆಗಳನ್ನು ಪ್ರಸಿದ್ಧಮಾಡಿದರು.

ಆ ಪ್ರಕಾರ ನಾನಾಪ್ರಾಂತಗಳಿಂದ ಅಸಂಖ್ಯಾತ ಜನಸ್ತೋಮವು ಸೇರಿತು. ೭೦-೮೦ ಸಾವಿರ ಪ್ರೇಕ್ಷಕರಿಂದ ಕೂಡಿ ಮಹಾಸಮುದ್ರದಂತೆ ತೋರುತ್ತಿತ್ತು. ಸೊಲ್ಲಾಪುರ ಡಿ|| ಮೆಜಿಸ್ಟ್ರೇಟರವರ ಆರ್ಡರ ಪ್ರಕಾರ ೭೨ ಬಿರುದುಗಳೊಡನೆ ತಿರ್‍ಯಗಾಂದೋಲಿಕಾ ಮಹೋತ್ಸವವು ಅತಿ ಸಂಭ್ರಮದಿಂದ ನಡೆಯಿತು. ಸಮಸ್ತ ಜನರೂ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್‍ಯ ಮಹಾರಾಜಕೀ ಜೈ, ಎಂದು ಜಯಘೋಷ ಮಾಡುತ್ತಿದ್ದರು.

ಈ ಸಮಯದಲ್ಲಿ ಮೆ|| ಶೇಖ ಅಬ್ದುಲ್ ಗನೀಸಾಹೇಬರೇ ಮೊದಲಾದ ಶ್ರೀಮಂತ ಮುಸಲ್ಮಾನ ಪ್ರಮುಖರು ತಮ್ಮ ಮಸೀದೆಯ ಮುಂದೆ ಹಸರು ವಸ್ತ್ರಗಳಿಂದ ಮನೋಹರವಾದ ಅಗಸಿಯನ್ನೇ ಕಟ್ಟಿ, ಅಡ್ಡಪಲ್ಲಕ್ಕಿಯ ಮುಂಭಾಗದಲ್ಲಿ ನಿಂತು, ಫೋಟೋ ತೆಗೆಯಿಸಿದರು. ಮಸೀದೆಯ ಮುಂದೆ ವಾದ್ಯಗಳನ್ನು ನಿರಾತಂಕವಾಗಿ ಬಾರಿಸಬಹುದೆಂದು ಹೇಳಿ, ಅದರಂತೆ ಕಾರ್‍ಯವನ್ನು ನೆರವೇರಿಸಿದರು. ( ಇದು ಅತ್ಯಂತ ಅಭಿನಂದನೀಯ ಸಂಗತಿಯಾಗಿದೆ. ) ಮತ್ತು ಗಣೇಶ ರಾಮಚಂದ್ರ ಸಾಸಿ ವಕೀಲರು ಸರಪಂಚ ಇವರೇ ಮೊದಲಾದ ಬ್ರಾಹ್ಮಣ ಪ್ರಮುಖರು ಮುರಲೀಧರ ದೇವಸ್ಥಾನದ ಮುಂಭಾಗದಲ್ಲಿ ಸಮ್ಮಿಲಿತರಾಗಿ, ಶ್ರೀ ಜಗದ್ಗುರು ಮಹಾನುಭಾವರಿಗೆ ವಿಶೇಷ ಗೌರವದಿಂದ ಸತ್ಕರಿಸಿ, ಭಾವಚಿತ್ರವನ್ನು ತೆಗೆಯಿಸಿದರು.

ಇದರಂತೆ ಪ್ರತಿಯೊಂದು ಸಮಾಜದವರು ಅಧಿಕವಾದ ಭಕ್ತಿ ವಿಶೇಷದಿಂದ ಜಗದ್ಗುರುಗಳವರನ್ನು ಗೌರವಿಸಿದರು. ಒಟ್ಟಿನಮೇಲೆ ಸಮಸ್ತರೂ ಈ ತರಹದ ಮಹೋತ್ಸವವನ್ನು ಏರ್ಪಡಿಸಿದ್ದು ನೋಡಿದರೆ, ಇದೆಲ್ಲಾ ಆ ಮಹಾತ್ಮರಾದ ಉಜ್ಜಯಿನೀ ಜ|| ಮಹಾಶ್ರೀಗಳವರ ತಪಃಪ್ರಭಾವವೆಂದೇ ಹೇಳಬೇಕಾಗಿದೆ.

ಈ ಪ್ರಕಾರ ಮಹೋತ್ಸವವು ಮ. ರಾ. ಅಂಣಾಸಾಹೇಬ ಕಥಲೆಯವರ ಭವ್ಯವಾದ ಮಂದಿರಕ್ಕೆ ತಲ್ಪಿತು. ದಿವ್ಯ ಸಿಂಹಾಸನದಮೇಲೆ ಶಿವಯೋಗಿ ಪುಂಗವರು ಮಂಡಿಸಿ, ಧರ್ಮತತ್ವಗಳನ್ನು ಬೋಧಿಸಿ, ಫಲಾಶೀರ್ವಾದಗಳನ್ನಿತ್ತರು. ಆಕೂಡಲೇ ಜನಸಮೂಹವು ಆನಂದದಿಂದ ಶ್ರೀ ಜ|| ಸಿದ್ಧಲಿಂಗ ಮಹಾರಾಜಕೀ ಜೈ, ಎಂದು ಜಯಘೋಷ ಮಾಡಿ, ತೆರಳಿದರು.

---

## ಸರ್ಪ–ಮುಂಗಲಿಗಳ ಕಲಹನಿವಾರಿಸಿದ್ದು.

ಬಾರ್ಶಿ ಪಟ್ಟಣದಲ್ಲಿ ಮಹಾತ್ಮರಾದ ಉಜ್ಜಯಿನೀ ಜಗದ್ಗುರುಗಳವರ ಪಾದಾರವಿಂದಗಳ ದರ್ಶನಮಾಡಿಕೊಂಡು ಧನ್ಯರಾಗಬೇಕೆಂದು ಅನೇಕ ಜನರು ಬಂದು ಒಂದಿಸಿ, ಸದ್ಬೋಧ ಶ್ರವಣಮಾಡಿ ತೆರಳುತ್ತಿದ್ದರು.

ಹೀಗಿರುತ್ತಿರಲು ಒಂದು ದಿವಸ ಮಧ್ಯಾನ್ಹ ೪ ಘಂಟೆ ಸಮಯ ಶ್ರೀ ಜಗದ್ಗುರುಗಳವರ ಸವಾರಿಯು ಡಮಣಿಗಾಡಿಯಲ್ಲಿ ಕುಳಿತು ಸುಲಾಖೆಯವರ ಬಂಗ್ಲೇಯಿಂದ ಊರೋಳಗೆ ಆಗಮಿಸುವಾಗ್ಗೆ, ಶ್ರೀ. ಕಥಲೆಯವರ ಮನೆಯ ಹತ್ತಿರ ಹೂವಿನಗಿಡಳ ಕಂಪೌಂಡಿನಲ್ಲಿ ಒಂದು ಸರ್ಪವೂ, ಒಂದು ಮುಂಗಲಿಯೂ ಭಯಂಕವಾಗಿ ಕಾದಾಡುತ್ತಿದ್ದವು. ಅವುಗಳ ಕಲಹವನ್ನು ನೋಡುತ್ತ ಅನೇಕ ಜನರು ನಿಂತು ಕೊಂಡಿದ್ದರು.

ಆ ಸಮಯಕ್ಕೆ ಮಹಾ ಸವಾರಿಯು ದಯಮಾಡಿಸಿ, ಇದು ಯೇನಪ್ಪಾ ಗದ್ದಲ ಇಷ್ಟು ಜನರು ಇಲ್ಲೇಕೆ ಕೂಡಿದ್ದಾರೆಂದು ಕೇಳಿದರು. ಮಹಾಗುರುಗಳೇ, ಇಲ್ಲಿ ೧ ದೊಡ್ಡ ಸರ್ಪವೂ, ೧ ಮುಂಗಲಿಯೂ ಕೂಡಿ ಒಂದು ತಾಸಿನಿಂದಲೂ ಕಲಹ ಮಾಡುತ್ತಿದ್ದಾವೆ. ಜನರು ಹೊಡೆದು ಬಿಡಿಸಿದರೂ ಬಿಡಲೊಲ್ಲವೆಂದು ಅರಿಕೆಮಾಡಿ ಕೊಳ್ಳಲು, ಮಹಾಶ್ರೀಗಳವರು ಕೂಡಲೇ ಕೆಳಗಿಳಿದು ಅವುಗಳ ಸಮೀಪದಲ್ಲಿ ಬಂದು ನೋಡಿ "ಎಲೈ ಪ್ರಾಣಿಗಳೇ, ಏನಿದು ನಿಮ್ಮ ಕಲಹ ಸಾಕು ಬಿಟ್ಟು ಸುಮ್ಮನೆ ಹೋಗಿರಿ; ಇದರಿಂದ ನಿಮಗೇನು ಫಲವಿದೆ." ಹಿಂದೆ ಕೌರವರೂ, ಪಾಂಡವರೂ ಮತ್ತು ರಾಮ-ರಾವಣರೂ ಎಷ್ಟೋ ದಿವಸ ಕಾದಾಡಿದರು; ಅದರಿಂದೇನು ಸುಖವಿಲ್ಲದಾಯಿತು. ಸಾಕು ಸುಮ್ಮನೆ ಹೋಗಿರಿ ಎಂದು ನುಡಿದ ತಕ್ಷಣ ಅವೆರಡೂ ಪ್ರಾಣಿಗಳು ಈ ಮಹಿಮರ ಮುಖವನ್ನು ನೋಡಿ, ತಮ್ಮ ವೈರತ್ವವನ್ನು ಬಿಟ್ಟು ಬೇರೆ ಬೇರೆ ಕಡೆಗೆ ಹೊರಟುಹೋದವು.

ಈ ಮಹತ್ವವನ್ನು ಅಲ್ಲಿ ನೆರೆದ ಜನರು ನೋಡಿ ಆಶ್ಚರ್ಯಚಕಿತರಾಗಿ ಆಹಾ ಇದೇ ಅಲ್ಲವೇ ಮಹಿಮರ ಪ್ರಭಾವವು. ಜನ್ಮಾರಭ್ಯ ಪರಸ್ಪರ ದ್ವೇಷದಿಂದ ಸಂಚರಿಸುವ ಈ ಕ್ಷುಲ್ಲಕ ಪ್ರಾಣಿಗಳು ಸಹ ಮಹಾತ್ಮರ ದರ್ಶನ ಸದ್ಬೋಧ ಕೇಳಿ ತಮ್ಮ ತಮ್ಮ ವೈರಭಾವವನ್ನು ತ್ಯಾಜ್ಯಮಾಡಿ ತೆರಳಿದವು. ನಾವು ಶ್ರೇಷ್ಠವಾದ ಮನುಷ್ಯ ಜನ್ಮದಲ್ಲಿ ಹುಟ್ಟಿದ್ದರೂ ಪರಸ್ಪರ ದ್ವೇಷ, ಅಸೂಯ, ಹಿಂಸೆ, ನಿಂದಾ, ಕಲಹ ಇತ್ಯಾದಿ ದುಷ್ಕೃತಿಗಳನ್ನು ಮಾಡುತ್ತಿರುವೆವು. ಇಂತಹ ಪರಶಿವಾವತಾರಿಗಳ ದರ್ಶನ ಸದ್ಬೋಧ ಶ್ರವಣಮಾಡಿಕೊಂಡರೂ ನಮ್ಮ ದುರ್ಗುಣಗಳನ್ನು ಬಿಡದಿದ್ದರೆ, ನಮಗಿಂತಲೂ ಮುರ್ಖರಿನ್ನಾರಿರುವರು; ಹೀಗೆಂದು ಆ ಮಹಾತ್ಮರನ್ನು ಕೊಂಡಾಡಿದರು.

ಈ ಮುಂಗಲಿ–ಸರ್ಪಗಳ ಕಲಹನಿವಾರಿಸಿದ ವಾರ್ತೆಯು ಅನೇಕ ವರ್ತಮಾನ ಪತ್ರಿಕೆಗಳಲ್ಲಿ ಪ್ರಸಿದ್ಧಮಾಡಲ್ಪಟ್ಟಿತು.

---

## ಶ್ರೀ ವಾಗೀಶ ಶಿವಾಚಾರ್ಯರಿಗೆ ಆಶೀರ್ವಾದ

ಮತ್ತೊಂದು ಸಮಯದಲ್ಲಿ ಮಹಾ ಶ್ರೀಗಳವರು ಶ್ರೀಶೈಲ ಪೀಠಾಧಿಕಾರ ಮಾಡಲು ಯೋಚಿಸಿ, ಪಂಡಿತಾರಾಧ್ಯ ಶಾಖಾನುವರ್ತಿಗಳೂ ಕುಲ, ಶೀಲ, ವಿದ್ಯಾ, ವಿನಯಾದಿ ಸದ್ಗುಣಯುತರೂ ಆದ ರಾಣೆಬೆನ್ನೂರ ತಾಲೂಕು ಮುದೇನೂರು ಹಿ. ಮ. ಪಟ್ಟಾಧೀಶ ವಾಗೀಶ ಶಿವಾಚಾರ್ಯರವರನ್ನು ಕರೆತರಲಿಕ್ಕೆ ಉಮಚಿಗಿ ವೇ|| ಶಂಕರ ಶಾಸ್ತ್ರಿಗಳಿಗೆ ಪತ್ರಸಹಿತ ಅಪ್ಪಣೆ ಮಾಡಲು ಅವರಲ್ಲಿಗೆ ಶಾಸ್ತ್ರಿಗಳು ಹೋಗಿ ಕರೆತಂದರು. ಆಜ್ಞಾಪ್ರಕಾರ ವಾಗೀಶ ಶ್ರೀಗಳವರು ಸನ್ನಿಧಿಗೆ ಬಂದು ವಂದಿಸಲು ಕೆಲವು ಪ್ರಶ್ನೋತ್ತರಗಳು ನಡೆದವು.

ಶ್ರೀ ಜಗದ್ಗುರುಗಳು— ನಿಮ್ಮನ್ನು ಶ್ರೀಶೈಲ ಪೀಠಕ್ಕೆ ಅಧಿಕಾರ ಮಾಡಬೇಕೆಂದು ದಾರುಕ ಶಿವಾಚಾರ್ಯರ ಅಪ್ಪಣೆ ಯಾಗಿದೆ. ಇದಕ್ಕೆ ನಿಮ್ಮ ಅಭಿಪ್ರಾಯ ವೇನು ?

ವಾಗೀಶ— ಆ ಜಗದ್ಗುರು ಪಂಡಿತಾರಾಧ್ಯ ಪೀಠಕ್ಕೆ ಯೋಗ್ಯವಾದ ಪಾಂಡಿತ್ಯ ಶಾಂತಿ ತಪಸ್ಸು ಮುಂತಾದವುಗಳು ಅಂಕುರವಾಗಿರುವ ಈ ವ್ಯಕ್ತಿಯು ಸದ್ಯಃ ಈ ಪೀಠಕ್ಕೆ ಅರ್ಹತೆ ಹೊಂದಿಲ್ಲ.

ಶ್ರೀ ಜಗದ್ಗುರುಗಳು— ಬಾಲ್ಯದಲ್ಲಿ ನಾವೂ ಹೀಗೇ ಇದ್ದೆವು. ಕಾಶೀ ಮುಂತಾದ ಕಡೆಗೆ ವಿದ್ಯಾಭ್ಯಾಸಕ್ಕೆ ಹೋಗಲಿಲ್ಲ; ಇಲ್ಲಿಯೇ ಸಂಗ್ರಹಿಸಿದಂತೆ ನೀವಾದರೂ ಸಂಗ್ರಹಿಸಲಿಕ್ಕೆ ಬರುತ್ತದೆ. ಆದ್ದರಿಂದ ಅಧಿಕಾರ ಗ್ರಹಣಮಾಡಿ ನೀವು ಎಷ್ಟಾದರೂ ಅಭ್ಯಾಸ ಮಾಡಬಹುದು.

ವಾಗೀಶ— ಅಧಿಕಾರಾ ನಂತರ ವಿದ್ಯಾಸಂಗ್ರಹ ಮಾಡುವದು ಯೋಗೀಶ್ವರರಾದ ತಮ್ಮೊಬ್ಬರ ಹೊರ್ತು ಬೇರೆಯವರಿಗೆ ಸಾಧಿಸುವಮಾತಲ್ಲ. ಪೀಠಾರೋಹಣ ವೆಂದರೆ, ಅದು ಕೇವಲ ವೈಭವಾಡಂಬರ ಮಹೋತ್ಸವಾದಿಗಳಲ್ಲಿ ಮನಸ್ಸನ್ನು ತೊಡಗಿಸಿ, ತಾತ್ವಿಕವನ್ನೂ ವಿದ್ಯೆಯನ್ನೂ ಲೋಪಮಾಡಲು ಒಂದು ದೊಡ್ಡ ವಿಪತ್ತೇ ಸರಿ. ಆದ್ದರಿಂದ ಅಂತಹ ಯೋಗ್ಯತೆಯು ಈ ವ್ಯಕ್ತಿಗೆ ಬಂದಮೇಲೆ ಪುನಃ ಪರೀಕ್ಷಿಸಿ ದೈವಯೋಗವಿದ್ದಲ್ಲಿ ತಮ್ಮ ಪಾದಾಜ್ಞೆಗೆ ಹೊರತಿಲ್ಲ.

ಶ್ರೀ ಜಗದ್ಗುರುಗಳು— ನಿಮ್ಮನ್ನು ಈಗಲೇ ಉದ್ದಾಮಕವಿಗಳೆಂದು ಜನರು ಹೇಳುವದೇಕೆ ?

ವಾಗೀಶ— ತಾಯಿಯು ತನ್ನ ಮಗ ಕುರೂಪಿಯಾಗಿದ್ದರೂ ಇಂದ್ರ-ಚಂದ್ರನೆಂದು ಕರೆಯುವಂತೆ ತಮ್ಮ ಪ್ರೇಮಕ್ಕೋಸ್ಕರ ಕರೆಯುತ್ತಿರಬಹುದು.

ಶ್ರೀ ಜಗದ್ಗುರುಗಳು— ಹಾಗಾದರೆ ನಿಮ್ಮ ಕವಿತೆಯನ್ನು ನಾವೇ ಪರೀಕ್ಷೆ ಮಾಡಿದರೆ ತಿಳಿಯುವದು. ನಮ್ಮ ಮೇಲೆ ಈಗ ಕವನವನ್ನು ಮಾಡುವಿರಾ ?

ವಾಗೀಶ— ಅಪ್ಪಣೆ ಎಂದು ೩ ಕಂದ-ಪದ್ಯಗಳನ್ನು ಆಕೂಡಲೇ ೧ ಘಳಿಗಿಯಲ್ಲಿ ರಚಿಸಿ ಓದಿದರು.

ಕಂದ ॥ ಭವಹರರೂಪಂಘನತರ। ಶಿವಸಿದ್ಧಾಂತೋಪದೇಶಕಂ ಶುಭಕರನಂ॥ ಭುವನವಿವಂದಿತಪಾದಂ। ತವೆಪೊರೆಗುಂದಾರುಕಾರ್ಯ ನಭಿನವರೂಪಂ ॥ ೧ ॥ ಅಭಿವಾದಕ ಜನಪಾಲಂ । ವಿಬುಧಾವಳಿವಂದಿತಾಂಘ್ರಿ ಪದ್ಮಂಸುಗುಣ ॥ ಪ್ರಭವಕ್ಷಾಧಾರಂ ತಾ। ಮಭವ ಛಿಸನಮಾಡಿರ್ಕೆ ಸಿದ್ಧಲಿಂಗಯತೀಶಂ ॥೨॥ ಅಷ್ಟಾವರಣಗಳೊಳಗಿಹ। ಶಿಷ್ಟತೆಯಂಜನಕೆ ಬೋಧಿಸುತ್ತವರಂನೀಂ ॥ ಕಷ್ಟವಿದೂರರಮಾಡ್ಯೆ। ಶ್ರೇಷ್ಠನೆಗುರುದೇವ ಸಿದ್ಧಲಿಂಗಯತೀಂದ್ರಾ ॥ ೩ ॥

ಶ್ರೀ ಜಗದ್ಗುರುಗಳು— ತತ್ಕಾಲದಲ್ಲಿ ರಚಿಸಿದ ಕವಿತಾಸರಣಿಯನ್ನೂ ಪ್ರೌಢಿಮೆಯನ್ನೂ ತಿಳಿದು ಮನದೋಳಾನಂದಹೊಂದಿ ಒಳ್ಳೇದು ಪಟ್ಟಾಧಿಕಾಂಗಳೇ ನೀವು ವಿದ್ವಾಂಸರಾಗಿ ಬಂದಮೇಲಾದರೂ ಆ ಪೀಠಾಧಿಕಾರಕ್ಕೆ ಒಪ್ಪಿಕೊಳ್ಳಿರಿ; ಶ್ರೀ ಮರುಲಸಿದ್ಧನು ಆಚಾರ್ಯಪದತ್ವಕ್ಕೆ ಬೇಕಾಗುವ ಸಕಲ ಗುಣಗಳನ್ನು ನಿಮಗೆ ಅನುಗ್ರಹಿಸುವನೆಂದು ಅಪ್ಪಣೆಮಾಡಿ ಫಲಾಶೀರ್ವಾದಗಳನ್ನಿತ್ತು ಕಾಶಿಗೆ ಕಳುಹಿಸಿಕೊಟ್ಟರು.‡

‡ಈ ಮಹಾನುಭಾವರು ತಮ್ಮ ಅಮೃತವಾಣಿಯಿಂದ ನುಡಿದಂತೆ ಶ್ರೀಗಳು ಮುಂದೆ ಕಾಶೀ ಕಲಕತ್ತಾ ಪಟ್ಟಣಗಳಲ್ಲಿ ೩ ವಿದ್ಯಾಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದರು. ಮುಂದೆ ತಾರೀಖು ೭—೭—೧೯೪೦ ನೇ ದಿವಸ ಶ್ರೀಶೈಲ ಜಗದ್ಗುರು ಪೀಠಕ್ಕೆ ಅಧಿಕಾರವಾಯಿತು. ಈ ಪೀಠದ ತೊಂದರೆಗಳನ್ನು ತಮ್ಮ ವಿದ್ಯಾ-ಚಾತುರ್ಯತೆ ಧೈರ್ಯಸಾಹಸಗಳಿಂದಲೂ ತಪೋಬಲದಿಂದಲೂ ನಿವಾರಿಸಿ ಸದ್ಯಃ ಕರ್ನಾಟಕ ದೇಶದಲ್ಲಿ ಮಹಾಸವಾರಿ ದಿಗ್ವಿಜಯಮಾಡಿ ಅಖಿಲ ವೀರಶೈವ ಜನಾಂಗಕ್ಕೆ ದರ್ಶನ ಧರ್ಮೋಪದೇಶಾದಿಗಳಿಂದ ಆನಂದಪಡಿಸುತ್ತಿದ್ದಾರೆ.

---

## ಸೊಲ್ಲಾಪುರಪಟ್ಟಣದಲ್ಲಿ ಅಭೂತಪೂರ್ವ ಮಹೋತ್ಸವವು

ಶಿಷ್ಯಕೋಟಿಯನ್ನು ಉದ್ಧರಿಸಲು ಕರುಣಾರ್ದ್ರ ಹೃದಯರಾಗಿ, ಮಹಾರಾಷ್ಟ್ರ ದೇಶಕ್ಕೆ ದಿಗ್ವಿಜಯ ಮಾಡಿದ ಭಗವತ್ಪಾದರಾದ ಉಜ್ಜಯಿನೀ ಜಗದ್ಗುರು ಮಹಾನುಭಾವರು ಬಾರ್ಶಿ ನಗರದಲ್ಲಿ ಮುಕ್ಕಾಂಮಾಡಿ ಸದ್ಭಕ್ತರ ಸೇವೆಯನ್ನು ಸ್ವೀಕರಿಸುತ್ತಿರುವಲ್ಲಿ, ಇನ್ನುಳಿದ ಶಹರ (ಪಟ್ಟಣ) ನಿವಾಸಿಗಳಾದ, ಗುರುಭಕ್ತಿ ನಿಷ್ಠಾಪರರಾದ ಶಿವಭಕ್ತ ಮಂಡಲಿಯು ಈ ಶಿವಯೋಗಿಪುಂಗವರನ್ನು ತಮ್ಮ ತಮ್ಮ ಗ್ರಾಮಗಳಿಗೆ ಬಿಜಯಂಗೈಸಿಕೊಳ್ಳಬೇಕೆಂಬಭಿಲಾಷೆಯಿಂದ ಅಸಾಧಾರಣ ಭಕ್ತಿಭಾವದಿಂದೊಡಗೂಡಿ, ಸನ್ನಿಧಿಗೆ ಬಂದು ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದರು.

ಮಹಾರಾಷ್ಟ್ರ ದೇಶದಲ್ಲಿ ಸುಪ್ರಸಿದ್ಧವಾದ ಸೊಲ್ಲಾಪುರ ಪಟ್ಟಣವು ೫೦-೬೦ ಸಹಸ್ರ ಮಂದಿರಗಳಿಂದಲೂ, ಲಕ್ಷಾಂತರ ಜನಸಮುದಾಯದಿಂದಲೂ, ೮.೧೦ ದೊಡ್ಡ ದೊಡ್ಡ ಮಿಲ್ (ಗಿರಣಿ), ಜಿನ್, ಪ್ರೆಸ್, ಮುಂತಾದವುಗಳಿಂದಲೂ ವ್ಯಾಪಾರ, ಒಕ್ಕಲತನ, ಕೈಗಾರಿಕೆ, ವರ್ತಕಮಂಡಲಿ, ಶ್ರೀಮಂತರೂ, ಧೀಮಂತರೂ, ಪದವೀಧರರೂ, ವಕೀಲರೂ, ಪಂಡಿತರುಗಳಿಂದಲೂ ೨೫-೩೦ ಸಹಸ್ರ ವೀರಶೈವ ಮಂಡಲಿಯಿಂದಲೂ ತುಂಬಿರುವದಲ್ಲದೆ; ಸುಪ್ರಸಿದ್ಧ ಶ್ರೀ ಸಿದ್ಧರಾಮೇಶ್ವರ, ಶ್ರೀ ಮಲ್ಲಿಕಾರ್ಜುನ, ಶ್ರೀ ರೇವಣಸಿದ್ಧೇಶ್ವರ ಮುಂತಾದ ದೇವಾಲಯಗಳಿಂದಲೂ ಜಗತ್ತಿನಲ್ಲೇ ಪ್ರಖ್ಯಾತಿಗೊಂಡಿರುತ್ತದೆ.

ಈ ನಗರದಲ್ಲಿರುವ ಶಿವಭಕ್ತ ಮಂಡಲಿಯು ಪರಮಭಕ್ತಿತತ್ಪರರಾಗಿ, ಉಜ್ಜಯಿನೀ ಜ|| ಮಹಾಶ್ರೀಗಳವರ ಸನ್ನಿಧಿಗೆ ಬಂದು, ತಮ್ಮಲ್ಲಿ ಮಹೋತ್ಸವವನ್ನು ನೆರವೇರಿಸಲು ಪ್ರಾರ್ಥನೆ ಮಾಡಿಕೊಂಡರು. ಸನ್ನಿಧಿಯವರು ಅನುಜ್ಞೆಯನ್ನೀಯಲು, ಸಕಲ ವಿಧವಾದ ಸಾಹಿತ್ಯಗಳನ್ನು ಸಿದ್ಧಗೊಳಿಸಿ, ಮಹೋತ್ಸವದ ಪ್ರಸಿದ್ಧ ಪತ್ರಿಕೆಗಳನ್ನು ಚತುರ್ದಿಕ್ಕುಗಳಿಗೆ ರವಾನೆಮಾಡಿದರು.

ಈ ಮಹಾಶಿವಯೋಗಿ ಪುಂಗವರ ದರ್ಶನಮಾಡಿಕೊಂಡು, ಪುನೀತರಾಗಬೇಕೆಂದು ದೇಶಾಂತರಗಳಿಂದ ಅಸಂಖ್ಯಾತ ಜನಸಂದಣಿಯು ತಂಡೋಪತಂಡವಾಗಿ ಬಂದು ಸೇರಿದರು. ಪಟ್ಟಣವು ನಾನಾವಿಧವಾದ ಶೃಂಗಾರಗಳಿಂದ ಬಹುಜನ ಮನೋರಂಜನವಾಗಿ ರಂಜಿಸುತ್ತಿತ್ತು. ತಾ. ೧೨—೬—೧೯೩೩ ನೇ ದಿವಸ ಶೃಂಗರಿಸಲ್ಪಟ್ಟ ಸುವರ್ಣ-ರಜತ ಮಿಶ್ರಿತ ತಿರ್ಯಗಾಂದೋಲನದಲ್ಲಿ ಮಹಾಗುರು ಸಾರ್ವಭೌಮರು ಮೂರ್ತಮಾಡಿದಕೂಡಲೇ ಜಯ ಜಯ ಧ್ವಾನವು ತುಂಬಿತು. ನಾನಾವಿಧ ವಾದ್ಯ ವಿಶೇಷಗಳಿಂದಲೂ, ೭೨ ಬಿರುದಾವಳಿಗಳಿಂದಲೂ, ವೇದಘೋಷಗಳಿಂದಲೂ ಮಹೋತ್ಸವವು ರಾಜಬೀದಿಗಳಲ್ಲಿ ಮಂದಗತಿಯಿಂದ ಸಾಗುತ್ತಿರಲು, ಪ್ರೇಕ್ಷಕರು ಆನಂದಾಂಬುಧಿಯಲ್ಲಿ ಲೋಲಾಡುತ್ತ, ಪರಮ ಜ|| ಗಳವರ ದರ್ಶನದಿಂದ ನಾವು ಧನ್ಯರಾದೆವೆಂದು ಕೊಂಡಾಡುತ್ತ ಆನಂದಭಾಷ್ಪಗಳನ್ನು ಕರೆಯುತ್ತಿದ್ದರು. ಮಹೋತ್ಸವವು ಪರಮ ಸಂಭ್ರಮದಿಂದ ಜರಗಿತು. ಆ ನಗರದ ಸದ್ಭಕ್ತರ ಶೇವಾ-ಶುಶ್ರೂಷಾದಿಗಳಿಂದ ಆನಂದಭರಿತರಾಗಿದ್ದರು.

---

## ಸೊಲ್ಲಾಪುರದ ವಾರದ ಸಂಸ್ಕೃತ ಪಾಠಶಾಲೆಗೆ ಧನಸಹಾಯ ಮಾಡಿದ್ದು

ಮಹಾಶ್ರೀಗಳವರು ಸೊಲ್ಲಾಪುರದಲ್ಲಿ ೩—೪ ತಿಂಗಳವರೆಗೂ ಭಕ್ತಮಂಡಳಿಯ ಸೇವೆ-ಸತ್ಕಾರಗಳನ್ನು ಸ್ವೀಕರಿಸುತ್ತಿರಲು, ಈ ನಗರದಲ್ಲಿ ನಡೆಯುತ್ತಿರುವ ಶ್ರೀಮಂತ



ಉಜ್ಜಯಿನೀ ಶ್ರೀ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳ

ಸನ್ನಿಧಿಯಲ್ಲಿ

ಹುಟಗಿ. ಬ್ರ| ಮ| ಚನ್ನವೀರ ಸ್ವಾಮಿಗಳು

ಸೊಲ್ಲಾಪುರ.

ವಾರದ ಮಲ್ಲಪ್ಪನವರ ಸಂಸ್ಕೃತ ಪಾಠಶಾಲೆಯನ್ನು ಅವಲೋಕನಮಾಡಬೇಕೆಂದಾ, ಲೋಚಿಸಿ ತಾ. ೩೧—೮—೧೯೩೩ ನೇ ದಿವಸ ವೇ|| ಪಂ|| ಶಂಕರಶಾಸ್ತ್ರಿಗಳೊಡನೆ ಆ ವಿದ್ಯಾಲಯಕ್ಕೆ ದಯಮಾಡಿಸಿ ಅಲ್ಲಿರುವ ಸುವ್ಯವಸ್ಥೆಯನ್ನು ಪರಾಂಬರಿಸಿ ವಿದ್ಯಾರ್ಥಿಗಳನ್ನು ಪಂಡಿತರಿಂದ ಪರೀಕ್ಷೆ ಮಾಡಿಸಿದರು.

ಸಂತೋಷಭರಿತರಾಗಿ ವಿದ್ಯಾರ್ಥಿಗಳಿಗೆ ಪಾರಿತೋಷಕವಾಗಿಯೂ ಪಾಠಶಾಲಾಧ್ಯಾಪಕರಿಗೆ ಗೌರವಾರ್ಥವಾಗಿಯೂ ಯೋಗ್ಯಧನವನ್ನಿತ್ತುದಲ್ಲದೆ, ಮುಂದೆ ಈ ಮಹಾ ಪಾಠಶಾಲೆಯು ಚಿರಕಾಲಾಭಿವೃದ್ಧಿ ಹೊಂದಲೆಂಬ ಸದುದ್ದೇಶದಿಂದ ಶ್ರೀಮಂತರಾದ ಮಲ್ಲಪ್ಪ ಮಹೋದಯರ ಸ್ಮಾರಕವಾಗಿ ೫೦೦೦ ರೂಪಾಯಿಗಳನ್ನು ಆಶೀರ್ವದಿಸಿದರು.

ವಿದ್ಯಾಪ್ರೇಮಿಗಳಾದ ಮಹಾಜಗದ್ಗುರುಗಳವರು ಸರ್ವತ್ರ ಸಂಸ್ಕೃತ ವಿದ್ಯಾವ್ಯಾಪಕತೆಗಾಗಿ ಮಾಡಿದ ಅತ್ಯುದಾರ ಧನಸಹಾಯವು ಜಗನ್ಮಾನ್ಯವೂ ಅತ್ಯಂತ ಸ್ತುತ್ಯವಾದದ್ದೂ ಆಗಿದೆ.

ತರುವಾಯ ವಿದ್ಯಾಲಯದಲ್ಲಿರುವ ವ್ಹಿಜಿಟರ್ಸ (ಶಿರಾ) ಬುಕ್ಕಿನಲ್ಲಿ ಸ್ವಹಸ್ತಾಕ್ಷರಗಳಿಂದ ತಮ್ಮ ಸದಭಿಪ್ರಾಯವನ್ನು ವ್ಯಕ್ತಪಡಿಸಿ ಬರೆದಿದ್ದಾರೆ.

( ಆ ಲೇಖವು ತಾ. ೨೪—೧೦—೧೯೩೮ ನೇ ಪಂ. ಪ್ರಭಾದಲ್ಲಿದೆ. )

---

## ದೀಕ್ಷಾಸಂಸ್ಕಾರಮಾಡಲು ಶುಭಸಂದೇಶ

ಈ ಮಹಾತ್ಮರು ಮಹಾರಾಷ್ಟ್ರ ಪ್ರಾಂತದಲ್ಲಿ ಸಂಚಾರ ನಡೆಯಿಸಿ, ತಾರೀಖು ೧೨—೧೦—೧೯೩೩ ನೇ ದಿವಸ ಹುಟ್ಟಗಿ (ಜಂಕ್ಶನ್) ಗ್ರಾಮಕ್ಕೆ ದಯಮಾಡಿಸಿ ಅಲ್ಲಿಯ ವೀರಶೈವ ಮಂಡಲಿಗೆ ಧರ್ಮತತ್ವಗಳ ಬೋಧಿಸಲು ಸರ್ವರೂ ಸಂತುಷ್ಟರಾದರು.

ತರುವಾಯ ಸುಪ್ರಸಿದ್ಧ ಕ್ಷೇತ್ರವಾದ ಪಂಢರಪುರಕ್ಕೆ ತಾ. ೨೩—೧೦—೩೩ ನೇ ದಿವಸ ಮಹೋತ್ಸವದೊಡನೆ ಆಗಮಿಸಿ, ಅಲ್ಲಿಯೂ ವೀರಶೈವ ಮತರಹಸ್ಯಗಳನ್ನು ಲೌಕಿಕ ಪಾರಮಾರ್ಥಿಕ ದೃಷ್ಟಾಂತಗಳಿಂದ ಶೃತಪಡಿಸಿದರು. ಮತ್ತು ಮಹಾರಾಷ್ಟ್ರ ದೇಶದಲ್ಲಿ ವೀರಶೈವ ಜನಾಂಗಸುಧಾರಣೆಯಾಗದೆ ಹಿಂದುಳಿದಿರುವದನ್ನರಿತು, ಈ ದೇಶದವರಲ್ಲಿ ಧರ್ಮಜಾಗ್ರತೆಯನ್ನುಂಟುಮಾಡಲಿಕ್ಕೆ ತಮ್ಮ ಸನ್ನಿಧಿಯಲ್ಲಿ ಸೇವಾ ಸುಶ್ರೂಷೆಗಳ ಮಾಡುತ್ತ ಕೇವಲ ಪ್ರೀತಿಪಾತ್ರರಾದ ಹುಟ್ಟಗಿ ಬೃ| ಮ| ಪಟ್ಟಾಧೀಶ ಶ್ರೀ ಚನ್ನವೀರಶಿವಾಚಾರ್ಯರವರಿಗೆ ಅಪ್ಪಣೆ ಕೊಡಿಸಿದರು— ನೀವು ಈ ಪ್ರಾಂತದಲ್ಲಿ ಅತಿಮೌಢ್ಯಸ್ಥಿತಿಯಿಂದಿರುವ ಶಿವಭಕ್ತರಾದ ಸ್ತ್ರೀ-ಪುರುಷರಿಗೆ ಶಿವದೀಕ್ಷಾ

ಸಂಸ್ಕಾರ ಮಾಡುತ್ತ ವೀರಶೈವ ಮತರಹಸ್ಯ ವಿಷಯಗಳನ್ನು ಚೆನ್ನಾಗಿ ಬೋಧಿಸಿರಿ. ಹಾಗು ಸಮಾಜದಲ್ಲಿ ಧರ್ಮಜಾಗ್ರೃತಿಯನ್ನುಂಟುಮಾಡಿರಿ. ನಿಮ್ಮ ಪ್ರಯತ್ನವು ಶ್ರೇಯಸ್ಕರವಾಗಿ ಮುಂದೆ ಉನ್ನತಾವಸ್ಥೆ ಹೊಂದುವದು. ನೀವು ಜಗದ್ವಿಖ್ಯಾತರಾಗುವಿರಿ. ಎಂದು ಶುಭಾಶೀರ್ವಾದವನ್ನು ನುಡಿದು, ತಾ. ೨೬—೧೨—೧೯೩೩ ನೇ ದಿವಸ ಪಂಢರಪುರ ಮುಕ್ಕಾಮಿನಲ್ಲಿ ಸ್ವಹಸ್ತಾಕ್ಷರಗಳಿಂದ ಒಂದು ಅಮೋಘವಾದ "ಶುಭಸಂದೇಶ"ವನ್ನು ಲಿಖಿಸಿ ಅಪ್ಪಣೆ ಕೊಡಿಸಿದ್ದಾರೆ. ಬಳಿಕ ಉಜ್ಜಯಿನೀ ಮಹಾ ಸಂಸ್ಥಾನದಲ್ಲಿ ನಿರ್ಮಾಣವಾಗುವ ಶಿಲಾಮಠಕ್ಕೆ ಭಕ್ತಾದಿಗಳಿಂದ ಧನ ಸಂಗ್ರಹ ಮಾಡುತ್ತಿದ್ದರು.

---

## ಪ್ರಸಾದ ಮಹತ್ವ

ಈ ಮಹಾತ್ಮರು ಮಂಗಳವೇಢೆ ಗ್ರಾಮಕ್ಕೆ ತಾ. ೩೧—೧೨—೩೩ ನೇ ದಿವಸ ಮಹೋತ್ಸವದೊಡನೆ ಆಗಮಿಸಿದ ಬಳಿಕ ಅಲ್ಲಿಗೆ ಸಮೀಪದಲ್ಲಿರುವ ನಂದೂರು ಎಂಬ ಹಳ್ಳಿಗೆ ಡಮಣಿಗಾಡಿಯಲ್ಲಿ ಕುಳಿತು ಪ್ರಯಾಣಮಾಡಿ ಆ ಗ್ರಾಮದ ಹೊರಗೆ ಇರುವ ಶ್ರೀ ರೇವಣಸಿದ್ಧೇಶ್ವರ ದೇವಾಲಯದ ಹತ್ತರ ಇಳಿದು ಗಾಡಿ ಹೊಡೆಯುವ ಸಿದ್ಧಯ್ಯನನ್ನು ಕುರಿತು— ಎಲಾ, ನೀನು ಈ ಊರೊಳಗೆ ಹೋಗಿ ಎರಡು ಭಕ್ಕರಿ (ರೊಟ್ಟಿ) ಒಂದು ಸೆರೆ ಶೇಂಗಾದಬೇಳೆ ತೆಗೆದುಕೊಂಡು ಬಾ ಹೋಗೆಂದು ಹೇಳಿ ಕಳುಹಿಸಿದರು.

ಆ ಪ್ರಕಾರ ಊರಲ್ಲಿ ಶಿವಭಕ್ತರ ಮನೆಗೆ ಹೋಗಿ ಸಿದ್ಧಯ್ಯನು— ನಿಮ್ಮ ಊರ ಹೊರಗೆ ಉಜ್ಜಯಿನೀ ಜಗದ್ಗುರುಗಳು ಬಂದು ಕುಳಿತಿದ್ದಾರೆ; ಎರಡು ಭಕ್ಕರಿ, ಶೇಂಗಾದ ಬೇಳೆ ಕೊಡಿರಿ ಎಂದು ಕೇಳಿದನು. ಅಷ್ಟರೊಳಗೆ ಈ ಮಹಾತ್ಮರ ಸದ್ವಾರ್ತೆಯನ್ನು ಕೇಳಿದ್ದಲ್ಲದೆ, ಮಹೋತ್ಸವಗಳನ್ನು ನೋಡಿದ್ದರಿಂದ ಕೆಲವು ಭಕ್ತರು ಗಾಬರಿಯಾಗಿ ೨ ರೊಟ್ಟಿ ಮತ್ತು ಶೇಂಗಾಬೇಳೆ ಕೊಟ್ಟು ಕಳುಹಿಸಿದರು. ಹಿಂದಿನಿಂದ ೫೦—೬೦ ಜನ ಭಕ್ತರು ಮಹಾಸನ್ನಿಧಿಯವರಲ್ಲಿಗೆ ಹೊರಟು ಬಂದರು.

ಇಷ್ಟರಲ್ಲಿ ಮಹಾಶ್ರೀಗಳವರು ಅಲ್ಲಿದ್ದ ಭಾವಿಯಲ್ಲಿ ಸ್ನಾನಮಾಡಿ ಶ್ರೀ ದೇವಾಲಯದಲ್ಲಿ ಕುಳಿತಿರಲು ಮಂಗಳವೇಡೆ ಗ್ರಾಮದ ಮುಖ್ಯರಾದ ಪಟ್ಟಣಶೆಟ್ಟಿ ಮುಂತಾದವರು ಸಹಾ ಕೆಲವರು ಅಲ್ಲಿಗೆ ಬಂದರು. ಸರ್ವರೂ ಭಕ್ತಿಯಿಂದ ವಂದಿಸಿ — ಮಹಾಗುರುಗಳೇ, ಗ್ರಾಮದೊಳಗೆ ದಯಮಾಡಿಸಬೇಕೆಂದು ಪ್ರಾರ್ಥನೆ ಮಾಡಿಕೊಳ್ಳಲಾಗಿ, ಸದ್ಭಕ್ತರೇ ಇರಲಿ ಮೊದಲು ಭೋಜನಮಾಡಲಿಕ್ಕೆ ಏಳಿರಿ; ನಮ್ಮ ಪ್ರಸಾದ ಸ್ವೀಕಾರಮಾಡಿರೆಂದು ಬಲಾತ್ಕಾರಮಾಡಲು, ಸರ್ವರೂ— ಮಹಾಪ್ರಭೋ, ನಾವು ಈಗ ಭೋಜನ ತೀರಿಸಿಕೊಂಡು ಬಂದಿರುವೆವು. ಹಸಿವೆಯಾಗಿಲ್ಲವೆಂದು ಬಹುದೀ

ನೋಕ್ತಿಯಿಂದ ಹೇಳಿಕೊಂಡರೂ ಕೇಳಲಿಲ್ಲಾ. ನಿರ್ವಾಹವಿಲ್ಲದೆ ಎದ್ದು ಬಂದು ಸಾಲಾಗಿ ಕುಳಿತುಕೊಂಡರು. ಆಗ ಸಿದ್ಧಯ್ಯನು ಗಾಬರಿಯಾಗಿ ಮನದಲ್ಲಿ– ಇದು ಏನು ವಿಚಿತ್ರ? ಅಡಿಗೆ ಮಾಡಿಲ್ಲಾ, ೩ ರೊಟ್ಟಿಗಳಿಂದ ಇಷ್ಟು ಜನರು ಹೇಗೆ ತೃಪ್ತರಾದಾರು? ಮಹಾಶ್ರೀಗಳವರು ಏನೂ ವಿಚಾರಮಾಡದೆ ಎಬ್ಬಿಸಿದರಲ್ಲಾ ಎಂದು ಹತ್ತಿರಕ್ಕೆ ಹೋಗಿ ಮೆಲ್ಲಗೆ ಈ ವಿಷಯವಾಗಿ ಹೇಳಿಕೊಂಡನು.

ಎಲಾ ಇರಲಿ ಬಿಡು, ಆ ಭಕ್ಕರಿಗಳನ್ನು ತುಣುಕುಮಾಡಿ ಜೋಳಿಗೆಯಲ್ಲಿ ಹಾಕಿ, ಶೇಂಗಾದ ಬೇಳೆಸಹ ಎಲ್ಲರಿಗೂ ನೀಡೆಂದಪ್ಪಣೆಮಾಡಿದರು. ಅದೇ ಪ್ರಕಾರ ಮುರಿದ ತುಣುಕುಗಳನ್ನು ಒಂದೊಂದೇ ಹಿಡಿ ಜೋಳಿಗೆಯಲ್ಲಿ ಕೈಯಿಟ್ಟು ನೀಡುತ್ತ ಹೋದನು. ೬೦–೭೦ ಜನರಿಗೆ ನೀಡಿದಂತೆಲ್ಲಾ ಜೋಳಿಗೆಯಲ್ಲಿ ಪ್ರಸಾದಬೆಳೆಯುತ್ತ ಹೋಯಿತು. ಕುಳಿತವರು ಮನದೊಳಾಶ್ಚರ್ಯಪಡುತ್ತ ಮಹಾಗುರುಪ್ರಸಾದವನ್ನು ಸ್ವೀಕರಿಸುತ್ತಿದ್ದರು.

ಅದೇ ಸಮಯಕ್ಕೆ ಬೇರೊಂದು ಗ್ರಾಮದ ಗುರುಭಕ್ತನು ಕೇವಲ ಮಡಿಯಿಂದ ತಯಾರಮಾಡಿದ ೫೦ ಸಜ್ಜಿರೊಟ್ಟಿ, ಕಾಯಿ-ಪಲ್ಲೆ, ಬುತ್ತಿ, ಮಾದ್ಲಿ ಇತ್ಯಾದಿ ಪ್ರಸಾದವನ್ನು ಒಂದು ಸೊಬರದ ಎತ್ತಿನಮೇಲೆ ಹೇರಿಕೊಂಡು ಮಹಾಸ್ವಾಮಿಗಳಿಗೂ ಅಲ್ಲಿದ್ದ ಗಣಾಧೀಶ್ವರರಿಗೂ ತೃಪ್ತಿಪಡಿಸಬೇಕೆಂದು ಹೊರಟು, ಮಂಗಳವೇಡೆಗೆ ಬಂದು ಅಲ್ಲಿ ಇಲ್ಲದ್ದು ಕೇಳಿ ಹುಡುಕುತ್ತ ಇದೇ ಸ್ಥಾನಕ್ಕೆ ಬಂದು ಮಹಾಶ್ರೀಗಳವರಿಗೆ ಸಾಷ್ಟಾಂಗಮಾಡಿ ತನ್ನ ಮನದಿಚ್ಛೆಯನ್ನು ಅರಿಕೆಮಾಡಿಕೊಂಡನು.

ಒಳ್ಳೇದಪ್ಪಾ ಗುರುಭಕ್ತನೇ, ಆಗಲಿ ಒಳ್ಳೇ ಸಮಯಕ್ಕೆ ಬಂದಿ. ಆ ಪ್ರಸಾದವನ್ನು ತೆಗೆದು ಈ ಶಿವಭಕ್ತ ಮಂಡಲಿಗೆ ಮೊದಲು ಎಡೆಮಾಡೆಂದು ನೀಡಿಸಿ ತೃಪ್ತಿಪಡಿಸಿದರು.

ಇದನ್ನೆಲ್ಲಾ ನೋಡಿ ಆ ಮಂಡಲಿಯು ಆನಂದಾಶ್ಚರ್ಯಚಕಿತರಾಗಿ ಮಹಾಗುರುವೇ, ನಿನ್ನ ಅಗಾಧ ಮಹಿಮೆಯು ಯಾರಿಗೂ ತಿಳಿಯದು. ಮಹಾ ಪ್ರಸಾದದಿಂದ ನಮ್ಮನ್ನು ಉದ್ಧಾರಮಾಡಿದಿ. ಮಹಾನುಭಾವಾ ನಾವು ಧನ್ಯರಾದೆವೆಂದು ಕೊಂಡಾಡಿದರು.

---

## ಶ್ರೀಗುರು ಸಾರ್ವಭೌಮರ ಸದ್ಬೋಧ

ಸೊಲ್ಲಾಪುರ ಪಟ್ಟಣದಲ್ಲಿ ಪ್ರಸಿದ್ಧವಾದ ಶ್ರೀ ಮಲ್ಲಿಕಾರ್ಜುನ ದೇವಾಲಯದೊಳು ಉಜ್ಜಯಿನೀ ಮಹಾಜಗದ್ಗುರುಗಳವರ ಧರ್ಮೋಪದೇಶ, ಪ್ರವಚನ ಜರಗುತ್ತದೆಂದು ಪ್ರಸಿದ್ಧಪತ್ರಿಕೆಗಳನ್ನು ಹಂಚಿದ ಪ್ರಕಾರ ಆ ದೇವಾಲಯದ ವಿಶಾಲವಾದ

ಪ್ರಾಕಾರದೊಳು ವಿದ್ಯುದ್ದೀಪಾವಳಿಯಿಂದಲೂ, ಚಿತ್ರ-ವಿಚಿತ್ರತರ ರೀತಿಯಿಂದಲೂ ಶೃಂಗರಿಸಲ್ಪಟ್ಟ ಸಭಾಮಂಟಪದ ಸಿಂಹಪೀಠದಲ್ಲಿ ಈ ಮಹಾತ್ಮರು ಮಂಡಿಸಿ ಅನೇಕ ಲೌಕಿಕ, ಪಾರಮಾರ್ಥಿಕ ದೃಷ್ಟಾಂತಗಳಿಂದ ಬಹು ಸ್ವಾರಸ್ಯವಾದ ಭಾಷಣವನ್ನು ಅಪ್ಪಣೆಕೊಡಿಸಿ, ಅಲ್ಲಿ ನೆರೆದ ೪-೫ ಸಹಸ್ರ ಜನಸಮೂಹವನ್ನು ಆನಂದಭರಿತರಾಗುವಂತೆ ಮಾಡುತ್ತಿದ್ದರು. ಈ ಪ್ರಕಾರ ೮-೧೦ ದಿವಸಗಳವರೆಗೂ ಅವಿಛಿನ್ನವಾಗಿ ಮಹಾಭಾಷಣವು ಜರಗಿತು.

ಘೋತ್ರಿ ಗ್ರಾಮದವರು "ವೀರಶೈವ ಧರ್ಮ ಪರಿಷತ್" ನಡೆಸುವೆವೆಂದು ಬಿನ್ನೈಸಲು, ಮಹಾಶ್ರೀಗಳವರು ಹರ್ಷಚಿತ್ತರಾಗಿ ಆ ಪರಿಷತ್ತಿಗೆ ತಮ್ಮ ಶುಭಾಶೀರ್ವಾದ ಪತ್ರವನ್ನು ತಾ. ೨೭-೩-೧೯೩೪ ನೇ ದಿವಸ ಮಂಗಳವೇಢೆ ಮುಕ್ಕಾಮಿನಿಂದ ಲಿಖಿಸಿ ರವಾನಿಸಿದರು. ( ತಾ. ૩૦—೪—೧೯೩೪ ಪಂ। ಪ್ರಭಾದಲ್ಲಿ ಪೂರ್ಣಲೇಖ ಇರುತ್ತದೆ. )

---

## ಸೊಲ್ಲಾಪುರದಿಂದ ಉಜ್ಜಯಿನಿಗೆ ಆಗಮನ

ಈ ಪ್ರಕಾರ ಮಹಾಸವಾರಿಯು ೨-೩ ವರುಷಗಳವರೆಗೂ ಆ ಪ್ರಾಂತದಲ್ಲಿ ಸಂಚರಿಸುತ್ತಿರಲಾಗಿ, ಇತ್ತ ಉಜ್ಜಯಿನೀ ಮಹಾಸಂಸ್ಥಾನಮಠದಲ್ಲಿ ಶಿಲಾಮಂಟಪಗಳ ನಿರ್ಮಾಣಕೆಲಸವು ಕೆಲವು ದಿವಸ ನಿಂತುಬಿಟ್ಟಿತು. ಈ ಮಠದ ಕೆಲಸದಲ್ಲಿ ತತ್ಪರರಾದ ವೇ।। ಕೆಂಪಯ್ಯನವರು ಸನ್ನಿಧಿಗೆ ಹೋಗಿ— ಮಹಾತ್ಮರೇ, ತಾವು ಇಲ್ಲಿಯೇ ಇರುವದರಿಂದ ಚಿರಸ್ಥಾಯಿಯಾದ ಶಿಲಾಮಠದ ಕಾರ್ಯವು ನಿರಾತಂಕವಾಗಿ ಸಾಗಲೊಲ್ಲದು. ಕೈಕೊಂಡ ಕಾರ್ಯಗಳನ್ನು ಪೂರ್ಣಗೊಳಿಸುವದು ಯುಕ್ತವಾದದ್ದು. ಆದುದರಿಂದ ಬೇಗನೆ ಅತ್ತಕಡೆಗೆ ದಯಮಾಡಿಸೋಣಾಗಬೇಕೆಂದು ಅರಿಕೆ ಮಾಡಿಕೊಂಡರು.

ಇವರ ಸೂಚನೆಯು ಯೋಗ್ಯವಾದದ್ದೆಂದು ಆಲೋಚಿಸಿ, ಸೊಲ್ಲಾಪುರದ ಸದ್ಭಕ್ತಮಂಡಲಿಯನ್ನು ಕರೆಯಿಸಿಕೊಂಡು— ಪ್ರಿಯ ಶಿಷ್ಯರೇ, ಮಹಾಸನ್ನಿಧಿಯ ಸೇವೆಯನ್ನು ಭಕ್ತಿ-ವಿಶ್ವಾಸಗಳಿಂದ ಮಾಡಿ ಗುರು ಕೃಪೆಗೆ ಪಾತ್ರರಾದಿರಿ. ಇನ್ನು ಮುಂದೆ ನಂಮ ಮಠಕ್ಕೆ ದಯಮಾಡಿಸುತ್ತೇವೆ. ಆದರೆ ನಮ್ಮ ಸರಕೀಟು ಇಲ್ಲಿಯೇ ನಿಮ್ಮ ಪ್ರಾಂತದಲ್ಲಿ ಸಂಚರಿಸುತ್ತಿರುವುದು. ಇತ್ಯಾದಿ ವಿಷಯ ತಿಳುಹಿಸಿ, ಫಲಾಶೀರ್ವಾದವನ್ನಿತ್ತರು.

ಬಳಿಕ ಕಾಶೀ ಕ್ಷೇತ್ರದಲ್ಲಿ ವಿದ್ಯಾಭ್ಯಾಸಮಾಡಿ ಬಂದು, ಸೇವಾತತ್ಪರರಾಗಿದ್ದ ಮೊಳಕಾಲ್ಮುರ ಗ್ರಾಮದ ಹಿ। ಮು। ಪಟ್ಟಾಧ್ಯಕ್ಷ ಶ್ರೀ ಚಿದ್ಘನ ಶಿವಾಚಾರ್ಯರಿಗೆ ಸರ



ಸೊಲ್ಲಾಪುರದ ಶ್ರೀ ಮಲ್ಲಿಕಾರ್ಜುನ ದೇವಾಲಯದಲ್ಲಿ



ಉ. ಜಗದ್ಗುರುಗಳ ಧರ್ಮೋಪದೇಶ

ಕೀಟ ನಡೆಯಿಸಲು ನಿಶ್ಚಯಿಸಿ, ಆನೆ-ಕುದರೆ ಮುಂತಾದ ಸಾಹಿತ್ಯ ಸ್ವಾಧೀನಪಡಿಸಿ, ತಮ್ಮ ಮೋಟರಕಾರಿನೊಳಗೆ ಮೂರ್ತಮಾಡಿ, ಉಜ್ಜಯಿನೀ ಮಹಾಸಂಸ್ಥಾನಕ್ಕೆ ಆಗಮನಮಾಡಿದರು.

---

## ಶ್ರೀ ಪಂಚಕಲಶ ನಿರ್ಣಯ ಬೋಧ

ಈ ಮಹಾತ್ಮರು ಪ್ರತಿವರ್ಷ ಉಜ್ಜಯಿನೀ ಜಾತ್ರೆಯ ಕಾಲದಲ್ಲಿ ಮಾಹೇಶ್ವರ ಬಾಲಕರಿಗೂ, ಕೆಲವು ಭಕ್ತರಿಗೂ ಶಿವದೀಕ್ಷಾ ಸಂಸ್ಕಾರವನ್ನು ತಮ್ಮ ಸನ್ನಿಧಿಯಲ್ಲಿ ಜೆ. ಎಂ. ಶಂಕರಶಾಸ್ತ್ರಿ, ಟಿ. ಎಂ. ಚೆನ್ನವೀರಶಾಸ್ತ್ರಿ ಇವರುಗಳಿಂದ ಸಕ್ರಮವಾಗಿ ಜರಗಿಸಿ, ಬ್ರಹ್ಮೋಪದೇಶ ( ಅನುಗ್ರಹ ) ವನ್ನು ಕೊಟ್ಟು ಹಿತೋಪದೇಶ ಮಾಡುವ ಪದ್ಧತಿಯಿತ್ತು.

ಹೀಗಿರಲು ಒಂದುಸಾರೆ ಕೆಲವು ಪ್ರದೇಶಗಳಿಂದ ಮಠಾಧಿಕಾರಿಗಳು ಕೂಡಿದರು. ಆಗ ಅವರು— ಮಹಾಗುರುವೇ, ನಂಮಲ್ಲಿ ದೀಕ್ಷಾ, ವಿವಾಹಾದೀ ಕಾರ್ಯಗಳು ಜರಗುವಾಗ್ಗೆ ಪಂಚಾಚಾರ್ಯ ಸಾಕ್ಷಿಭೂತಗಳಾದ ಪಂಚ (೫) ಗುರು ಕಲಶಗಳನ್ನು ಸ್ಥಾಪಿಸಿ ಕಾರ್ಯ ನಡೆಯಿಸುತ್ತಿರಲಾಗಿ, ಈಚೆಗೆ ಕೆಲವರು ಆರು ಕಲಶಗಳನ್ನು ಹೂಡಬೇಕೆಂದು ಕಲಹಮಾಡಿ ಚಳವಳಿಯನ್ನೆಬ್ಬಿಸುತ್ತಿರುವರು. ಇದರಿಂದ ಬಹು ತೊಂದರೆಯಾಗಿದೆ. ಆದುದರಿಂದ ಇದರ ನಿರ್ಣಯವು ಹೇಗಿದೆ, ಅಪ್ಪಣೆಕೊಡಿಸ ಬೇಕೆಂದು ಪ್ರಾರ್ಥನೆಮಾಡಿಕೊಂಡರು.

ಧರ್ಮೋದ್ಧಾರಕರಾದ ಈ ಮಹಾಗುರುವರ್ಯರು ಕೇಳಿ, ವಿನೋದದಿಂದ ಮಠಾಧಿಕಾರಿಗಳೇ, ನೀವು ಕೇಳುವ ಪ್ರಶ್ನೆಯು ಯೋಗ್ಯವಾದದ್ದು. ಇಂತಹ ತೊಡಕುಗಳು ಧರ್ಮಪೀಠಾಧೀಶರಾದ ನಮ್ಮಿಂದಲೇ ನಿವಾರಣೆಯಾಗತಕ್ಕವು. ಈ ಮೊದಲೇ ಇಂತಹ ವಿಷಯಗಳನ್ನು ನಮ್ಮ ಪಂಡಿತರಿಂದ ಪರಿಶೋಧಿಸಿ, ನಿರ್ಣಯ್ಸು ಮಾಡಲ್ಪಟ್ಟಿರುತ್ತವೆ. ಕೇಳಿರಿ— ದೀಕ್ಷಾ, ವಿವಾಹಾದಿ ಕಾರ್ಯಗಳಲ್ಲಿ ಕುಂಭಪೂಜೆ ಯೆಂದು ಪ್ರಸಿದ್ಧವಿದೆ. ಆ ಕುಂಭಪೂಜೆಯ ಕ್ರಮವೇ ಬೇರೆ ಅದೆ. ಆ ಕುಂಭದಲ್ಲಿ ಗಂಗಾದಿ ಸರ್ವ ತೀರ್ಥಗಳನ್ನು ಆಹ್ವಾನಮಾಡಿ, ಆ ಕುಂಭದಲ್ಲಿರುವ ಪವಿತ್ರ ಮಂತ್ರೋದಕವನ್ನೇ ಪಂಚಕಲಶಗಳಲ್ಲಿ ತುಂಬುವದಕ್ಕೂ, ಹಸ್ತ-ಮಸ್ತಕಾದಿ ಪೂಜಾ ಕಾರ್ಯಗಳಿಗೂ ಉಪಯೋಗಿಸಬೇಕೆಂದು ಶಾಸ್ತ್ರದಲ್ಲಿಯೂ ಹಾಗು ರೂಢಿಯಲ್ಲಿಯೂ ಪ್ರಸಿದ್ಧವಿರುತ್ತದೆ.

" ಈಶ್ವರಸ್ಯ ಮುಖಾನ್ಯೇವ ಕಲಶಾನಿ ನ ಸಂಶಯಃ " ಎಂಬಂತೆ ಪರಶಿವನ ಸದ್ಯೋಜಾತಾದಿ ಪಂಚಮುಖಗಳೇ ಪಂಚಕಲಶಗಳಿರುತ್ತವೆ. ಪಂಚಭೂತಗಳಿರು

ತ್ರವೆ. ಪಂಚಗೋತ್ರ-ಸೂತ್ರಗಳುಂಟು. ಪಂಚವಾಯುಗಳುಂಟು. (ಗವ್ಹರ್ನಮೆಂಟ ನವರಿಂದ ಪಂಚಕಲಶಗಳಿಂದ ಮೆರೆಯಲು ಕೇಳಿಕೊಳ್ಳುತ್ತಾರೆ). ಮಾನವ ಶರೀರವು ಪೃಥಿವ್ಯಾದಿ ಪಂಚತತ್ವಗಳಿಂದುತ್ಪನ್ನವಾಗಿದೆ. ಶ್ರೀ ಜಗದ್ಗುರು ಪಂಚಾಚಾರ್ಯರು ಒಂದೊಂದು ತತ್ವಕ್ಕೆ ಅಧಿಪತಿಗಳಾಗಿರುವುದರಿಂದ ಶ್ರೀಮತ್ಪಂಚಾಚಾರ್ಯರ ಸಂಬಂಧವು ನಖ-ಶಿಖಾಂತವಾಗಿ ವ್ಯಾಪಿಸಿರುವುದು. ಆದುದರಿಂದ ವೀರಶೈವರು ದೀಕ್ಷಾ, ವಿವಾಹಾದಿ ಕಾರ್ಯಗಳಲ್ಲಿ ಪಂಚಕಲಶಗಳನ್ನೇ ಸ್ಥಾಪಿಸಿ, ಕಾರ್ಯಗಳನ್ನು ಜರಗಿಸತಕ್ಕದ್ದು. ಹೀಗೆಂದು ಅಪ್ಪಣೆಕೊಡಿಸಿದರು.

ಈ ವಿಷಯದಲ್ಲಿ ಕೆಲವು ಪ್ರಮಾಣ ಗ್ರಂಥಗಳುಂಟು. ಅವುಗಳಲ್ಲಿ ಅತ್ಯುತ್ತಮ ರೀತಿಯಿಂದ ಪ್ರತಿಪಾದಿಸಲ್ಪಟ್ಟವೆ. ನೋಡಿಕೊಳ್ಳಬಹುದು.

## ಪ್ರಮಾಣ ಗ್ರಂಥಗಳ ವಿವರ —

೧. ಸಿದ್ಧಾಂತ ಶಿಖಾಮಣಿ, ೬ ನೇ ಪರಿಛೇದ, ಗುರುಕಾರುಣ್ಯ ಸ್ಥಲದಲ್ಲಿ
೨. ವೀರಶೈವ ಸದಾಚಾರ ಸಂಗ್ರಹ, ೧೨ ನೇ ಪ್ರಕರಣ
೩. ಲಿಂಗಪುರಾಣ, ದೀಕ್ಷಾಪ್ರಕರಣ, (೩೪೬ ನೇ ಪುಟ) ೩೩ ನೇ ಶ್ಲೋಕ
೪. ವೇದಾಂತಸಾರ, ವೀ। ಚಿಂತಾಮಣಿ ಉತ್ತರಖಂಡ ೬ ನೇ ಪ್ರ। ದೀಕ್ಷಾವಿಧಿ
೫. ವೀರಶೈವಾಚಾರಪ್ರದೀಪಿಕಾ ೫ನೇ ಅಧ್ಯಾಯ ದೀ। ಪ್ರ॥ (ಕ್ರಿಯಾಸಾರ)
೬. ಜ್ಯೋತಿರ್ನಾಥ ಕೃತ ಶೈವರತ್ನಾಕರ ೧೦ ನೇ ಅಧ್ಯಾಯ ದೀ। ವಿ।
೭. ವೀರಮಾಹೇಶ್ವರಾಚಾರ ಸಂಗ್ರಹ ೧ನೇ ಭಾಗ ೬ನೇ ಅಧ್ಯಾಯ ದೀ।
೮. ಸೂಕ್ಷ್ಮಾಗಮ, ೫ ನೇ ಪಟಲದಲ್ಲಿ
೯. ಶಿವಮಹಾಪುರಾಣ ವಾ। ಸಂಹಿತಾ ಉ।ಖಂಡ ೧೭ ಅ। ೧೬ ಶ್ಲೋಕ
೧೦. ಗಣಭಾಷ್ಯ ರತ್ನಮಾಲಾ, ದೀ। ವಿಧಾನ ಸ್ಥಲದಲ್ಲಿ
೧೧. ಅನಾದಿ ತೋಂಟದಸಿದ್ದೇಶ್ವರ ವಚನ, ಲಿಂಗಧಾರಣ ಸ್ಥಲದ ೮ ನೇ ವ।
೧೨. ಅಖಂಡೇಶ್ವರ ವಚನ, ಶರಣಸ್ಥಲದ ೧೮ ನೇ ವಚನ
೧೩. ವಿವೇಕ ಚಿಂತಾಮಣಿ, ೨ ನೇ ಪ್ರಕರಣ ದೀ। ಕ್ರಮ
೧೪. ವೀರಶೈವಾಮೃತ ಪುರಾಣದಲ್ಲಿ ೭ ನೇ ಕಾಂಡ, ೬ ನೇ ಸಂಧಿ, ಪಂಚ ಕಲಶ ಪ್ರತಿಷ್ಠಾಕ್ರಮ, ೭ ನೇ ಕಾಂಡದಲ್ಲಿ ೮, ೯, ೧೨ ಸಂಧಿಗಳಲ್ಲಿ
೧೫. ಬಸವಚಾರಿತ್ರ ೮ ನೇ ಅಧ್ಯಾಯ ೫೪ ನೇ ಪದ್ಯ, ಇತ್ಯಾದಿ



## ಮಹಾ ಶ್ರೀಗಳವರಿಗೆ ಜಾಡ್ಯಾರಂಭವಾದುದು.

ಜಗಲೂರು ವೀರಶೈವ ಮಂಡಲಿಯವರು ಈ ಪುಣ್ಯಾತ್ಮರಾದ ಶಿವಯೋಗಿ ಪುಂಗವರ ಸೇವೆಯನ್ನು ಮತ್ತೊಮ್ಮೆ ಮಾಡಿ ಪುನೀತರಾಗಬೇಕೆಂಬ ಅಭಿಲಾಷೆಯಿಂದ ಸನ್ನಿಧಿಗೆ ಹೋಗಿ ಬಿನ್ನೈಸಿಕೊಂಡು ತಾರೀಖು ೩—೧೧—೩೫ ನೇ ಇಸ್ವಿ ದಿವಸ ಆಂದೋಲಿಕ ಮಹೋತ್ಸವವನ್ನು ಅಸಾಧಾರಣ ವೈಭವದಿಂದ ನೆರವೇರಿಸಿ ತಮ್ಮ ಸೇವಾದಿಗಳನ್ನು ಅರ್ಪಣಮಾಡಿದರು.

ಮಹಾ ಸವಾರಿಯು ಕೆಲವುದಿವಸಾನಂತರ ಮಿತಪರಿವಾರದೊಡನೆ ಗ್ರಾಮಾನು ಗ್ರಾಮಗಳಲ್ಲಿ ಸಂಚರಿಸುತ್ತ ಕೂನಬೇವು ಗ್ರಾಮಕ್ಕೆ ಮುಕ್ಕಾಂ ಮಾಡಿರಲು ದೇಹದಲ್ಲಿ ಜ್ವರೋತ್ಪನ್ನವಾಗಿ ಕಿಂಚಿಲ್ ಆಯಾಸವಾಯಿತು. ಆದರಲ್ಲೂ ಸ್ನಾನ ಶಿವಾರ್ಚನೆ ನಡೆಯಿಸಲು ಜಾಡ್ಯವು ಪ್ರಬಲವಾಯಿತು. ಅಲ್ಲಿಂದಾ ತುರವನೂರು ಗ್ರಾಮಕ್ಕೆ ಆಗಮನ ಮಾಡಿದರು.

ಆ ಊರಲ್ಲಿ ೧—೨ ದಿವಸದ ನಂತರ ಕಾಯಿಲೆ ಅಧಿಕವಾಗಿ ಮಾತುಗಳಾಡು ವದು ಬಂದಾಯಿತು. ಕೂಡಲೇ ಭಯಗ್ರಸ್ತರಾಗಿ ಮುಖ್ಯ ಮುಖ್ಯ ನಗರ ಪ್ರಮುಖ ರಿಗೆ ತಾರ ( ಟ್ರೆಲಿಗ್ರಾಂ ) ಮೂಲಕ ತಿಳುಹಿಸಿದರು. ಈ ಚಿಂತಾಜನಕ ವಾರ್ತೆಯು ಸರ್ವತ್ರವ್ಯಾಪಕವಾಯಿತು.

ಈ ಮಹಾತ್ಮರಲ್ಲಿ ಧೃಡವಾದ ಭಕ್ತಿಯುಳ್ಳ ಪ್ರಸಿದ್ಧ ಶ್ರೀಮಂತರಾದ ಹೊಳಲ ಗುಂದಿ ಪಾಟೇಲ ಬಸನಗೌಡರು ಬಳ್ಳಾರಿಯಿಂದ ವೈದ್ಯಪಂಡಿತರನ್ನೊಡಗೂಡಿ ಬಹು ಶೀಘ್ರದಿಂದ ಸನ್ನಿಧಿಗೆ ಬಂದು ಸೇವಾಚಿಕಿತ್ಸಾದಿಗಳನ್ನು ನಡೆಯಿಸಿದರು. ಹಾವೇರಿ ಮುಕ್ಕಾಮಿನಿಂದ ಶ್ರೀ ರಂಭಾಪುರೀ ಜಗದ್ಗುರುಗಳೂ ಬನ್ನಿಕಲ್ಲು ಮುಕ್ಕಾಮಿನಿಂದ ಶ್ರೀ ಕೇದಾರ ಚರ. ಜಗದ್ಗುರುಗಳೂ ಮೈಸೂರಿಂದ ವೇ. ಕಾಶೀನಾಥ ಶಾಸ್ತ್ರಿಗಳೂ ಇನ್ನುಳಿದ ಸಾಹುಕಾರರು, ಶೆಟ್ಟರು ಮೊದಲಾದವರು ಬಂದು ನಾನಾವಿಧದಿಂದ ಔಷಧೋಪಚಾರಗಳನ್ನು ಮಾಡಿಸುತ್ತಿದ್ದರು. ಆ ತುರವನೂರು ಗ್ರಾಮವು ೫-೬ ನೂರು ಜನರಿಂದ ಕೂಡಿಕೊಂಡಿತು. ಕೆಲವರು ೧—೨ ದಿವಸ ಇದ್ದು ಚಿಂತಾಕ್ರಾಂತ ರಾಗಿ ಉಸುರ್ಗರೆಯುತ್ತ ಪರಮಾತ್ಮಾ ನಮ್ಮ ಸಿದ್ಧಲಿಂಗ ಗುರುದೇವನಿಗೆ ಬೇಗನೆ ಕಲ್ಯಾಣವನ್ನುಮಾಡು ಹೀಗೆಂದು ವೆಸನದಿಂದ ತೆರಳಿದರು. ಎಲ್ಲಿ ನೋಡಿದರೂ ಮುಖ ಖಿನ್ನಮಾಡಿಕೊಂಡು ಅನ್ನ-ನೀರು ತೊರೆದು ಸುಮ್ಮನೆ ಕುಳಿತವರೇ ತೋರುತ್ತಿದ್ದರು. ೪—೫ ಜನ ನೇಟಿವ್ ವೈದ್ಯ ಪಂಡಿತರೂ ೩—೪ ಜನ ದೊಡ್ಡ ಡಾಕ್ಟರವರೂ ಘಳಿಗಿಗೊಮ್ಮೆ ತಮ್ಮ ಬುದ್ಧಿ-ಶಕ್ತಿಸಾಹಸಗಳಿಂದ ಚಿಕಿತ್ಸೆಗಳ ಮಾಡುತ್ತಿದ್ದರು. ಬಳಿಕ ಡಾಕ್ಟರವರು ನಿರಾಶಾಜನಕ ಮಾತುಗಳಿಂದ ಇದು ಅಸಾಧ್ಯತೋರುತ್ತದೆ. ಮುಂದಿನ ವೆವಸ್ಥೆಮಾಡಿಕೊಳ್ಳಿರೆಂದು ಹೇಳಿದರು.

ಈ ಮಹಾನುಭಾವರ ಹತ್ತಿರಪಲ್ಲಿ ಈ ದಿವ್ಯ ತೇಜೋಮೂರ್ತಿಗೆ ಜನ್ಮವನ್ನಿತ್ತು ಗರ್ಭದಲ್ಲಿ ಪೋಷಣೆಮಾಡಿದ ಮಾತೋಶ್ರೀ ಗುರುಸಿದ್ಧಮ್ಮನವರೂ ಅಗ್ರಜರಾದ ವೇ|| ಮರುಳಸಿದ್ಧಪ್ಪಯ್ಯನವರೂ ಆನೆ ಶಿದ್ಧಾಪುರದ ಪಟ್ಟದಸ್ವಾಮಿಗಳೂ ಮುಂತಾದ ಬಂಧುವರ್ಗವು ಅತ್ಯಂತ ಶುಶ್ರೂಷೆಮಾಡುತ್ತಿರಲು, ಡಾಕ್ಟರವರು ಹೇಳಿದ ತಕ್ಷಣವೇ ಮೋಟರಲಾರಿಯಲ್ಲಿ ಮಹಾ ಶ್ರೀಗಳವರನ್ನು ಪುಷ್ಪಮಾಲೆಯೋಪಾದಿಯಲ್ಲಿ ಮಲಗಿಸಿಕೊಂಡು ಹೊರಟು ಉಜ್ಜಯಿನೀ ಮಹಾ ಸಂಸ್ಥಾನಮಠಕ್ಕೆ ಸರ್ವರೂ ಬಂದರು

## ಮಹಾ ಶ್ರೀಗಳವರು ಪರಂಧಾಮವನ್ನೈದಿದರು.

ಇಷ್ಟರಲ್ಲಿಯೇ ಜಗದ್ಗುಗಳವರ ಅಂತ್ಯದರ್ಶನಾಪೇಕ್ಷೆಯಿಂದ ಅಗಣಿತ ಜನ ಸಂದೋಹವು ಉಜ್ಜಯಿನಿಗೆ ಬಂದು ತುಂಬಿ ಕಿಕ್ಕಿರಿದುಹೋಗಿತ್ತು; ಮಹಾಸನ್ನಿಧಿಗೆ ಆಯಾಸವಾಗುವದೆಂದು ಎಷ್ಟುಪರಿಯಿಂದ ಹೇಳಿದರೂ ಭಯಪಡಿಸಿದರೂ ಜನರು ಕೇಳದೆ ಒಳನುಗ್ಗಿ ಬಂದು ಗುರುಸಾರ್ವಭೌಮರ ದರ್ಶನಮಾಡಿಕೊಳ್ಳುತ್ತಿದ್ದರು.

ನಾನಾರೀತಿಯಿಂದ ಉಪಚಾರಗಳು ನಡೆದಿರಲು, ಶ್ರೀ ಶಾಲಿವಾಹನ ಶಕೆ ೧೮೫೭ ನೇ ಯುವನಾಮ ಸಂವತ್ಸರದ ಪುಷ್ಯ ಬಹುಳ ೪ ಭಾನುವಾರ ತಾರೀಖು ೧೨-೧-೧೯೩೬ ನೇ ಇಸ್ವಿ ದಿವಸ ಉದಯಕ್ಕೆ ಮಹಾಜ್ಯೋತಿಯು ಪರಶಿವನಲ್ಲಿ ಸಮರಸವಾಯಿತು.

---

## ಮಹಾ ಶ್ರೀಗಳವರ ನಿರ್ಯಾಣ ಮಹೋತ್ಸವವು.

ಆ ತಕ್ಷಣವೇ ಅಲ್ಲಿ ನೆರೆದ ಸಹಸ್ರಾರು ಜನರು ನಾನಾವಿಧದಿಂದ ದುಃಖ ಮಾಡುತ್ತಿದ್ದರು. ಎಲ್ಲಿನೋಡಿದರೂ ಹಾಹಾಕಾರವೇ ತುಂಬಿತು; ಸರ್ವರ ನೇತ್ರಗಳಲ್ಲಿ ಅಶ್ರುಧಾರೆಗಳು ಹರಿಯುತ್ತಿದ್ದವು. ಆ ಕೂಡಲೇ ಕೊಟ್ಟೂರಿಂದ ಟೆಲಿಗ್ರಾಂ ಮೂಲಕ ಕಾಶೀ, ಕೇದಾರ, ಶ್ರೀಶೈಲ, ಸೊಲ್ಲಾಪುರ, ಬಳ್ಳಾರಿ ಮುಂತಾದ ಮುಖ್ಯ ಸ್ಥಳಗಳಿಗೆ ವಾರ್ತೆಯು ಹೋಯಿತು. ಅನೇಕ ಜನ ಗುರುಭಕ್ತಿಪರಾಯಣರು ದುಃಖಾನ್ವಿತರಾಗಿ ಉಜ್ಜಯಿನಿಗೆ ಬಂದರು. ಕೆಲವರು ಈ ಮಹಾತ್ಮರ ನಾನಾವಿಧ ಸದ್ಗುಣಗಾನಮಾಡುತ್ತಿದ್ದರು.

ಆ ದಿವ್ಯಮೂರ್ತಿಯ ಕಳೇಬರವನ್ನು ಪೂಜಿಸಿ, ಕಾಷಾಯಾಂಬರ ರುದ್ರಾಕ್ಷಾದಿಗಳಿಂದಲಂಕರಿಸಿ, ಪುಷ್ಪಮಾಲೆಗಳ ಧಾರಣಮಾಡಿ ಮೂರ್ತಗೊಳಿಸಿದರು. ಕಹಳೆ ಕರ್ನಿ, ನಗಾರಿ ಮೊದಲಾದ ವಾದ್ಯಗಳು ಭೋರ್ಗರೆಯುತ್ತಿದ್ದವು. ಅನೇಕ ಜನ ಸುಮಂಗಲೆಯರು ಆರತಿಗಳನ್ನು ಬೆಳಗಿದರು. ಹಾಗು ಇತರ ಜನರು ಸಂತಾಪ

ಗೊಳ್ಳುತ್ತಾ ಕಾಯಿ, ಕರ್ಪೂರ, ಭಸ್ಮ, ಘುಟಿಕಾ, ಪುಷ್ಪಮಾಲೆ, ರುದ್ರಾಕ್ಷಮಾಲೆ ಮುಂತಾದವುಗಳನ್ನು ತಂದು ಮಹಾತ್ಮರಿಗೆ ಧಾರಣಮಾಡಿದರು.

ತರುವಾಯ ಶೃಂಗರಿಸಲ್ಪಟ್ಟ ಪಲ್ಲಕ್ಕಿಯೊಳು ಮೂರ್ತಗೊಳಿಸಿ, ಅನೇಕವಾದ್ಯಗಳಿಂದಲೂ, ಭಜನೆಯಿಂದಲೂ ಆ ಗ್ರಾಮದ ಮುಖ್ಯ ಬೀದಿಗಳಲ್ಲಿ ಮಹೋತ್ಸವದಿಂದ ಬಂದು ಸಂಸ್ಥಾನಮಠದ ಆವರಣದೊಳು ಅಗ್ನಿದಿಕ್ಕಿನ ಭಾಗದಲ್ಲಿ ವಿಧ್ಯುಕ್ತ ಪ್ರಕಾರ ನಿರ್ಮಾಣಮಾಡಲ್ಪಟ್ಟ ಸಮಾಧಿ ಮಂಟಪದೊಳು ಶ್ರೀ ಜಗದ್ಗುರುಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ಪರಮಪೂಜ್ಯ ದಿವ್ಯಕಳೇಬರವು ಪೂಜೆಗೊಂಡು ಸಮಸ್ತ ಜನರು ಜಯ ಜಯ ಧ್ವನಿಯಿಂದ ಸಹಸ್ರಾವಧಿ ಭಸ್ಮಘುಟಿಕೆಗಳ ರಾಶಿಯಲ್ಲಿ ಅದೃಶ್ಯ ( ಸ್ಥಾಪನ ) ವಾಯಿತು. ಮಂಗಲಮಾಡಿ ಸರ್ವರೂ ವೆಸನದಿಂದ ಸ್ವಗ್ರಾಮುಗಳಿಗೆ ತೆರಳಿದರು.

॥ ಸ್ತೋತ್ರ ॥

ಶಿಷ್ಯಾಂಧಕಾರ ಪಟಲೀ ಹರಣೈಕಲೋಲಂ ।
ಶ್ರೀ ವೀರಶೈವಮತದುಗ್ಧ ಮಹಾಬ್ಧಿ ಸೋಮಂ ॥
ಧ್ಯಾಯಾಮಿ ಭೂಮಿಪಲಲಾಮನತಾಂಘ್ರಿಪದ್ಮಂ ।
ಶ್ರೀ ಸಿದ್ಧಲಿಂಗ ಗುರುಮುಜ್ಜಯಿನೀ ನಿವಾಸಂ ॥೧॥

ಶ್ರೀಮದ್ದೇಶಿಕ ಪುಂಗವಂ ಭವಹರಂ ಕಾಮಾದಿವಿಧ್ವಂಸಕಂ ।
ಸೀಮಾತೀತ ತಪಃಪ್ರಭಾವವಿಶದಂ ಗೌರೀಶ ಪ್ರೀತ್ಯಾಸ್ಪದಂ ॥
ಸೋಮಾರಾಧನ ತತ್ಪರಂ ಗುರುವರಂ ಮೋಹಾಂಧಸೂರ್ಯಪ್ರಭಂ।
ಪ್ರೇಮಾಗಾರಸುಭಕ್ತಕಲ್ಪತರುನೀಂ ಶ್ರೀ ಸಿದ್ಧಲಿಂಗೇಶ್ವರಾ ॥೨॥

॥ ಕಂದ ॥
ಕಾಮಿತ ಫಲವೀಯುವ ಚಿಂ ।
ತಾಮಣಿನೀನೆಂದು ನಂಬಿ ಭಜಿಪರಿಗನಿಶಂ ॥
ಪ್ರೇಮದಿ ಮಂಗಳವೀಯುವೆ ।
ನೇಮದಿ ನುತಿಪರ್ಗದಾವುದಿಳೆಯೊಳಸಾಧ್ಯಂ ॥೩॥

ಎಂಬಲ್ಲಿಗೆ ಹಿರೇಹಡಗಲಿ ಪುರಾಣಿಕ ಮಠಾಧಿಪ ಶ್ರೀ ಚೆನ್ನವೀರಪಂಡಿತ ವಂಶಾಬ್ಧಿ
ರಾಕಾಶಶಾಂಕ ಸಮಾನ ವೇ॥ ವಿರೂಪಾಕ್ಷಶಾಸ್ತ್ರಿಯಿಂದ ವಿರಚಿತವಾದ
ಜಗದ್ಗುರು ಶ್ರೀ ಸಿದ್ಧಲಿಂಗೇಶ ವಿಜಯದೊಳು
೫ ನೇ ಅಧ್ಯಾಯ ಸಮಾಪ್ತವಾದುದು.



# ಸಂಕೀರ್ಣ ಪ್ರಕರಣ

## ದುಃಖಪ್ರದರ್ಶನ ಸಭೆಗಳೂ ಗುಣಗಾನವೂ ಪ್ರಸಂಶೆಗಳೂ

ಶ್ರೀಮತ್ಪೂಜ್ಯಪಾದರಾದ ಉಜ್ಜಯಿನೀ ಸದ್ಧರ್ಮಪೀಠದ ಶ್ರೀ ಜಗದ್ಗುರು ಸಾರ್ವಭೌಮರವರು ಪರಂಧಾಮವನ್ನೈದಿದರೆಂಬ ಶೋಕವಾರ್ತೆಯು ಕೋಲ್ಮಿಂಚಿನಂತೆ ಸ್ವಲ್ಪಾವಧಿಯಲ್ಲಿಯೇ ಜಗದ್ವ್ಯಾಪಕವಾಯಿತು. ಮುಂಬಯಿ, ಮದ್ರಾಸ, ಮೈಸೂರು, ನೈಜಾಂ ಪ್ರಾಂತಗಳಲ್ಲಿರುವ ರಾಜಧಾನಿ, ಪಟ್ಟಣ, ಶಹರ, ಹಳ್ಳಿ-ಪಳ್ಳಿಗಳಲ್ಲಿಯೂ ಗುರುಭಕ್ತಿಪರಾಯಣರಾದ ಅನೇಕ ಜನರು ಚಿಂತಾಕ್ರಾಂತರಾಗಿ— ಅಹಾ! ಪರಮತಪೋನಿಧಿಗಳಾದ ಶ್ರೀ ಜ॥ ಸಿದ್ಧಲಿಂಗಮಹಾಸ್ವಾಮಿಗಳವರನ್ನು ಕಳೆದುಕೊಂಡು ಹತಭಾಗ್ಯರಾದೆವು! ಅಂತಹ ಸದ್ಗುರುವನ್ನೆಂದಿಗೆ ಕಾಣುವೆವೋ? ಎಂದು ವಿಧವಿಧದಿಂದ ಅವರ ಸ್ಮರಣೆಮಾಡಹತ್ತಿದರು.

ಇದಲ್ಲದೆ ದೇಶಮಧ್ಯದಲ್ಲಿ ಈ ಪರಮಪೂಜ್ಯ ಗುರುಗಳಿಂದ ಶಿವದೀಕ್ಷಾ ಸಂಸ್ಕಾರವನ್ನು ಹೊಂದಿ ಗುರುಪುತ್ರರಾದ ಬಹುಜನ ಸ್ತ್ರೀ-ಪುರುಷರಂತೂ ತಂದೆಯನ್ನು ಕಳೆದುಕೊಂಡ ಶಿಸುಗಳಂತೆ ೨-೩ ದಿವಸಗಳವರೆಗೂ ರೋದನಮಾಡುತ್ತ — ಹಾ ಗುರುನಾಥಾ, ಮಹಾತ್ಮಾ, ಸಿದ್ಧಲಿಂಗೇಶಾ! ಈ ದೀನಪ್ರಾಣಿಗಳನ್ನಿಲ್ಲಿ ಬಿಟ್ಟು ತೆರಳಿದೆಯಾ! ಮತ್ತೊಮ್ಮೆ ನಿನ್ನ ದರ್ಶನ, ಪಾದಪೂಜಾ, ತೀರ್ಥ-ಪ್ರಸಾದಗಳು ದೊರೆಯಲಿಲ್ಲವಲ್ಲಾ! ನೀನಗಲುವದು ನಮಗೆ ತಿಳಿಯದಾಯಿತು; ಮಹಾನುಭಾವ! ನಿನ್ನಂತಹ ಸದ್ಗುರುವನ್ನು ಇನ್ನೆಂದು ಕಾಣುವೆವು! ನಮಗೆ ಸದ್ಬೋಧವನ್ನು ಮಾಡಿ ಆನಂದಪಡಿಸುವರಾರಿರುವರು? ದೇವಾ! ಪರದೇಶಿಗಳನ್ನು ಮಾಡಿ ದಯಮಾಡಿದೆಯಾ! ಈ ಪ್ರಕಾರ ನಾನಾರೀತಿಯಿಂದ ಗುಣಗಾನಮಾಡಿ ನಿಟ್ಟುಸುರು ಬಿಟ್ಟು ವ್ಯಾಕುಲಚಿತ್ತರಾದರು.

ಇತ್ತ ಅನೇಕ ನಗರಗಳಲ್ಲಿಯೂ ಗ್ರಾಮಗಳಲ್ಲಿಯೂ ದುಃಖಸಭೆಗಳನ್ನು ನೆರೆಯಿಸಿ ತಮ್ಮ ತಮ್ಮ ಹೃದಯದಲ್ಲಿರುವ ದುಃಖೋದ್ಗಾರಗಳನ್ನು ಭಾಷಣಮಾಡಿದರು. ಕೆಲವರು ಕವಿತಾರೂಪದಿಂದ ವ್ಯಕ್ತಪಡಿಸಿದರು. ಮತ್ತು ಜಗತ್ಪ್ರಸಿದ್ಧವಾಗಿ ಮೈಸೂರಿನಲ್ಲಿ ಹೊರಡುವ "ಪಂಚಾಚಾರ್ಯಪ್ರಭಾ" ಪತ್ರಿಕೆಯಲ್ಲಿ ಲೇಖಗಳನ್ನು ಪ್ರಕಟಿಸಿದರು (ತಾ. ೨೭-೧-೧೯೩೭).

೧. ಮಹಾರಾಷ್ಟ್ರ ಪ್ರಾಂತದಲ್ಲಿ ಪ್ರಸಿದ್ಧವಾದ ಸೊಲ್ಲಾಪುರ ಪಟ್ಟಣದಲ್ಲಿ ಅಲ್ಲಲ್ಲಿ ದುಃಖಸಭೆಗಳಾದವು. (೧) ಶ್ರೀ ಮಲ್ಲಿಕಾರ್ಜುನ ದೇವಾಲಯದಲ್ಲಿ ವೀರ ಶೈವ ಪ್ರಮುಖರ ಸಭೆಯು. (೨) ಶ್ರೀಮಜ್ಜಗದ್ಗುರು ರೇಣುಕಾಚಾರ್ಯ ಸಂಘ ದಲ್ಲಿ ತರುಣರ ಸಭೆಯು. (೩) ವೀರಶೈವ ಸ್ತ್ರೀಸಮಾಜದಲ್ಲಿ ಮಹಿಳಾಸಭೆಯೂ ಈ ಪ್ರಕಾರ ಅನೇಕ ವಿಧವಾದ ಭಾಷಣಗಳೂ ಠರಾವುಗಳೂ ನಡೆದವು.

## ಗುರುನಾಥಾ ! ನಿನಗಿದು ವಿಹಿತವೇ ?

ಅಜ್ಞಾನಕತ್ತಲೆಯಲ್ಲಿ ಮುಕ್ತಿಮಾರ್ಗವನ್ನು ಕಾಣದೆ ಬಳಲುವ ಅಜ್ಞರನ್ನು ಬಿಟ್ಟು ನೀನೊರ್ವನೇ ಜ್ಞಾನಪಥದಿಂದ ದಿವ್ಯ ಚಿನ್ಮೂರ್ತಿಯಲ್ಲಿ ಅಡಗಿ ನಿತ್ಯಾನಂದ ಹೊಂದುವುದು ಗುರುನಾಥಾ ನಿನಗಿದು ವಿಹಿತವೇ ?

ಮಾಯಾಂಧಮಾನವರಿಗೆ ಸದುಪದೇಶರೂಪದಂಡವನ್ನು ಹಸ್ತದಲ್ಲಿತ್ತು, ತದ್ವಾರಾ ನಿಶ್ಚಿತಸ್ಥಲವನ್ನು ಹುಡುಕಲಿಕ್ಕೆ ಹಚ್ಚಿ ಈ ಕುರುಡರು (ಮಾಯಾಂಧರು) ಹುಡುಕುವುದನ್ನು ನೋಡಿ ಆನಂದಪಡುವುದಕ್ಕಿಂತಲೂ ಪೂರ್ವದಲ್ಲಿಯೇ ನೀನೇ ಅಡಗುವದು ಗುರುನಾಥಾ ? ನಿನಗಿದು ವಿಹಿತವೇ ?

ಇನ್ನಾರು ನಮಗೆ ಈ ಸನ್ಮಾರ್ಗವನ್ನು ತೋರಿಸುವವರು ! ಗುರುನಾಥಾ ! ಯಾರನ್ನಾದರೂ ನಿಯಮಿಸಿರುವಿಯಾ ! ಅವರು ನಿನ್ನಂತೆ ಕಾಳಜಿಯಿಂದ ಮಾರ್ಗ ತೋರುವರೋ ? ಛೇ ! ಶಕ್ಯವೇ ಇಲ್ಲ. ಗುರುನಾಥಾ ನೀನು ಏಕಾಏಕಿಯೇ ಹೀಗೆ ಪ್ರಶಾಂತನಾದ ಕಾರಣವೇನು ? ಈ ಸಂಸಾರದಲ್ಲಿದ್ದ ಜನರು ಮಾಯಾವಿಗಳೆಂದು ಮಾಯವಾದೆಯಾ ? ಇವರು ಪಾಪಿಷ್ಟರೆಂದು ಪಾರಾದೆಯಾ ? ನಿಷ್ಕರುಣಿಗಳೆಂದು ನಿರಾಕರಿಸಿದೆಯಾ ? ದುರ್ಜನರೆಂದು ದೂರಾದೆಯಾ ? ಕಪಟಿಗಳೆಂದು ಕಾಣದಾದೆಯಾ ? ಭಕ್ತಿಹೀನರೆಂದು ಬೈಲಾದೆಯಾ ? ಅನಾಚಾರಿಗಳೆಂದು ಅದೃಶ್ಯನಾದೆಯಾ ? ಗರ್ವಿಗಳೆಂದು ಗಮನಮಾಡಿದೆಯಾ ? ಹೇಳು ಹೇಳು ಸದ್ಗುರುನಾಥಾ ? ಹೇಳು. ಏಕೆ ಮಾತಾಡುವದಿಲ್ಲ ? ಗುರುನಾಥಾ ನಿನಗಿದು ವಿಹಿತವೇ ?

ಶ್ರೀ ಪಟ್ಟಾಧ್ಯಕ್ಷ ಬೃಹನ್ಮಠ, ಹೋಟಗಿ.

೨. ಬಳ್ಳಾರಿ, ಕೊಟ್ಟೂರು, ಹರಪನಹಳ್ಳಿ, ಹುವ್ವಿನಹಡಗಲಿ ಮುಂತಾದ ಗ್ರಾಮಗಳಲ್ಲಿಯೂ ದುಃಖಸಭೆಗಳಾದವು.

೩. ಶ್ರೀ ಕಾಶೀ ಕ್ಷೇತ್ರದೊಳು ಶ್ರೀ ಜಗದ್ಗುರು ವಿಶ್ವಾರಾಧ್ಯರ ಮಹಾಸಂಸ್ಥಾನಮಠದಲ್ಲಿ ಸಾರ್ವಜನಿಕ ದುಃಖಸಾಗರ ಸಭೆಯು ತಾ. ೧೭—೧—೩೬ ನೇ ದಿವಸ ಸಮ್ಮಿಳಿತವಾಯಿತು. ಸಭೆಯಲ್ಲಿ ಗುರುಕುಲ ವಿದ್ಯಾರ್ಥಿಮಂಡಲವು ಅತೀವ ವ್ಯಸನಾಕ್ರಾಂತರಾಗಿ ಮಹಿಮರಾದ ಆ ಜ॥ ಸಿದ್ಧಲಿಂಗಮಹಾಸ್ವಾಮಿಗಳವರ ಮಹ

ತ್ಯಾತಿಶಯಂಗಳನ್ನು ವಿಸ್ತರಿಸುತ್ತ ಅಖಿಲ ವೀರಶೈವ ಸಮೂಹವನ್ನಗಲುವಿಕೆಯಿಂದ ಉಂಟಾದ ದುಃಖವನ್ನು ವ್ಯಕ್ತಪಡಿಸಿದರು.

ತದನಂತರ ಆ ಮಹಾತ್ಮರ ಕೃಪಾಪಾತ್ರರಾದ ಮುದೇನೂರು ಬೃ| ಮ| ಶ್ರೀ ಷ| ಶ್ರೀ ವಾಗೀಶ ಶಿವಾಚಾರ್ಯರು ಭಾಷಣಮಾಡುತ್ತಲೇ ಸಂತಾಪದಿಂದ ಕಣ್ಣೀರು ಸುರಿಸುತ್ತ ತಮ್ಮಿಂದ ರಚಿತವಾದ "ಕಣ್ಣೀರು" ಎಂಬ ಕವಿತೆಯನ್ನು ಓದಿದರು. ಆ ಕವಿತೆಯನ್ನು ಕೇಳುತ್ತಲೇ ಸಭಿಕರೆಲ್ಲರೂ ತುಂಬಾ ಶೋಕಗ್ರಸ್ತರಾಗಿ ದುಃಖಾಶ್ರುಗಳನ್ನು ಸುರಿಸಿದರು.

"ಕಣ್ಣೀರು" ಎಂಬ ಪದ್ಯಗಳು —

ಹಾ ಯೋಗಿಯೇ ನೀನು ನಮ್ಮನೆಲ್ಲರನೀಗ ।
ಕಾಯುವುದು ಬಿಟ್ಟು ಪೋಗುವುದುಚಿತವೇ ॥
ರಾಯಗುರು ನೀನಿಂತು ನಿಷ್ಕರುಣಿಯಾಗಿ ಗಡ ।
ಮಾಯವಾಗಿಹ ಕತವದೇನು ಪೇಳು ॥೧॥

ಗುರುವೆ ನೀನಿರುವಾಗ ಪೊಗಳಲಿಲ್ಲವು ನಿನ್ನ ।
ನರನೆ ನಾನೋರ್ವನೆ ದುಷ್ಟಕವಿಯು ॥
ಪರಸೇವೆಯನು ಮಾಡಿ ಗುರುಸೇವೆಯನು ಮಾಡ।
ದಿರುವ ನಾನೋರ್ವನೇ ಪಾಪಿನರನು ॥೨॥

ಗುರುವೆ ನೀ ದಾರುಕನೆ ಸರಿ ನಿನ್ನ ಪಾದಗಳು ।
ಮೆರೆದ ಭೂಮಿಯೆ ಪುಣ್ಯಮಯವಾದುದು ॥
ಕರೆದು ನೀನಾರನುಡಿಸಿದೆಯವರ ಪಾಪಗಳು ।
ತೊರೆದೋಡಿ ಇಷ್ಟಾರ್ಥ ಸಿದ್ಧಿಸಿಹುದು ॥೩॥

ಪಂಚಗುರುಗಳು ಕಣ್ಗೆ ಬೇರೆಯಾಗಿದ್ದರೂ ।
ಸಂಚಯವು ನೀನೋರ್ವನವರಿಗೆಲ್ಲಾ ॥
ಪಂಚಗುರುರೂಪನೀನೋರ್ವನಾಗಿದ್ದು ಪ್ರ ।
ಪಂಚವನು ತೊಲಗಿದುದು ಯೋಗ್ಯವಹುದೇ ? ॥೪॥

ಉಜ್ಜಯಿನಿಗೀಶನೇ ಸಿದ್ಧಲಿಂಗೇಶನೇ ।
ಸಜ್ಜನೋದ್ಧಾರಿ ನೀನೆತ್ತ ಪೋದೆ ॥
ಹೆಜ್ಜೆ ಹೆಜ್ಜೆಗು ಸಿದ್ಧಲಿಂಗನಾಮವ ನೆನೆವ ।
ತ್ರಿಜ್ಜನವ ತೊರೆದು ನೀನೆತ್ತ ಪೋದೆ ? ॥೫॥

---

## ದುಃಖಪ್ರದರ್ಶನ ಸಭಾ.

ಹಿರೇಹಡಗಲಿಯಲ್ಲಿ ಶ್ರೀ ಪಂಚಾಚಾರ್ಯ ಭಜನ ಸಂಘದ ಮಂದಿರದೊಳು ಶ್ರೀ ಹಾಲಸ್ವಾಮಿಗಳು ಶ. ಮ. ಕೊಟ್ರಯ್ಯನವರು, ಮಾ. ಮ. ಶಿವರುದ್ರಗೌಡ್ರು, ಕೌಲೂರು ತೋಟಯ್ಯನವರು, ಪು. ಮ. ಪರಮೇಶ್ವರಯ್ಯನವರು, ಎಸ್. ಎಮ್. ಮಲ್ಲಪ್ಪ, ಸಾಮಂತ್ರಿ ಕೊಟ್ರಪ್ಪ, ಪಟ್ಟೇದ ಚೆನ್ನವೀರಪ್ಪ, ಹಮ್ಮಿಗಿ ಶಾಂತಪ್ಪ, ಚಿಕ್ಕಮರುಳಪ್ಪ ಕೊಟ್ರಬಸಪ್ಪ, ಹಲಗೇರಿ ಚೆನ್ನವೀರಪ್ಪ ಮುಂತಾದವರು ಸಭೆಗೆ ಸೇರಿದರು. ಉಜ್ಜಯಿನೀ ಜ. ಮಹಾತ್ಮರು ಲಿಂಗೈಕ್ಯರಾದುದರಿಂದ ಸಮಾಜಕ್ಕೆ ಬಹುತಾಪವಾಯಿತೆಂದು ಶಿವರುದ್ರಗೌಡರು ಭಾಷಣಮಾಡಿದ ಬಳಿಕ ವೇ. ಪು. ಮ. ವಿರೂಪಾಕ್ಷಶಾಸ್ತ್ರಿಗಳು ಆ ಗುರುಪುಂಗವರ ಆದ್ಯಂತ ಚರಿತ್ರವನ್ನು ಹೃದಯಂಗಮ ವಾಗಿ ಶೃತಪಡಿಸಿ, ತಮ್ಮಿಂದ ರಚಿತವಾದ ಒಂದು ಕವನವನ್ನು ಓದಿ ಹೇಳಿದರು.

ಪದ— ರಾಗ ಜೀವನಪುರಿ ( ರೂಪಕತಾಳ )

ಧಾಟಿ– ಮಗನತೂಗಿರೋ ಭಕ್ತರು ಎಂಬಂತೆ.

ಅಗಲಿಪೋದೆಯಾ ಗುರುವೇ। ಜಗದಾಚಾರ್ಯ ನಿಮ್ಮಪ್ರಭೆಯ। ಜಗದೊಳಿರಿಸಿ ಹರನೋಳ್‌ಬೆರೆದು ॥ ಪಲ್ಲ ॥ ಉಜ್ಜಯಿನೀ ಧರ್ಮಪೀಠಕೆ ಉಜ್ವಲಾಧಿಕಾರವಹಿಸಿ। ಸಜ್ಜನಾಳಿವಂದ್ಯಲೋಕ॥ ಪೂಜ್ಯನೆನಿಸಿ ಶಿವನೋಳ್‌ಬೆರೆದು ॥೧॥ ವೀರಶೈವ ಸಮಯೋದ್ಧಾರನೆ। ವೀರಶಿವಯೋಗಾಭಿರಾಮನೆ ॥ ಗುರುಸಾರ್ವಭೌಮ ಸಿದ್ಧಲಿಂಗ ರಾಜ ದೇಶಿಕೇಂದ್ರ ॥ ೨ ॥ ವಂಚನಿಲ್ಲದೆ ಮನದಿಯೋಚಿಸಿ। ಪಂಚಪೀಠಗಳನು ಜಗದಿ ॥ ಮಿಂಚುವಂತೆಮಾಡಿ ಕೀರ್ತಿ। ಸಂಚಯವನು ಪಡೆದಮಹಿಮಾ ॥ ೩ ॥ ಧರ್ಮಮಾರ್ಗವತೋರಿ ಜನರಿಗೆ। ಧರ್ಮಬೋಧೆಗೈದಿಸತತ ॥ ದುರ್ಮದಾಂಧ ಜನರಶಿಕ್ಷಿಪ। ಧರ್ಮಮೂರ್ತಿಯತಿವರೇಣ್ಯ ॥ ೪ ॥ ಮಾರತಾಪವದೂರಮಾಡುತೆ। ಘೋರತಪವಗೈದಿ ಸತತ ॥ ಸೂರಿ ವಿರೂಪಾಕ್ಷಪಾಲನೆ। ತೋರದಾಯಿತೆ ನಿನ್ನ ಚರಣ ॥ ೫ ॥



## ಶ್ರೀಮದುಜ್ಜಯಿನೀ ಸದ್ಧರ್ಮ ಪೀಠಕ್ಕೆ
# ನೂತನ ಜಗದ್ಗುರು ಪಟ್ಟಾಧಿಕಾರ ಸಮಾರಂಭ



ಶ್ರೀ ಜ॥ ಸಿದ್ಧೇಶ್ವರಶಿವಾಚಾರ್ಯ ಮಹಾಸ್ವಾಮಿಗಳು

ತರುವಾಯ ಶ್ರೀಮದ್ರಂಭಾಪುರೀ ಜಗದ್ಗುರುಗಳವರು ಉಜ್ಜಯಿನಿಯಲ್ಲಿಯೇ ಮುಕ್ಕಾಂ ಮಾಡಿದ್ದು ಆಲಸ್ಯಮಾಡದೆ ಈ ಪೀಠಾಧಿಕಾರವನ್ನು ನೆರವೇರಿಸಿ ದಯ ಮಾಡಿಸಬೇಕೆಂದಾಲೋಚಿಸಿ ಅಧಿಕಾರಕ್ಕೆ ಯೋಗ್ಯವಟುವನ್ನು ಚುನಾಯಿಸಲು ಕೆಲವು ಪ್ರಮುಖರು ಮುಂತಾದವರನ್ನು ಕರೆಯಿಸಿಕೊಂಡು ಮೀಟಿಂಗ ಮಾಡಲು ಮೊಳಕಾಲ್ಮುರ ತಾಲೂಕು ಆನೆಸಿದ್ಧಾಪುರ ಬ್ರ। ಮ। ಪಟ್ಟದ ತ್ರಿಲೋಚನ ಶಿವಾಚಾರ್ಯರನ್ನೇ ಚುನಾಯಿಸಿದರು.

ಅನಂತರ ಅಲ್ಪಾವಧಿಯಲ್ಲಿಯೇ ಸಕಲ ಸಾಹಿತ್ಯಗಳನ್ನು ಸಿದ್ಧತೆಗೊಳಿಸಿ ನೂತನ ಜಗದ್ಗುರು ಪಟ್ಟಾಧಿಕಾರ ಸಮಾರಂಭದ ಪತ್ರಿಕೆಗಳನ್ನು ಮುದ್ರಿಸಿ ಪ್ರಸಿದ್ಧ ಮಾಡಿದರು. ಬಳಿಕ ಶಾ. ಶಕ ೧೮೭೭ ನೇ ಯುವನಾಮ ಸಂ।ರದ ಮಾಘ ಶು. ೧೦ ಭಾನುವಾರ ತಾರೀಖು ೨—೨—೧೯೫೬ ನೇ ದಿವಸ ಶ್ರೀ ರಂಭಾಪುರೀ ಮತ್ತು ಕೇದಾರ ಜಗದ್ಗುರುಗಳವರ ಸನ್ನಿಧಿಯಲ್ಲಿ ಶ್ರೀ ಗುರುಪಟ್ಟಾಧಿಕಾರವು ನೆರವೇರಿಸಿ " **ಶ್ರೀ ಜ॥ ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳೆಂಬ** " ನಾಮಕರಣ ಮಾಡಲ್ಪಟ್ಟಿತು.

ಈ ಜ॥ ಸಿದ್ಧೇಶ್ವರ ಶಿವಾಚಾರ್ಯಮಹಾಸ್ವಾಮಿಗಳವರು ವಿದ್ಯಾವಿನಯ ವಿಭೂಷಿತರೂ, ಮೇಧಾವಿಗಳೂ, ಸಮಾಜೋದ್ಧಾರ ಪ್ರೇಮಿಗಳೂ ಆಗಿದ್ದಾರೆ.

ಶ್ರೀಶೈಲಪೀಠದ ಜ|| ನಾಗಲೂಟಿ ಭಿಕ್ಷಾವೃತ್ತಿ ಶಿವಾಚಾರ್ಯಮಹಾಸ್ವಾಮಿಗಳವರು ಹಿಂದಿನ (ಲಿಂ) ಜಗದ್ಗುರುಗಳವರಿಗೆ ಒಪ್ಪಿಸಿಕೊಟ್ಟ ಬಯಕೆಯಂತೆ ಇವರು ತಾ. ೭—೭—೧೯೪೦ ನೇ ದಿವಸ ಶ್ರೀಶೈಲ ಜಗದ್ಗುರು ಪೀಠಕ್ಕೆ ವಿದ್ಯಾಕುಲಶೀಲಾದಿ ಸುಗುಣಾನ್ವಿತರಾದ ಮುದೇನೂರು ಬೃ| ಮ| ಪಂಡಿತ ಶ್ರೀ ವಾಗೀಶ ಶಿವಾಚಾರ್ಯರವರಿಗೆ ಉತ್ತರಾಧಿಕಾರವನ್ನು ನೆರವೇರಿಸಿ ಮಹೋಜ್ವಲವಾದ ಕೀರ್ತಿಯನ್ನು ಸಂಪಾದಿಸಿದರು.

---

## ಶ್ರೀಮದುಜ್ಜಯಿನೀ ಜಗದ್ಗುರು ಸದ್ಧರ್ಮ ಪೀಠಾರೋಹಣ

## ಮಾಡಿದ ಗುರು-ಚರ ಪಟ್ಟಾಧಿಕಾರ ಮಂಜರಿ

| | | | |
|---|---|---|---|
| ೧ | ಶ್ರೀ ಜ. | ಮರುಲಾರಾಧ್ಯ ಶಿವಾಚಾರ್ಯರು | |
| ೨ | ,, | ಮಲ್ಲಿಕಾರ್ಜುನ ಶಿವಾ| | |
| ೩ | ,, | ಸಿದ್ಧೇಶ್ವರ | ,, |
| ೪ | ,, | ಗುರುನಾಥ | ,, |
| ೫ | ,, | ಶಿವಯೋಗೀಂದ್ರ | ,, |
| ೬ | ,, | ತ್ರ್ಯಂಬಕ | ,, |
| ೭ | ,, | ಶಿವಾನಂದ | ,, |
| ೮ | ,, | ಮರುಲಸಿದ್ಧ | ,, |
| ೯ | ,, | ಅಮಿತಾನಂದ | ,, |
| ೧೦ | ,, | ನೀಲಗ್ರೀವ | ,, |
| ೧೧ | ,, | ನಂದೀಶ್ವರ | ,, |
| ೧೨ | ,, | ಗುರುರಾಜ | ,, |
| ೧೩ | ,, | ಮಹಾದೇವ | ,, |
| ೧೪ | ,, | ಮಾಯಾಂತಕ | ,, |
| ೧೫ | ,, | ಗುರುಶಾಂತ | ,, |
| ೧೬ | ,, | ವೃಷಭಧ್ವಜ | ,, |
| ೧೭ | ,, | ವೀರವೃಷೇಂದ್ರ | ,, |
| ೧೮ | ,, | ದ್ವಿತೀಯ ಮಲ್ಲಿಕಾರ್ಜುನ | ,, |
| ೧೯ | ಶ್ರೀ. ಜ. | ಶಿವಲಿಂಗ | ಶಿವಾ| |
| ೨೦ | ,, | ದ್ವಿ| ಸಿದ್ಧೇಶ್ವರ | ,, |
| ೨೧ | ,, | ಲಿಂಗಾನಂದ | ,, |
| ೨೨ | ,, | ಸೋಮೇಶ್ವರ | ,, |
| ೨೩ | ,, | ಮುಕ್ತಿನಾಥ | ,, |
| ೨೪ | ,, | ವಾಮದೇವ | ,, |
| ೨೫ | ,, | ಜಗದೀಶ್ವರ | ,, |
| ೨೬ | ,, | ನಿಜಾನಂದ | ,, |
| ೨೭ | ,, | ವಿದ್ಯೇಶ್ವರ | ,, |
| ೨೮ | ,, | ಮಾಹೇಶ್ವರ | ,, |
| ೨೯ | ,, | ಅಘೋರ | ,, |
| ೩೦ | ,, | ಚೆನ್ನವೀರ | ,, |
| ೩೧ | ,, | ಜಟಾಸಿದ್ಧ | ,, |
| ೩೨ | ,, | ಗಂಗಾಧರ | ,, |
| ೩೩ | ,, | ಸಿದ್ಧವೀರ | ,, |
| ೩೪ | ,, | ರುದ್ರೇಶ್ವರ | ,, |
| ೩೫ | ,, | ಶಾಂತಲಿಂಗ | ,, |
| ೩೬ | ,, | ವೈ| ನಂದೀಶ್ವರ | ,, |
| ೩೭ | ,, | ಗಂಗಾಧರ | ,, |
| ೩೮ | ,, | ಮಹಾಲಿಂಗ | ,, |

೩೯ ಶ್ರೀ. ಜ. ಪಂಚಾನನ ಶಿವಾ।
೪೦ ,, ಬಿಲ್ವದಳಭೂಷಣ ,,
೪೧ ,, ಮಾರಮರ್ದನ ,,
೪೨ ,, ನಾಗಭೂಷಣ ,,
೪೩ ,, ಶ್ಯಾಮಕಂಧರ ,,
೪೪ ,, ಚಂದ್ರಶೇಖರ ,,
೪೫ ,, ಗುರುಸಿದ್ಧ ,,
೪೬ ,, ಭವಹರ ,,
೪೭ ,, ಚಂಡೀಶ್ವರ ,,
೪೮ ,, ಅಮೃತೇಶ್ವರ ,,
೪೯ ,, ಸುಜ್ಞಾನಶೇಖರ ,,
೫೦ ,, ಸಿದ್ಧಲಿಂಗ ,,
೫೧ ,, ಶೇಷಭೂಷಣ ,,
೫೨ ,, ಶಂಕರಾನಂದ ,,
೫೩ ,, ಮಹಾ ಮಲ್ಲಿಕಾರ್ಜುನ ,,
೫೪ ,, ಶಂಭುಲಿಂಗ ,,
೫೫ ,, ಶಿವಯೋಗ ಪ್ರಭಾಕರ ,,
೫೬ ,, ಚಿನ್ಮಹೊದಧಿ ,,
೫೭ ,, ಶಿವಜ್ಞಾನ ಸಂಜೀವನ ,,
೫೮ ,, ಗಣೇಂದ್ರ ಮಂದಾರ ,,
೫೯ ,, ಸಿದ್ಧೇಶ್ವರ ,,
೬೦ ,, ಪರಸಿದ್ಧೇಶ್ವರ ,,
೬೧ ,, ಮಹಾಂತದೇವ ,,
೬೨ ,, ಮಲ್ಲಿಕಾರ್ಜುನ ,,
೬೩ ,, ವೃಷ್ಟಿಶಂಕರ ,,
೬೪ ,, ಶಂಭುಲಿಂಗ ,,
೬೫ ,, ಮದನಾರಿ ,,
೬೬ ,, ಮಾಯಾ ಕೋಲಾಹಲ ,,

೬೭ ಶ್ರೀ. ಜ. ಶಿವಲೀಲಾ ಚೆನ್ನವೀರಶಿವಾ।
೬೮ ,, ಪಂಚಾಕ್ಷರ ,,
೬೯ ,, ಓಂಕಾರ ,,
೭೦ ,, ಮುಕ್ತಿನಾಥ ,,
೭೧ ,, ಮಹಾದೇವ ,,
೭೨ ,, ಭರ್ಗೋದೇವ ,,
೭೩ ,, ಬಾಲಸಿದ್ಧೇಶ್ವರ ,,
೭೪ ,, ಚೆನ್ನವೃಷಭ ,,
೭೫ ,, ವೃದ್ಧವೃಷಭೇಂದ್ರ ,,
೭೬ ,, ಚೆನ್ನಮಲ್ಲಿಕಾರ್ಜುನ ,,
೭೭ ,, ಮುಕ್ತಿಮಲ್ಲಿಕಾರ್ಜುನ ,,
೭೮ ,, ಸಿದ್ಧಮಲ್ಲಿಕಾರ್ಜುನ ,,
೭೯ ,, ಏಕೋದೇವ ,,
೮೦ ,, ಆಚಾರ್ಯಭಾಸ್ಕರ ,,
೮೧ ,, ಮೋಕ್ಷೇಶ್ವರ ,,
೮೨ ,, ಸಿದ್ಧವೀರೇಶ ,,
೮೩ ,, ಭದ್ರೇಶ್ವರ ,,
೮೪ ,, ಅಮಿತಾನಂದ ,,
೮೫ ,, ಷಡಕ್ಷರ ,,
೮೬ ,, ಭಕ್ತಿವರ್ಧನ ,,
೮೭ ,, ಪಾಶಹರ ,,
೮೮ ,, ಮಹಿಮಾಕರ ,,
೮೯ ,, ಶಿವಲಿಂಗ ,,
೯೦ ,, ನಯನತ್ರಯ ,,
೯೧ ,, ವಿರೂಪಾಕ್ಷ ,,
೯೨ ,, ಮರುಲಸಿದ್ಧ ,,
೯೩ ,, ಮಹಾಂತಮಲ್ಲಿಕಾರ್ಜುನ ,,

೯೪ ಶ್ರೀ. ಜ. ವೃಷ್ಟಿಮಲ್ಲಿ
ಕಾರ್ಜುನ ಶಿವಾ।
೯೫ ,, ಶಿವಲಿಂಗ ,,
೯೬ ,, ಬೃಹಚ್ಚೆನ್ನವೀರ ,,
೯೭ ,, ಪರಚೆನ್ನವೀರ ,,
೯೮ ,, ಸಿದ್ಧಲಿಂಗ ,,
೯೯ ,, ಮರುಲಸಿದ್ಧ
೧೦೦ ,, ಜಟಾಗುರುಸಿದ್ಧ ,,
೧೦೧ ,, ಚೆನ್ನವೃಷಭ ,,
೧೦೨ ,, ಸಿದ್ಧಲಿಂಗ ,,
೧೦೩ ,, ಚೆನ್ನವೀರ ,,
೧೦೪ ಶ್ರೀ. ಜ. ಚೆನ್ನವೃಷಭ ಶಿವಾ।
೧೦೫ ,, ಗುರುಸಿದ್ಧ ,,
೧೦೬ ,, ಮರುಲಸಿದ್ಧ ,,
೧೦೭ ,, ಚೆನ್ನವೃಷಭ ,,
೧೦೮ ,, ಸಿದ್ಧಲಿಂಗ ಶಿವಾಚಾರ್ಯ
ಮಹಾಸ್ವಾಮಿಗಳವರು

—o—

೧೦೯ ಶ್ರೀ ಜ. ಸಿದ್ಧೇಶ್ವರ ಶಿವಾಚಾರ್ಯ
ಮಹಾಸ್ವಾಮಿಗಳವರು, ಸದ್ಯಃ
ಪೀಠಾಧೀಶರಾಗಿರುವರು.



## ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ಪುಣ್ಯದಿನಾಚರಣೆಯು.

---

### ಸಮಸ್ತ ವೀರಶೈವ ಮಂಡಲಿಗೆ ಸವಿನಯ ಸೂಚನೆ—

ಶ್ರೀ ಜಗದ್ಗುರು ಪಂಚಪೀಠಗಳನ್ನು ಪ್ರಕಾಶಗೊಳಿಸಿದವರೂ ವೀರಶೈವ ಸಮಾಜದಲ್ಲಿ ಧರ್ಮಜಾಗ್ರತೆಯನ್ನುಂಟುಮಾಡಿ ಗುರುವರ್ಗೋದ್ಧಾರಗೈದವರೂ ಸದ್ಭಕ್ತರ ಮನೋಬಯಕೆಗಳನ್ನಿತ್ತು ದರ್ಶನಾಶೀರ್ವಾದಗಳಿಂದ ಪುನೀತರನ್ನುಮಾಡಿ ದವರೂ ಮಹಾತಪೋನಿಧಿಗಳೂ ಶಾಪಾನುಗ್ರಹಸಮರ್ಥರೂ ಚಿರಸ್ಮರಣೀಯರೂ ಸಾಕ್ಷಾತ್ಪರಶಿವಾವತಾರಿಗಳೂ ಆದಂಥ ಈ ಮಹಾತ್ಮರು ಯುವನಾಮ ಸಂವತ್ಸರದ ಪುಷ್ಯ ಬಹುಳ ೪ ಮಿತಿಯಲ್ಲಿ ಲಿಂಗೈಕ್ಯರಾದುದರಿಂದ ಪ್ರತಿವರುಷ ಇದೇ ತಿಥಿ ದಿವಸ ಈ ಗುರುಸಾರ್ವಭೌಮರ ಭಾವಪಟವನ್ನು ಪೂಜಾಲಂಕಾರೋತ್ಸವಾದಿ ವಿಶೇಷ ಭಕ್ತಿಯಿಂದ ಆ ಪುಣ್ಯದಿನಾಚರಣೆಯನ್ನುಮಾಡಿ ಧನ್ಯರಾಗಬೇಕೆಂದು ಬಯಸುತ್ತೇವೆ

ಗ್ರಂಥಕರ್ತ.

## ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸ್ತುತಿಪದ

( ಧಾಟಿ– ಎಂಥವನೆ ಗುರುರಾಯ । ಶಾಂತಿ ಸದ್ಗುಣ ನಿಲಯ )

ಶ್ರೀ ಸಿದ್ಧಲಿಂಗೇಶ । ಪಾಲಿಸು । ಜಗದೀಶ ॥ ಆಶಾರಹಿತ ಭವ । ಪಾಶ ವಿನಾಶ ॥ ಪ ॥ ವರಭಸಿತ । ರುದ್ರಾಕ್ಷ । ಧರ ಕಾಷಾಯಾಂಬರ । ಶಿರದೊಳು ಜಟಾಧರ । ಚರಣದಿ ಪಾದುಕಾ ॥ ೧ ॥ ಉಜ್ಜಯಿನೀ ಸದ್ಧರ್ಮ । ಪ್ರಜ್ವಲಿಪ ಪೀಠದೊಳು । ಚಿಜ್ಜ್ಯೋತಿಯಿಂದಲಿ । ಮೆರೆಯುವ ಗುರುವೆ ॥ ೨ ॥ ಪಂಚಬಾಣನ ಗೆಲಿದು । ಪಂಚಕ್ಲೇಶಗಳಳಿದು । ಪಂಚಾಸ್ಯರೂಪದಿ । ಸಂಚರಿಸಿದಿ ನೀ ॥ ೩ ॥ ಸೃಷ್ಟಿಯ ಜನರಿಗೆ । ಶ್ರೀಇಷ್ಟಲಿಂಗದ ತತ್ವ । ಅಷ್ಟಾವರಣ ಷಟುಸ್ಥಲಗಳ ಬೋಧಿಪ ॥ ೪ ॥ ಮೇದಿನಿಯೊಳರಿಯದಾ । ಕೇದಾರ ಪೀಠಕ್ಕೆ । ಮೋದದಿ ಗುರು-ಚರ ಪಟ್ಟವನೆಸಗಿದಿ ॥ ೫ ॥ ಬುಕ್ಕಾಂಬುಧಿ ಗಿರಿಯೊಳು । ಮಿಕ್ಕಿದಾ ತಪಗೈದು । ದಿಕ್ಕು ದಿಕ್ಕುಗಳಲಿ ಕೀರ್ತಿಯ ಪಡೆದೈ ॥ ೬ ॥ ರಂಭಾಪುರೀ ಪೀಠಕ್ಕೆ । ಸಂಭವಿಸಿರ್ದಾ ಕಲಹ । ಸಂಭ್ರಮದೀ ಗೆಲಿದಧಿಕಾರವೆಸಗಿದಿ ॥ ೭ ॥ ಸೊಲ್ಲಾಪುರ ಜಿಲ್ಲೆಯೊಳು । ಯಲ್ಲಾ ಬಿರೂದುಗಳಿಂದ । ಪಲ್ಲಕ್ಕಿಯೊಳು ಬಹು ಸರಸದಿ ಮೆರೆದೈ ॥ ೮ ॥ ಹಿತದಿಂದ ಭಜಿಸುವಾ । ಸತಿಯರಿಗೆ ಸುತರಿತ್ತು । ಅತಿರೋಗಿ ಜನರಿಗೆ ಹಿತವನು ಮಾಡಿದಿ ॥ ೯ ॥ ಗುರುನಿಂದೆ ಮಾಡುವಾ । ದುರುಳರ ಮದವನ್ನು । ಭರದಿಂದ ಮುರಿಯುತ । ಕರುಣವ ತೋರಿದಿ ॥ ೧೦ ॥ ಗುರುವೇ ನೀ ತೋರಿದಾ । ಪರತರ ಮಹಿಮೆಗಳ । ಧರೆಯೊಳು ಮೆರೆಸಿದ । ವಿರೂಪಾಕ್ಷ ಬುಧನು ॥ ೧೧ ॥



## ಮಂಗಲಾರತಿ

( ಪಾಟಿ- ಮಂಗಲಂಮಹ ಮಹಿಮ ಜಗದಾರ್ಯ । ಯತಿಪುಂಗವಾರ್ಯ ಎಂಬಂತೆ )

ಮಂಗಲಂ ಶ್ರೀ ಸಿದ್ಧಲಿಂಗೇಶ । ಉಜ್ಜಯಿನಿವಾಸ । ತುಂಗಸದ್ಧರ್ಮಾಸನಾಧೀಶ ॥ ಅಂಗಜಾಂಗವಿಭಂಗ ಮಾಹೇಶ । ಶ್ರೀ ಜಂಗಮೇಶ ॥ ಪಲ್ಲ ॥ ಮೆರೆವ ಬುಕ್ಕಾಂಬುಧೀ ಗಿರಿಯೊಳಗೆ । ನಿರಾಹಾರದಿಂದ । ಘೋರ ತಪವನು ಗೈದು ಗುರುವರನೇ ॥ ಪರಮ ರಂಭಾಪುರೀ ಪೀಠಕ್ಕೆ । ಅಧಿಕಾರವೆಸಗಿದಿ ॥ ೧ ॥ ಜಗದೊಳೆಪ್ಪತ್ತೆರಡು ಬಿರುದುಗಳ । ಮಿಗೆಶೋಭೆಯಿಂದ । ಸೊಗಸಿನಿಂದಲಿ ಮೆರೆದು ಸರ್ವರಿಗೆ ॥ ಸುಗಮದಿಂದಲಿ ಧರ್ಮ ಬೋಧಿಸಿದ । ಗುರುಸಾರ್ವಭೌಮನೆ ॥ ೨ ॥ ಸರಸ ಪಂಚಾಚಾರ್ಯ ಪತ್ರಿಕೆಯ । ಭರದಿಂದಲುದಯಿಸಿ । ಧರೆಯ ಜನರಿಗೆ ಧರ್ಮಮಾರ್ಗಗಳು ॥ ಪರತರಷ್ಟಾವರಣ ತತ್ವಗಳು । ಅರಿವಂತೆ ಮಾಡಿದಿ ॥ ೩ ॥ ಭೂರಿ ಸಾಹಸಗೈದು ಕಾಶಿಯೊಳು । ವರಪಂಚಪೀಠಾ । ಚಾರ್ಯ ಸಮ್ಮೇಳನವ ಜರುಗಿಸಿದೀ ॥ ಹರುಷದಿಂ ಕೇದಾರ ಪೀಠವನು । ಧರೆಯೋಳು ಮೆರೆಸಿದಿ ॥ ೪ ॥ ಸುಜನ ರಕ್ಷಕ । ಭಜಕ ಸಂಪ್ರೀತ । ವಿರೂಪಾಕ್ಷ ಬುಧನುತ । ಕುಜನ ಶಿಕ್ಷಕ ॥ ರಾಜರಾಜನುತ । ಅಜಭವಾಂಡದಿ । ಭೂರಿವಿಖ್ಯಾತ । ನಿಜಮೋಕ್ಷದಾತ ॥ ೫ ॥

---

ಭಾ॥ ಷ॥

ಮಂಗಲಂ ಶ್ರೀ ದಾರುಕೇಶಗೆ ।
ಮಂಗಲಂ ಗುರುಸಾರ್ವಭೌಮಗೆ ।
ಮಂಗಲಂ ಸದ್ಧರ್ಮ ಪೀಠಾಧೀಶ ಮಹಿಮನಿಗೆ ॥
ಮಂಗಲಂ ದುರಿತಾಳಿ ದೂರಗೆ ।
ಮಂಗಲಂ ಸುಜನಾಳಿ ವಂದ್ಯಗೆ ।
ಮಂಗಲಂ ಜಯ ಸಿದ್ಧಲಿಂಗ ಯತೀಂದ್ರ ಗುರುವರಗೆ ॥ ೧ ॥



## ಧಾರ್ಮಿಕ ನಿಬಂಧನೆಗಳು—

ಉಜ್ಜಯಿನೀ ಮಹಾಶ್ರೀಗಳವರು ಮುಂದೆ ಈ ವೀರಶೈವ ಧರ್ಮಸಾಮ್ರಾಜ್ಯಪರಿಪಾಲನೆಯು ನಿರಾತಂಕದಿಂದ ಅಭಿವೃದ್ಧಿ ಹೊಂದಲೆಂದು ದೀರ್ಘಾಲೋಚನೆ ಮಾಡಿ ಅನೇಕ ನಿಬಂಧನೆ ( ರೂಲ್ಸು ) ಗಳನ್ನು ವಿಸ್ತಾರವಾಗಿ ಬರೆದು ಇಟ್ಟಿದ್ದಾರೆ. ಅವುಗಳ ಸಾರಾಂಶವನ್ನು ಇಲ್ಲಿ ವಿವರಿಸಲ್ಪಡುವದು—

೧. ವೀರಶೈವ ಮತಸ್ಥಾಪಕರಾದ ಶ್ರೀ ಜಗದ್ಗುರು ಪಂಚಪೀಠಾಧೀಶ್ವರರು ೫ ವರುಷಕ್ಕೊಂದು ಸಾರೆ ಅಥವಾ ಅನುಕೂಲವಾದಾಗ್ಗೆ ಒಂದೊಂದು ಜಿಲ್ಹೆಯೊಳಗೆ ಶ್ರೀ ಜ|| ಪಂಚಾಚಾರ್ಯ ಮಹಾ ಸಮ್ಮೇಳನವನ್ನು ಜರಗಿಸುತ್ತ ವೀರಶೈವ ಮತೋನ್ನತಿಯಾಗುವಂತೆ ಮಾಡತಕ್ಕದ್ದು.

೨. ಸಮಸ್ತ ಪಟ್ಟಚರಾಧಿಕಾರಿಗಳು ವಿದ್ಯಾವಂತರೂ, ಜಿತೇಂದ್ರಿಯರೂ, ಸದ್ಗುಣಿಗಳೂ ಶಿವಪೂಜಾಧುರಂಧರರಾಗಿ ಸಮಾಜ ಸುಧಾರಣಕಾರ್ಯದಲ್ಲಿ ತತ್ಪರರಾಗಿರುವದಲ್ಲದೆ, ೩ ವರುಷಕ್ಕೊಮ್ಮೆ ಅಥವಾ ಅನುಕೂಲ ಬಿದ್ದಾಗ ಶ್ರೀ ಪಟ್ಟಚರಾಧಿಕಾರಿಗಳ ಸಮ್ಮೇಲನ ಜರಗಿಸತಕ್ಕದ್ದು,

೩. ಪ್ರತಿಯೊಂದು ತಾಲೂಕಿನಲ್ಲಿರುವ ಶ್ರೀ ಪಟ್ಟಚರಾಧಿಕಾರಿಗಳೂ, ಮಠಾಧಿಕಾರಿಗಳೂ ಆ ತಾಲೂಕಿನ ಗ್ರಾಮದ ಪ್ರಮುಖರೂ ಸಮ್ಮಿಳಿತರಾಗಿ ತಾಲೂಕಿಗೊಂದೊಂದರಂತೆ ಮಠಾಧಿಕಾರಿಗಳ ಪರಿಷತ್ತನ್ನು ವರುಷಕ್ಕೊಮ್ಮೆ ಜರಗಿಸುವದಲ್ಲದೆ ಮುಖ್ಯಗ್ರಾಮದಲ್ಲಿ ಒಂದು ಗುರುವರ್ಗಸುಧಾರಣ ಪಾಠಶಾಲೆಯನ್ನು ಸ್ಥಾಪಿಸಿ ಮಾಹೇಶ್ವರ ವಟುಗಳು ವೈದಿಕ ಜ್ಯೋತಿಷ್ಯ ವಿದ್ಯಾವಂತರಾಗುವಂತೆ ಪ್ರಯತ್ನಮಾಡತಕ್ಕದ್ದು.

೪. ಸಂಗೀತ ಸಾಹಿತ್ಯಾದಿ ನಿಪುಣರೂ ವಾಕ್ಪಟುತ್ವವುಳ್ಳ, ರಸಿಕರೂ ಆದ ಶಾಸ್ತ್ರಿಗಳವರನ್ನು ಶಿವಕೀರ್ತನಮೂಲಕ ವೀರಶೈವ ಸಮಾಜದಲ್ಲಿ ಧರ್ಮಜಾಗ್ರತಿಯಾಗುವಂತೆ ನಿತ್ಯಾಚಾರ ಗುರುಭಕ್ತಿ ಮುಂತಾದವುಗಳನ್ನು ಉಪದೇಶ ಮಾಡಲು ಏರ್ಪಡಿಸಿ ಸಣ್ಣ ಪುಟ್ಟ ಗ್ರಾಮಗಳಿಗೆ ಕಳುಹಿಸುವದು. ಇಂಥ ಉಪದೇಶಕರಿಗೆ ಪೀಠಾಧೀಶ್ವರರು ಸಂಭಾವನೆ ಕೊಡತಕ್ಕದ್ದು.

೫. ಮೇಲಿನ ಸತ್ಕಾರ್ಯಗಳಿಗೆ ಬೇಕಾಗುವ ಧನವನ್ನು ( ಗವ್ಹರ್ನಮೆಂಟಿನ ಪದ್ಧತಿಯಂತೆ ) ಪ್ರತಿಯೊಬ್ಬ ಲಿಂಗಧಾರಿಯು ವರುಷಕ್ಕೊಮ್ಮೆ ತಲೆ ೧ ಕ್ಕೆ ೫ ಆಣೆಯಂತೆ ಗುರುಕಾಣಿಕೆ ( ಕಂದಾಯ ) ವನ್ನು ಕೊಡುವಂತೆ ಠರಾಯಿಸಿ ಈ ಕಾಣಿಕೆಯನ್ನು ಮಠಾಧಿಕಾರಿಗಳು ವಸೂಲ ಮಾಡಿ ಶ್ರೀ ಜಗದ್ಗುರು ಪೀಠಾಧೀಶ್ವರರ ಕಡೆಗೆ ಕಳುಹಿಸಿ ಆ ಹಣವನ್ನು ಸಮಾಜಕಾರ್ಯಕ್ಕೆ ಸದ್ವಿನಿಯೋಗ ಮಾಡುವಂತೆ ನಿರ್ಣಯಮಾಡಿಕೊಳ್ಳತಕ್ಕದ್ದು.

೬. ಪ್ರತಿಯೊಂದು ಜಗದ್ಗುರು ಪೀಠದಲ್ಲಿ ೨೫ ಜನರದೊಂದು ( ಕೌನ್ಸಿಲ ಸಭೆ ) ಶಿಷ್ಯಮಂಡಳಿಯಿರತಕ್ಕದ್ದು. ಇದಕ್ಕೆ ಸಮಾಜಪ್ರಮುಖರೂ ಪೀಠಾಭಿಮಾನಿಗಳೂ ವಿದ್ಯಾವಂತರೂ ಆದವರೇ ಸಭಾಸದರಾಗಿದ್ದು ಪೀಠಾಭಿವೃದ್ಧಿ, ಸಮಾಜೋನ್ನತಿ ಕಾರ್ಯಕಲಾಪಗಳನ್ನು ಜರಗಿಸತಕ್ಕದ್ದು.

೭. ಶ್ರೀ ಜಗದ್ಗುರು ಪಂಚಪೀಠಾಧೀಶ್ವರರು ದೇಶಮಧ್ಯ ( ಬೆಂಗಳೂರು, ಧಾರವಾಡ, ಬಳ್ಳಾರಿ, ಸೊಲ್ಲಾಪುರ ) ಮುಂತಾದ ಪಟ್ಟಣಗಳಲ್ಲಿ ಧಾರ್ಮಿಕ ವಿಷಯಗಳ ತೊಡಕುಗಳನ್ನು ನಿರ್ಣಯಮಾಡಲು ವೀರಶೈವ ಮತಗ್ರಂಥಗಳ ಭಾಂಡಾರವೊಂದೊಂದು ಸ್ಥಾಪಿಸಿ ಮತ್ತು ಘನಪಾಂಡಿತ್ಯವುಳ್ಳ ೫ ಜನರ ವಿದ್ವತ್ಸಂಘವನ್ನು ಏರ್ಪಡಿಸಿ ತದ್ವಾರಾ ವೀರಶೈವ ಜನಾಂಗಕ್ಕೆ ಬೇಕಾಗುವ ಧರ್ಮಕರ್ಮಗಳ ನಿರ್ಣಯದ ಒಂದು ರೂಲ್ಸು ( ಕಾಯಿದೆ ) ಬುಕ್ಕನ್ನು ರಚಿಸಿ ಆ ಕಾಯಿದೆ ಗ್ರಂಥೋಕ್ತಪ್ರಕಾರ ಸರ್ವರೂ ವರ್ತಿಸತಕ್ಕದ್ದು.

೮. ಪ್ರತಿಯೊಂದು ಗ್ರಾಮದ ಮಠಾಧಿಕಾರಿಗಳ ಮಕ್ಕಳು ಗುರುವರ್ಗಸುಧಾರಣ ಪಾಠಶಾಲೆಯಲ್ಲಿ ವೈದಿಕ ಜ್ಯೋತಿಷ್ಯ ವಿದ್ಯಾವಂತರಾಗಿ ಜಗದ್ಗುರು ಪೀಠಾಧೀಶರಿಂದ ಸರ್ಟಿಫಿಕೆಟು ಪಡೆದು ಬಂದಂಥವರಿಗೆ ಮಾತ್ರ ಭಕ್ತಾದಿಗಳು ಮಾನ ಮರ್ಯಾದೆಗಳನ್ನಿತ್ತು ಗೌರವಿಸುವದಲ್ಲದೆ ಇಂಥವರಿಂದಲೇ ವೈದಿಕ ಕಾರ್ಯಗಳನ್ನು ಸಕ್ರಮವಾಗಿ ಜರಗಿಸತಕ್ಕದ್ದು.

೯. ವಿದ್ಯಾಭ್ಯಾಸ ಮಾಡದೆ ಸ್ನಾನ ಶಿವಪೂಜಾದಿಗಳಲ್ಲಿ ಅನಾದರ ಮಾಡಿ ಸ್ವೇಚ್ಛಾ ವಿಹಾರಿಗಳಾಗಿ ದುಶ್ಚಟಗಳಿಂದ ಸಂಚರಿಸುವವರನ್ನು ದೂರೀಕರಿಸತಕ್ಕದ್ದು.

೧೦. ಸಮಾಜ ಸುಧಾರಣೆಯ ಸಲುವಾಗಿ ಪಂಡಿತರಿಂದ ಧರ್ಮ, ನೀತಿ, ನಿತ್ಯಾಚಾರ, ಮತರಹಸ್ಯ ವಿಷಯ ಮುಂತಾದವುಗಳನ್ನು ಬರೆಯಿಸಿ ಚಿಕ್ಕ ಚಿಕ್ಕ ಪುಸ್ತಕಗಳನ್ನು ಮುದ್ರಿಸಿ ಉಚಿತವಾಗಿ ಕೊಡತಕ್ಕದ್ದು.

ಈ ಪ್ರಕಾರ ಆ ಮಹಾನುಭಾವರ ಸದಭಿಪ್ರಾಯಗಳನ್ನು ಇಲ್ಲಿ ಸಂಕ್ಷೇಪದಿಂದ ವಿವರಿಸಿದ್ದಾಯಿತು. ಇದರಮೇಲಿಂದ ಸರ್ವರೂ ಆಲೋಚಿಸಿ ಮುಂದಿನ ಏರ್ಪಾಟ ಮಾಡಿಕೊಂಡು ವೀರಶೈವ ಸಮಾಜಾಭಿವೃದ್ಧಿಯಾಗುವಂತೆ ಪ್ರಯತ್ನಮಾಡಿ ಆ ಮಹಾತ್ಮರ ಸತ್ಸಂಕಲ್ಪವು ಪೂರೈಸುವಂತೆ ಮಾಡಬೇಕೆಂದು ನನ್ನ ಬೇಡಿಕೆ

---

# ವಿ ನಂ ತಿ

ವಾಚಕಮಹಾಶಯರೇ, ಇಲ್ಲಿಗೆ ಆ ಮಹಾಗುರು ಚರಿತ್ರೆಯು ಸಂಪೂರ್ಣವಾಯಿತು. ಆದರೆ ಆ ಸದ್ಗುರುವಿನ ಪೂರ್ಣಾನುಗ್ರಹಕ್ಕೆ ಪಾತ್ರರಾದ ಎಷ್ಟೋ ಜನರಿಗೆ ಅವರವರ ಬಯಕೆಯಂತೆ ಪುತ್ರಸಂತಾನ, ರೋಗನಿವಾರಣೆ, ವ್ಯಾಪಾರದಲ್ಲಿ ಲಾಭ, ವ್ಯಾಜ್ಯದಲ್ಲಿ ಜಯ ಮೊದಲಾದ ಇಷ್ಟಾರ್ಥಸಿದ್ಧಿಯಾದವು ಎಂಬುದು ಕರ್ಣೋಪಕರ್ಣದಿಂದ ತಿಳಿಯುತ್ತ ಬಂದವು. ಅವುಗಳನ್ನೆಲ್ಲ ಮುದ್ರಿಸುವದು ಇಂತಹ ಮಹಾರ್ಘಕಾಲದಲ್ಲಿ ತುಂಬಾ ಕಷ್ಟವಾಗುವದರಿಂದ ಇಷ್ಟಕ್ಕೇ ವಿರಮಿಸಿ ಈ ನನ್ನ ಅಲ್ಪಸೇವೆಯನ್ನು ಸಲ್ಲಿಸಿದ್ದಾಯಿತು.

ಆದರೆ ಆ ಗುರುಪುಂಗವರು ಹಿಂದೆ ಆಂಧ್ರ ದೇಶದಲ್ಲೂ ಮಹಾರಾಷ್ಟ್ರ ಪ್ರಾಂತದಲ್ಲೂ ಸಂಚರಿಸಿರುವದರಿಂದ ಆಯಾ ಪ್ರಾಂತದ ಸದ್ಭಕ್ತರಿಗೂ ತಿಳಿಯುವಂತೆ ಇದೇ ಸಚ್ಚರಿತ್ರವನ್ನು ತೆಲಗು-ಮರಾಠಿ ಭಾಷೆಗಳಲ್ಲಿಯೂ ತರ್ಜುಮೆಗೊಳಿಸಿ ಪ್ರಸಿದ್ಧ ಪಡಿಸಬೇಕೆಂಬಾಲೋಚನೆಯಿದೆ. ಮತ್ತು ಇದನ್ನು ಪದ್ಯರೂಪದಿಂದ ಪುರಾಣರಚನಾ ಮಾಡಿಸಬೇಕೆಂಬುವದೊಂದು ಬಯಕೆಯಿದೆ. ಇದಕ್ಕೆ ಆ ಗುರುಕೃಪಾ ಇದ್ದಂತಾಗಲಿ.

ಈ ಪೂಜ್ಯಗ್ರಂಥವನ್ನು ಪ್ರತಿಯೊಬ್ಬ ಲಿಂಗಾಂಗಿಯು ಸಂಗ್ರಹಿಸಿ ತನ್ನ ಮಂದಿರದಲ್ಲಿ ಪವಿತ್ರ ಸ್ಥಾನದೊಳಿರಿಸಿ ನಿತ್ಯ ಪೂಜಾ-ಪಠನ-ವಂದನಾದಿಗಳನ್ನು ಮಾಡುತ್ತ ಇದ್ದರೆ ಗೃಹಾರಿಷ್ಟ, ರೋಗ, ದ್ದಾರಿದ್ರ್ಯ ಗ್ರಹಬಾಧೆ ಮುಂತಾದ ದುರ್ದೋಷಗಳು ನಿವಾರಣೆಯಾಗಿ ಸಂತೋಷಜೀವಿಯಾಗಿ ಬಾಳುವನು.

ಎಂಬಲ್ಲಿಗೆ ಶ್ರೀಮಜ್ಜಗದ್ಗುರು ಪಂಡಿತಾರಾಧ್ಯ ಶಾಖಾನುವರ್ತಿಗಳಾದ ಬಳ್ಳಾರಿ ಜಿಲ್ಲಾ ಹಿರೇಹಡಗಲಿ ಪುರಾಣಿಕ ಮಠಾಧಿಪ ಶ್ರೀ ಚನ್ನವೀರ ಪಂಡಿತ ವಂಶಾಂಬುಧಿ ಪೂರ್ಣಚಂದ್ರೋಪಮ ವೇ॥ ಗುರುಶಾಂತಾರ್ಯರ ಪುತ್ರ ವಿರೂಪಾಕ್ಷ ಶಾಸ್ತ್ರಿಯಿಂದ ವಿರಚಿತಮಾದ ಶ್ರೀ ಜಗದ್ಗುರು ಸಿದ್ಧಲಿಂಗೇಶ ವಿಜಯದೊಳು ಸಂಕೀರ್ಣ ಪ್ರಕರಣ ಸಂಪೂರ್ಣವಾದುದು.

ಮಿತಿ ಶ್ರೀ ಶಾ. ಶಕ ೧೮೬೬ ನೇ ತಾರಣ ಸಂವತ್ಸರ ವೈಶಾಖ ಶು. ೫ ಗುರುವಾರ

.... ಸರ್ವೇಜನಾಃ ಸುಖಿನೋಭವಂತು ....

ಶಿವಂಭೂಯಾತ್.



ಗ್ರಂಥಕರ್ತರು :—



ಹಿರೇಪಡಗಲಿ ಪುರಾಣಿಕ ಮಠಾಧ್ಯಕ್ಷರಾದ

ವೇ|| ಪಂ|| ವಿರೂಪಾಕ್ಷಶಾಸ್ತ್ರಿಗಳು

# ಗ್ರಂಥಕರ್ತರ ಶುಭಾಶಂಸ

( ಭಾ| ಷ| )

ಧರಣಿಯೊಳು ಬಳ್ಳಾರಿ ಜಿಲ್ಲೆಯ । ವರುಣದಿಶೆಯೊಳು ಮೆರೆಯುತಿರುವಾ । ಸರಸ ಹಿರೆಹಡಗಲಿ ಪುರಾಣಿಕಮಠದೊಳುದಯಿಸುತ ॥ ಹರಪುರಿಯವರ ಸೋಮಶೇಖರ । ನರಪತಿಯ ಸಭೆಯೊಳ್ವಿರಾಜಿಸಿ । ಹರುಷದಿಂದಾಸ್ಥಾನ ಪಂಡಿತರೆನಿಸಿ ಗೌರವದಿಂ ॥ ೧ ॥

ಮೆರೆದ ಶ್ರೀ ಚನವೀರ ಪಂಡಿತ । ಗುರುವರಾನ್ವಯ ಜಾತರೆನಿಸಿದ । ಧರೆಯೊಳತಿ ವಿಖ್ಯಾತರಾದ ಫಕೀರಶಾಸ್ತ್ರಿಗಳು ॥ ಗುರುಬಸವ ಸಿದ್ಧಾಂತಿಗಳವರ । ತರುಳ ಗುರುಶಾಂತಾರ್ಯ ಪತ್ನಿಯು । ಪರಮ ಪಾತಿವ್ರತ್ಯ ಗುರುಬಸವಾಂಬೆಯುದರದೊಳು ॥ ೨ ॥

ಜನಿಸಿದಾ ವೀರಪ್ಪಶಾಸ್ತ್ರಿಗ । ಳನುಜ ಸಂಗೀತಾಗಮಜ್ಞನು । ಘನಶಿವಾರ್ಚನಪರ ವಿರೂಪಾಕ್ಷಾಖ್ಯ ಶಾಸ್ತ್ರಿಯುನಾಂ ॥ ಸನುಮತದಿ ಗುರುಸಾರ್ವಭೌಮರ । ಘನತರಾಸ್ಥಾನದೊಳಗಿರುತಿರೆ । ಮನನವಾದವು ಸಕಲ ವಿಷಯಗಳೆನಗೆ ಮುದದಿಂದ ॥ ೩ ॥

ಶ್ರೀಮದುಜ್ಜಯಿನೀ ಪುರೀಯೊಳ । ಗಾಮಹಾಸದ್ಧರ್ಮ ಪೀಠದ । ಧಾಮನಿಧಿ ಶ್ರೀ ಸಿದ್ಧಲಿಂಗ ಯತೀಂದ್ರ ಮಹಿಮೆಗಳ ॥ ರಾಮಣೀಯಕಮಾದ ಚರಿತವ । ನೇಮದಿಂ ಲಿಖಿಸಿರುವೆ ಸುಜನರು । ಪ್ರೇಮದಿಂ ಪಠಿಸುತ್ತ ಪಡೆಯಲಿ ಮನದ ಬಯಕೆಗಳ ॥ ೪ ॥

ಚಿತ್ರಭಾನು ಸುವತ್ಸರದೊಳಾ । ಚೈತ್ರಮಾಸದ ಶುಕ್ಲಪಕ್ಷಪ । ವಿತ್ರ ಸಪ್ತಮಿ ಚಂದ್ರವಾರದೊಳೀಶ ದಯದಿಂದ ॥ ಪಾತ್ರ ಗ್ರಂಥವು ಪೂರ್ಣಮಾದುದು । ಮಿತ್ರಶಶಧರರಿರುವವರೆಗುಂ । ಚಿತ್ರಭಾನುವಿನಂತೆ ಜಗದೊಳು ಸತತ ಶೋಭಿಸಲೀ ॥ ೫ ॥



# ಅಭಿನಂದನ



ಬಳ್ಳಾರಿ ಜಿಲ್ಲಾ ಆಲೂರು ತಾಲೂಕು ಹೊಳಲಗುಂದಿ ಗ್ರಾಮದಲ್ಲಿ ಸುಪ್ರಸಿದ್ಧ

ಶ್ರೀಮಂತರೂ ಗುರು-ಲಿಂಗ-ಜಂಗಮ ಸೇವಾಧುರೀಣರೂ

ಆದಂಥ

## ಶ್ರೀಯುತ ಬಸವನಗೌಡರು

ಈ ಮಹಾಗ್ರಂಥ ಮುದ್ರಣ ಕಾರ್ಯಕ್ಕೆ ತ್ರಿಕರಣಶುದ್ಧವಾದ ಭಕ್ತಿಯಿಂದ

ಒಂದುನೂರಾ ಹತ್ತು ರೂಪಾಯಿಗಳ ಭಕ್ತಿಕಾಣಿಕೆಯನ್ನು ಸಮರ್ಪಿಸಿ

ಸದ್ಗುರುವಿನ ಕೃಪೆಗೂ ಸತ್ಕೀರ್ತಿಗೂ ಪಾತ್ರರಾಗಿ, ಇನ್ನಿತರ

ಶ್ರೀಮಂತರಿಗೆ ಆದರ್ಶಪ್ರಾಯರಾಗಿದ್ದಾರೆ.

ಈ ಮಹೋದಯರಲ್ಲಿ ನೆಲೆಸಿರುವ ಗುರುಭಕ್ತಿ, ಔದಾರ್ಯ, ಗಾಂಭೀರ್ಯ, ಮೊದಲಾದ ಸದ್ಗುಣಗಳು ಅನುಕರಣೀಯವಾಗಿವೆ. ಈ ಧರ್ಮಾತ್ಮರಿಗೆ ಶ್ರೀ ಪರಮಾತ್ಮನು ದೀರ್ಘಾಯುರಾರೋಗ್ಯಾದಿ ಸಕಲ ಸಂಪದಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸಿ, ಅವರನ್ನು ಅಭಿನಂದಿಸುತ್ತೇವೆ.

—ಗ್ರಂಥಕರ್ತರು.

## ಈ ಮಹಾ ಸಚ್ಚರಿತ್ರ ಗ್ರಂಥದಲ್ಲಿರುವ ಬ್ಲಾಕು (ಫೋಟೊ) ಗಳಿಗೂ ಹಾಗು ಮುದ್ರಣಕ್ಕೂ ಧನ ಸಹಾಯಮಾಡಿದ ಸನ್ಮಾನ್ಯ

# ಉದಾರ ಮಹಾಶಯರ ಹೆಸರುಗಳು



| ಪುಟ | ಬ್ಲಾಕುಗಳು |
|---|---|
| ೧ | ಶ್ರೀ ಮಹಾಲಿಂಗೋದ್ಭವರಾದ ಜ. ರೇಣುಕಾದಿ ಪಂಚಾಚಾರ್ಯರು<br>ಕಲ್ಲುಹೊಳೆಮಠದ ವೇ. ಕೆಂಪಯ್ಯನವರು ( ಡಿ. ಬಳ್ಳಾರಿ ) |
| ೨ | ಉಜ್ಜಯಿನೀ ಮಹಾಸಂಸ್ಥಾನಮಠ ಮತ್ತು ದೇವಾಲಯ<br>ಕೊಟ್ಟೂರು ಚಾ। ಮ। ಬಾಡದ ವೇ. ವೀರಪ್ಪಯ್ಯನವರು |
| ೪ | ಉ। ಮಹಾಸಂಸ್ಥಾನ ಮುಂದಿನ ಮಹಾದ್ವಾರ ಹಾಗು ದೀಪಸ್ತಂಭ<br>ಹುಬ್ಬಳ್ಳಿ ನರೇಂದ್ರಮಠದ ವೇ. ಗುರುಸಿದ್ಧಪ್ಪಯ್ಯನವರು |
| ೧೧ | ಉ। ಜ। ಪಟ್ಟಾಧ್ಯಕ್ಷ ಶ್ರೀ ಚನ್ನಬಸವ ಶಿವಾಚಾರ್ಯ ಮಹಾಸ್ವಾಮಿಗಳು<br>ಹರಪನಹಳ್ಳಿ ತಾಲೂಕು ತೌಡೂರು ಮಠದ ವೇ. ಸಿದ್ಧಯ್ಯನವರು |
| ೧೩ | ಚಿಕ್ಕವಯಸ್ಸುಳ್ಳ ಉ। ಜ। ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು<br>ಆಲಗಿಲವಾಡದ ಪಾ। ಲಿಂಗನಗೌಡರು, ಬ। ಮಡಿವಾಳಪ್ಪ<br>ವ। ಕೊಟ್ರಪ್ಪ ( ತಾ। ಹರಪನಹಳ್ಳಿ ) |
| ೧೨ | ಕೊಟ್ಟೂರು ಶ್ರೀಗುರು ವೃಷಭೇಶ ಮಹಾಸ್ವಾಮಿ ದರ್ಶನ<br>ಆಲಬೂರು ಪತ್ರೆಪ್ಪನವರು ಸಾ। ಕೊಟ್ಟೂರು |
| ೩೪ | ಪ್ರಾಯದ ವಯಸ್ಸುಳ್ಳ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು<br>ಕಂಪಲಿ ಕಲ್ಲುಗುಡಿ ರಾಚೋಟೆಪ್ಪನವರು ( ಡಿ. ಬಳ್ಳಾರಿ ) |
| ೫೦ | ಶ್ರೀ ಕಾಶೀಕ್ಷೇತ್ರದಲ್ಲಿ ಜ. ಪಂ. ಮಹಾಸಮ್ಮೇಲನದಲ್ಲಿ ಕೂಡಿದವರು<br>ಹಿರೇಹಡಗಲಿ ಗುರುಪಾದದೇವರಮಠದ ಶ್ರೀ ಹಾಲಸ್ವಾಮಿಗಳವರು |
| ೬೫ | ( ಮೈಸೂರ ಸ್ಟೇಟ ) ಬೀರೂರು ೯ ನೇ ವೀರಶೈವ ಮಹಾಸಭಾಕಾಲಕ್ಕೆ ಸೇರಿದ ತ್ರಿಪೀಠಾಧೀಶರು<br>ಚಿಕ್ಕೊಳಚಿಗ್ರಾಮದ ವೀರಶೈವ ಮಂಡಲಿಯವರು ( ತಾ। ಹರಪನಹಳ್ಳಿ ) |
| ೭೪ | ಮಹಾತಪೋನಿಧಿಗಳಾದ ಉ। ಜ। ಸಿದ್ಧಲಿಂಗ ಸ್ವಾಮಿಗಳು<br>ಹೊಳಲು ಹಿರೇಮಠದ (ವೈದ್ಯ ಪಂಡಿತ) ವೇ. ಚನ್ನಬಸವಾರ್ಯರು |
| ೯೯ | ಪುಸ್ತಕ ಹಿಡಿದು ನಿಂತಿರುವ ಉ। ಜ। ಸಿದ್ಧಲಿಂಗ ಸ್ವಾಮಿಗಳು<br>ಬೆಟಗೇರಿ ಬೇಲೇರಿ ಸಂಗನಬಸಪ್ಪನವರು |

೧೦೭ ಬುಕ್ಕಾಂಬುಧಿ ಗಿರಿಯ ಗುಹೆಯಲ್ಲಿ ಉಗ್ರ ತಪಸ್ಸನ್ನಾಚರಿಸುವ
ಉಜ್ಜಯಿನೀ ಸಿದ್ಧಲಿಂಗ ಮಹಾಸ್ವಾಮಿಗಳು
ಶ್ರೀಯುತ ಕಲ್ಲಹಳ್ಳಿ ಜಿ. ಚನ್ನಬಸಪ್ಪನವರು, ಸಬ್ ಇನಸ್ಪೆಕ್ಟರ,
( ಕ್ಯಾಂಪ ಹರಪನಹಳ್ಳಿ )

೧೨೦ ಉ। ಸಿದ್ಧಲಿಂಗ ಸ್ವಾಮಿಗಳು ರಂಭಾಪುರೀ ಮಹಾಸ್ವಾಮಿಗಳವರಿಗೆ
ಸುವರ್ಣರತ್ನಖಚಿತಕಿರೀಟ ಧಾರಣಮಾಡುತ್ತಿರುವದು
ಹಿರೇಹಡಗಲಿ ಎಸ್. ಎಂ. ಮಲ್ಲಪ್ಪನವರು ( ಡಿ. ಬಳ್ಳಾರಿ )

೧೩೫ ಉ। ಸಿ। ಸ್ವಾಮಿಗಳು, ಕೇದಾರಪೀಠದ ಪಟ್ಟ ಹಾಗು ಚರಪಟ್ಟದ ಸ್ವಾಮಿಗಳು
ಕಂಪಲಿ ತೆಗ್ಗಿನಮಠದ ಶ್ರೀ ಪಟ್ಟಾಧ್ಯಕ್ಷ ಕೊಟ್ಟೂರು ಸ್ವಾಮಿಗಳು

೧೩೭ ಉ। ಮಹಾಸನ್ನಿಧಿಯಲ್ಲಿ ವೀಣಾವಾದನ
ಯಡಗೋಡು ಮಠದ ವೇ. ರುದ್ರಯ್ಯನವರು ( ತಾ। ಹಿರೆಕೆರೂರು )

೧೪೪ ಬಳ್ಳಾರಿಯಲ್ಲಿ ಉ। ಜಗದ್ಗುರುಗಳ ಅಡ್ಡಪಾಲಿಕಿ ಮಹೋತ್ಸವವು
ಲಕ್ಕುಂಡಿ ಪಾಟೀಲ ಫಕೀರಗೌಡರು, ದಲಾಲಿ ಅಂ. ಗದಗ

೧೪೦ ಉ। ಮಹಾಸನ್ನಿಧಿಯಲ್ಲಿ ಪಾಲಿಕೊಪ್ಪದ ಶ್ರೀ ಗಂಗಾಧರ ಸ್ವಾಮಿಗಳು
ಶಿರಹಟ್ಟಿ ಡಬಾಲಿ ಲಿಂಗಂಣನವರು ( ಸಾಂಗಲಿ ಸ್ಟೇಟ )

೧೬೧ ಉ। ಮಹಾಸನ್ನಿಧಿಯಲ್ಲಿ ಹೊಟಗಿ ಶ್ರೀ ಚನ್ನವೀರಸ್ವಾಮಿಗಳು
ಕೊಟ್ಟೂರು ಜವಳೀ ಗುರುಬಸಪ್ಪ ವೀರಪ್ಪನವರು

೧೬೪ ಶ್ರೀ ನಂದೀಶ್ವರನ ಮುಂದೆ ಉ। ಸ್ವಾಮಿಗಳು ನಿಂತಿರುವದು
ಬೂದಗುಂಪಿ ನಾಲ್ಕುತಾಣ್ಯಮಠದ ಶ್ರೀ ಚರಮೂರ್ತಿ ಸ್ವಾಮಿಗಳು



## ಈ ಗ್ರಂಥಕ್ಕೆ ಧನಸಹಾಯ ಮಾಡಿದ ಮಹಾಶಯರು



### ಪ್ರಧಾನ ಪೋಷಕರು ೧೦—೦—೦

ಹಂಚಿನಾಳು ಹಿರೇಮಠದ ವೇ. ರುದ್ರಯ್ಯನವರು
ಹುಬ್ಬಳ್ಳಿ ಪಿ. ಐ. ಹಿರೇಮಠ ಹೈಕೋರ್ಟ ವಕೀಲರು
ರಾಣೆಬೆನ್ನೂರ ಹಿರೇಮಠದ ವೀರಯ್ಯನವರು
ಹಿರೆಹಡಗಲಿ ಜಿ. ಎಂ. ಶಂಭುಲಿಂಗಯ್ಯನವರು
,, ಹರಪನಹಳ್ಳಿ ಕೊಟ್ರಪ್ಪನವರು
ಕೊಟ್ಟೂರು ಭದ್ರಶೆಟ್ಟಿ ಅಜ್ಜಪ್ಪನವರು
,, ಕೆ. ಬಸವಲಿಂಗನಗೌಡರು
,, ಕಣಕುಪ್ಪಿ ಅಜ್ಜಪ್ಪನವರು
ಕೊಪ್ಪಳ ಗಡಾದಶೆಟ್ರ ಬಸಪ್ಪನವರು
ಕಾಟೇನಹಳ್ಳಿ ನೆಲವಿಗಿ ಶಾಂತವೀರಪ್ಪನವರು
ಕಲ್ಲುಹೊಳೆ ಎಂ. ಬಸವಮ್ಮನವರು
ಹರಪನಹಳ್ಳಿ ಪಾಟೀಲ ಬೆಟ್ಟನಗೌಡರು
ಉತ್ತಂಗಿ ಗುಡಿಕೋಟಿ ಕರಿಬಸಪ್ಪನವರು
ಮೋರಿಗೇರಿ ಬಣಜಿಗರ ವೀರಭದ್ರಪ್ಪನವರು
ಕತ್ತಿಬೆನ್ನೂರು ಹಿ। ಹ। ಹೊಸಮನೆ ಗೌರಮ್ಮನವರು
ಕಂಪಲಿ ಕಂಬಿ ಚಿಕ್ಕಮ್ಮನವರು
ಬಳ್ಳಾರಿ ಪಾವಡಶೆಟ್ಟಿ ಮಲ್ಲಿಕಾರ್ಜುನಪ್ಪನವರು
,, ಬಳೀ ವೀರಭದ್ರಪ್ಪ ಆ್ಯಂಡ್ ಸನ್ಸ ಇವರು

### ಪೋಷಕರು ೫—೦—೦

ಹುಬ್ಬಳ್ಳಿ ಹನ್ನೆರಡು ಮಠದ ಶ್ರೀ ಷ. ಚರಪಟ್ಟಾಧ್ಯಕ್ಷರು
ತರೀಕೆರೆ ಹಿರೇಮಠದ ಶ್ರೀ ಚರ. ಚಂದ್ರಶೇಖರಸ್ವಾಮಿಗಳು
ಬ್ಯಾಹಟ್ಟಿ ಹಿರೇಮಠದ ಶ್ರೀ ಪಟ್ಟದ ಅನ್ನದಾನಸ್ವಾಮಿಗಳು
ಹೊಳಲಗುಂದಿ ಶಿಲಾಮಠಾಧ್ಯಕ್ಷ ಶ್ರೀ ಪಟ್ಟದ ಸ್ವಾಮಿಗಳು
ಸ್ವಾಗಿ ಪುರವರ್ಗಮಠದ ಶ್ರೀ ಪಟ್ಟದ ಸಿದ್ಧವೀರಸ್ವಾಮಿಗಳು
ಮಾನಿಹಳ್ಳಿ ಪುರವರ್ಗಮಠದ ಶ್ರೀ ಪಟ್ಟದ ಮಳೀಸ್ವಾಮಿಗಳು

| | |
|---|---|
| ಹೊಳಗುಂದಿ | ಉಜ್ಜವಡೆಯರಮಠದ ಶ್ರೀ ಪಟ್ಟದ ಸಿದ್ಧಲಿಂಗಸ್ವಾಮಿಗಳು |
| ನೀಲಗುಂದ | ಹಿರೇಮಠದ ಶ್ರೀ ಪಟ್ಟದ ವಿರೂಪಾಕ್ಷಸ್ವಾಮಿಗಳು |
| ಕೊಟ್ಟೂರು | ಪ್ರಭುವಡೆಯರಮಠದ ವೇ. ಮರುಳಾರಾಧ್ಯರು |
| ,, | ತೂಲಹಳ್ಳಿಶೆಟ್ರ ಚನ್ನಬಸಪ್ಪನವರು |
| ,, | ಊಲವತ್ತಿಶೆಟ್ರ ಸಿದ್ಧರಾಮಪ್ಪನವರು |
| ,, | ಬಾಗಲಕೋಟಿ ಬಿ. ಮಹಾಲಿಂಗಪ್ಪನವರು |
| ,, | ಜವಳಿ ಗುರುಲಿಂಗಪ್ಪನವರು |
| ಹರಪನಹಳ್ಳಿ | ಗು। ಮ। ನೀಲಕಂಠಶಾಸ್ತ್ರಿಗಳು |
| ,, | ಎಂ. ಪ್ರಭಯ್ಯನವರು, ರೆವಿನ್ಯೂ ಇನಸ್ಪೆಕ್ಟರ |
| ,, | ಜೆ. ವೀರಪ್ಪನವರು ಡಿಟೊ |
| ,, | ಹಾವೇರಿ ಚನ್ನಬಸಪ್ಪನವರು |
| ಕಂಪ್ಲಿ | ಕಲ್ಲಗುಡಿ ಕರಬಸಪ್ಪನವರು |
| ,, | ನೀಲಗಾರ ಸಂಗಯ್ಯನವರು |
| ,, | ಬೂದಗುಂಪಿ ಸಂಗಯ್ಯನವರು |
| ,, | ಹುಚಪ್ಪ ,, ದೊಡಬಸಪ್ಪನವರು |
| ಹೊಸಪೇಟೆ | ಮೈಸೂರು ಸಿದ್ಧಯ್ಯನವರು, ವೈದ್ಯಪಂಡಿತ |
| ,, | ವಸ್ತ್ರದ ಹಂಪಯ್ಯನವರು |
| ಹಿರೆಹಡಗಲಿ | ಶಬ್ದಮಣಿಮಠದ ಕೊಟ್ರಯ್ಯನವರು |
| ,, | ಕೌಲೂರು ಲಿಂ. ಮ. ತೋಟಯ್ಯನವರು |
| ,, | ಎಂ. ಪಿ. ಎಂ ಬಸವನಗೌಡರು |
| ,, | ,, ಸಿದ್ಧಲಿಂಗನಗೌಡರು |
| ,, | ಮಾ. ಮ. ದೊಡ್ವೀರಗೌಡ್ರ ಬಸವನಗೌಡರು |
| ,, | ,, ಅಜ್ಜಪ್ಪಯ್ಯನವರು |
| ,, | ಹಮ್ಮಿಗಿ ವಿರೂಪಾಕ್ಷಯ್ಯನವರು |
| ,, | ಅಸುಂಡಿ ಕೊಟ್ರಯ್ಯನವರು |
| ,, | ಹಡಗಲಿ ಮಾಸ್ತರ ಸಂಗಯ್ಯನವರು |
| ,, | ಸಾಮಂತ್ರಿ ನಾಗಪ್ಪನವರು |
| ,, | ಕೊಂಪಿ ವೀರಣ್ಣಪ್ಪನವರು |
| ,, | ಆಲೂರು ದೊಡ್ಡಕೊಟ್ರಪ್ಪನವರು |
| ,, | ಕರ್ಜಿಗಿ ಶಿವಪ್ಪನವರು |
| ,, | ಕವುಟೆ ಹಾಲಪ್ಪನವರು |
| ,, | ಜ್ಯೋತಿ ಕುರುವತ್ತೆಪ್ಪನವರು |

,, ದಂಬಳದ ಫಕ್ಕೀರಪ್ಪನವರು
,, ಹಿರೆಕೊಳಚಿ ಹತ್ತಿ ವಿರುಪಪ್ಪನವರು
,, ಭಾವಿಹಳ್ಳಿ ಪವಾಡಿ ಸಣ್ಣವೀರಪ್ಪನವರು
ಹು. ಹಡಗಲಿ ಪಾಟೀಲ ಲಿಂಗನಗೌಡರು
,, ಸಪ್ಪಿನ ಚಿನ್ನಪ್ಪನವರು
,, ,, ಮಲ್ಲಪ್ಪನವರು
ನೋರಿಗೇರಿ ಪಲ್ಲಾಗಟ್ಟಿ ಲೋಕಪ್ಪ, ಚಿಂಪಿಗರ ವೀರಬಸಪ್ಪ, ಇಟ್ಟಗಿ ಚಿಕ್ಕಪ್ಪ,
,, ಬಾವಿ ಚಿಟ್ಟಪ್ಪ, ಬನ್ನಿಕಲ್ಲು ಇ। ಭೀಮಸೇನಪ್ಪನವರು
ಉತ್ತಂಗಿ ಕಬ್ಬಿಣಕಂಥಿಮಠದ ಬಸವಯ್ಯನವರು
ಮಾಗಳ ಪಾಟೀಲ ಬಿ. ವಿರುಪನಗೌಡ್ರು, ಯಳಮಾಲೆ ಕೊಟ್ರಪ್ಪ
ಹೊಳಗುಂದಿ ಪಾಟೀಲ ಗುರುಬಸವನಗೌಡರು
ಮಾ। ಮುಸಲವಾಡ ಗದಗಿನ ಶಾಂತವೀರಪ್ಪನವರು
ಹಾವೇರಿ ನಡುವಿನಮಠದ ವೇ. ಚನ್ನಬಸಯ್ಯ, ಛತ್ರದಮಾಸ್ತರ
,, ದೊಡಬಸಯ್ಯ, ಕರಿಸಿದ್ಧೇವರಮಠದ ಸಿದ್ಧಯ್ಯ, ಹಂಚಿನಾಳ
,, ಸಿದ್ಧರಾಮಪ್ಪ, ಸಾ। ಸಿದ್ಧಪ್ಪ ಮುಂತಾದವರು
ರಾಣೆಬೆನ್ನೂರು ಅಜ್ಜಪಡೆಯರಮಠದ ರೇವಣಯ್ಯ, ಷಡಕ್ಷರಿಮಠದ ಬಸವಂಣೆಯ್ಯ,
,, ಗದ್ದುಗೆಮಠದ ಸೋಮಯ್ಯ, ಬಣಗಾರ ಸಿದ್ಧಪ್ಪನವರು
ಹುಬ್ಬಳ್ಳಿ ನಂದಿಕೇಶಮಠದ ವೇ. ವಿರೂಪಾಕ್ಷಯ್ಯ, ಶಾಸ್ತ್ರಮಠದ
,, ಬಸವಣ್ಣೆಯ್ಯ, ಕುಸುಗಲ್ಲುಮಠದ ಚನ್ನಯ್ಯ, ಬಿ. ಎಸ್.
,, ಪಾಟೀಲ (ಕೆರಿಮನಿ) ವಕೀಲ, ಕೆ. ಎಸ್. ಪಾಟೀಲ (ಹರಕುಣಿ)
,, ವಕೀಲ, ಸಂಶುದ್ಧಿ ದುಂಡಪ್ಪ ಮುಂತಾದವರು
ಧಾರವಾಡ ಎಚ್. ಎಸ್. ಶಿವಲಿಂಗಶಾಸ್ತ್ರಿಗಳು, ( ಸಂಪಾದಕರು— ಧರ್ಮ ತರಂಗಿಣಿ, ಕ. ಟಾಯಿಮ್ಸ )
ಗದಗ ರಾಚಯ್ಯನವರ ವೇ. ಚನಬಸಯ್ಯನವರು ವಕೀಲರು,
ಗದಗ ಮುಧೋಳ ವೀರಭದ್ರಪ್ಪ, ಕಂದಗಲ್ಲು ಈಶ್ವರಪ್ಪ
ಬೆಂಗಳೂರು ಜಿ. ಎಸ್. ಮಲ್ಲಿಕಾರ್ಜುನಪ್ಪನವರು
,, ಸಿ. ಸಂಗಯ್ಯನವರು, ( ವೀರಶೈವ ಪತ್ರಿಕಾ ಸಂಪಾದಕರು )
ಸೊಲ್ಲಾಪುರ ಭಾಗೀರಥಿಬಾಯಿಯವರು ಕಟಾಪ
ಅಣ್ಣಿಗೇರಿ ಹುಬ್ಬಳ್ಳಿ ವೀರಪ್ಪನವರು
ಶಲವಡಿ ಪಾಟೀಲ ಬಸವನಗೌಡರು
ಜಾಲವಾಡಿಗಿ ಮಾನಿಹಳ್ಳಿಮಠದ ಪಾಟೀಲ ಕಪ್ಪತ್ತಗೌಡರು
ಮುಂಡವಾಡ ಪಾಟೀಲ ಸಂಗನಗೌಡರು

| | |
|---|---|
| ತಾಳೂರು | ಚಿಳೂಡಿಮಠದ ವೀರಯ್ಯನವರು |
| ಚಿಂತಕುಂಟಿ | ರುಮಾಲಮಠದ ನಾಗಮ್ಮಾ |
| ಶೆಟ್ಟಿಕೇರಿ | ಪಾಟೀಲ ಹನುಮಂತಗೌಡ, ಪ್ರೊ। ಪಾ। ಶಿವನಗೌಡ |
| ಬೆಣ್ಣಿಹಳ್ಳಿ | ತಲವಾಗಲಮಠದ ಕೊಟ್ರಯ್ಯನವರು |

ಈ ಮೇಲೆ ಕಾಣಿಸಿದ ಉದಾರ ಮಹಾಶಯರಿಗೆ ಶ್ರೀ ಪರಮಾತ್ಮನು ಆಯು ರಾರೋಗ್ಯ ಭಾಗ್ಯಾದಿ ಸಕಲ ಸಂಪದಗಳನ್ನಿತ್ತು ಕಾಪಾಡಲೆಂದು ಹಾರೈಸುತ್ತೇನೆ.

ಗ್ರಂಥಕರ್ತರು



ಹಿರೇಹಡಗಲಿ ಪುರಾಣಿಕಮಠದ

# ಶ್ರೀ ಜಗದ್ಗುರು ಗ್ರಂಥಮಾಲ[illegible]



| | | | |
|---|---|---|---|
| ೧ | ಶ್ರೀ ಸಿದ್ಧಲಿ[illegible] ವಿಜಯ .... | ಬೆಲೆ ರೂ. | ೨—೮—೦ |
| ೨ | ಶ್ರೀ ಹಾಲೇಶ ಮಹಿಮಾಮೃತ .... | ,, | ೧—೦—೦ |
| ೩ | ಮಂಗಲಸ್ತುತಿ ಮಂಜರಿ .... .... | ,, | ೦—೮—೨ |
| ೪ | ಶಿವಾರ್ಚನ ಪದ್ಧತಿ .... .... | ,, | ೦—೪—೦ |
| ೫ | ಸದ್ಗುರು ಬೋಧ .... .... | ,, | [illegible]—೨—೦ |

ಈ ಪುಸ್ತಕಗಳು ಕೆಳಗಿನ ವಿಳಾಸಗಳಲ್ಲಿ ದೊರೆಯುವವು—

ಪಿ. ಎಮ್. ಮರುಳಾರಾಧ್ಯರು, ಕೊಟ್ಟೂರು.

ಪುರಾಣಿಕಮಠದ ಶಿವಾನಂದಾರ್ಯ ಹಿರೇಹಡಗಲಿ,

( ಡಿ. ಬಳ್ಳಾರಿ. )

ಒಂದು ರೂಪಾಯಿಗಿಂತ ಕಡಿಮೆ ವ್ಹಿ. ಪಿ. ಯಿಂದ ಕಳಿಸಲಾಗುವದಿಲ್ಲ.

ಈ ಗ್ರಂಥವನ್ನು ಎಸ್. ಎಲ್. ವೀಜೇಕರ, ಗದಗ ಇವರು ತಮ್ಮ ಶ್ರೀ ಶಿವಾನಂದ ಮುದ್ರಣಾಲಯದಲ್ಲಿ ಮುದ್ರಿಸಿದರು; ಮತ್ತು ಹಿರೇಹಡಗಲಿ ಪುರಾಣಿಕ ಮಠದ ವೇ|| ವಿರೂಪಾಕ್ಷಶಾಸ್ತ್ರಿಗಳು ತಮ್ಮ ಮಠದಲ್ಲಿ ಪ್ರಸಿದ್ಧಪಡಿಸಿದರು.